# ಪಂಚಾಯತ್ ಜಮಾಬಂದಿಯ ಸಾಮಾಜಿಕ ಆಯಾಮಗಳು

## (ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ)

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ರಾಜ್ಯಶಾಸ್ತ್ರ ವಿಷಯದಲ್ಲಿ ಸಾದರಪಡಿಸಿದ ಮಹಾಪ್ರಬಂಧ)


ಸಂಶೋಧಕರು

ಎಸ್.ಎ.ಗೋವರ್ಧನ

ಮಾರ್ಗದರ್ಶಕರು

ಡಾ.ಎ.ಶ್ರೀಧರ

ಸಹ ಪ್ರಾಧ್ಯಾಪಕರು





ಅಭಿವೃದ್ಧಿ ಅಧ್ಯಯನ ವಿಭಾಗ

ಸಮಾಜ ವಿಜ್ಞಾನಗಳ ನಿಕಾಯ

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ- ೫೮೩ ೨೭೬

೨೦೧೬




# ಪಂಚಾಯತ್ ಜಮಾಬಂದಿಯ ಸಾಮಾಜಿಕ ಆಯಾಮಗಳು

## (ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ)

(ಪಿಎಚ್.ಡಿ. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ರಾಜ್ಯಶಾಸ್ತ್ರ ವಿಷಯದಲ್ಲಿ ಸಾದರಪಡಿಸಿದ ಮಹಾಪ್ರಬಂಧ)



ಸಂಶೋಧಕರು

**ಎಸ್.ಎ.ಗೋವರ್ಧನ**

ಮಾರ್ಗದರ್ಶಕರು

**ಡಾ.ಎ.ಶ್ರೀಧರ**

ಸಹ ಪ್ರಾಧ್ಯಾಪಕರು




ಅಭಿವೃದ್ಧಿ ಅಧ್ಯಯನ ವಿಭಾಗ
ಸಮಾಜವಿಜ್ಞಾನಗಳ ನಿಕಾಯ
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

೨೦೧೬

## ಮಾರ್ಗದರ್ಶಕರ ದೃಢೀಕರಣ ಪತ್ರ

**ಎಸ್.ಎ.ಗೋವರ್ಧನ** ಇವರು ಪಿಎಚ್.ಡಿ.ಪದವಿಗಾಗಿ ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ **ಪಂಚಾಯತ್ ಜಮಾಬಂದಿಯ ಸಾಮಾಜಿಕ ಆಯಾಮಗಳು(ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ)** ಎಂಬ ಈ ಮಹಾಪ್ರಬಂಧವನ್ನು ಕನ್ನಡ ವಿಶ್ವವಿದ್ಯಾಲಯದ **ಅಭಿವೃದ್ಧಿ ಅಧ್ಯಯನ ವಿಭಾಗಕ್ಕೆ** ಸಲ್ಲಿಸುತ್ತಿದ್ದಾರೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಈ ಮೂಲಕ ದೃಢೀಕರಿಸಲಾಗಿದೆ.

ಮಾರ್ಗದರ್ಶಕರು

**ಡಾ.ಎ.ಶ್ರೀಧರ**
ಸಹ ಪ್ರಾಧ್ಯಾಪಕರು
**ಅಭಿವೃದ್ಧಿ ಅಧ್ಯಯನ ವಿಭಾಗ**
ಕನ್ನಡ ವಿಶ್ವವಿದ್ಯಾಲಯ, ಹಂಪಿ
ವಿದ್ಯಾರಣ್ಯ ೫೮೩ ೨೭೬

**ಸ್ಥಳ:**
**ದಿನಾಂಕ:**

# ಸಂಶೋಧಕರ ಘೋಷಣಾ ಪತ್ರ

**ಪಂಚಾಯತ್ ಜಮಾಬಂದಿಯ ಸಾಮಾಜಿಕ ಆಯಾಮಗಳು(ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ)** ಎಂಬ ಈ ಮಹಾಪ್ರಬಂಧವನ್ನು ಪಿಎಚ್.ಡಿ.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯದ, ಅಭಿವೃದ್ಧಿ ಅಧ್ಯಯನ ವಿಭಾಗದ, ಸಹ ಪ್ರಾಧ್ಯಾಪಕರಾದ **ಡಾ.ಎ.ಶ್ರೀಧರ** ಇವರ ಮಾರ್ಗದರ್ಶನದಲ್ಲಿ ಸಿದ್ಧಪಡಿಸಲಾಗಿದೆ. ಪ್ರಸ್ತುತ ಮಹಾಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೇ ಉದ್ದೇಶಗಳಿಗೆ ಬಳಸಿಕೊಂಡಿಲ್ಲ ವೆಂದು ಈ ಮೂಲಕ ಘೋಷಿಸುತ್ತೇನೆ.

ಸಂಶೋಧಕರು

S. A. Govardhana

**ಎಸ್.ಎ.ಗೋವರ್ಧನ**

ಪಿಎಚ್.ಡಿ.ಸಂಶೋಧನ ವಿದ್ಯಾರ್ಥಿ

**ಅಭಿವೃದ್ಧಿ ಅಧ್ಯಯನ ವಿಭಾಗ**

ಕನ್ನಡ ವಿಶ್ವವಿದ್ಯಾಲಯ, ಹಂಪಿ

ವಿದ್ಯಾರಣ್ಯ ೫೮೩ ೨೭೬

ಸ್ಥಳ : ವಿದ್ಯಾರಣ್ಯ

ದಿನಾಂಕ : 15/09/2016

# ಪರಿವಿಡಿ

# ಅಧ್ಯಾಯ ಒಂದು

## ಪ್ರಸ್ತಾವನೆ

೧.೧. ಅಧ್ಯಯನದ ಸಮಸ್ಯೀಕರಣ

೧.೨. ಅಧ್ಯಯನದ ಉದ್ದೇಶ

೧.೩. ಅಧ್ಯಯನದ ವಿಧಾನ

೧.೪. ಅಧ್ಯಯನದ ವ್ಯಾಪ್ತಿ

೧.೫. ಅಧ್ಯಯನದ ಮಹತ್ವ

೧.೬. ಅಧ್ಯಯನದ ವಿನ್ಯಾಸ

# ಅಧ್ಯಾಯ ಒಂದು

# ಪ್ರಸ್ತಾವನೆ

ಪಂಚಾಯತ್‌ರಾಜ್ ವ್ಯವಸ್ಥೆಯಲ್ಲಿ ಜಮಾಬಂದಿಯ ಸಾಮಾಜಿಕ ಆಯಾಮಗಳನ್ನು ಅಧ್ಯಯನ ಮಾಡುವುದು ಈ ಮಹಾಪ್ರಬಂಧದ ಮುಖ್ಯ ಉದ್ದೇಶವಾಗಿದೆ. ಗ್ರಾಮ ಪಂಚಾಯಿತಿಯ ವ್ಯಾಪ್ತಿಯಲ್ಲಿ ಜಮಾಬಂದಿ ಕಾರ್ಯವು ಇಡೀ ಪಂಚಾಯತ್ ವ್ಯವಸ್ಥೆಯನ್ನು ಪಾರದರ್ಶಕವಾಗಿರ ಬೇಕು. ಅದರ ಜೊತೆಗೆ ತಳಮಟ್ಟದ ಪ್ರಜಾಪ್ರಭುತ್ವ ಉತ್ತಮಗೊಳ್ಳಬೇಕೆಂಬ ಆಶಯ ಇದೆ. ಹಾಗಾಗಿ ಪ್ರಸ್ತುತ ಅಧ್ಯಯನ ಪ್ರಾಮುಖ್ಯತೆ ಪಡೆದುಕೊಂಡಿದೆ. ಗ್ರಾಮ ಪಂಚಾಯಿತಿಯ ವ್ಯಾಪ್ತಿಯಲ್ಲಿ ಪ್ರತಿವರ್ಷ ಆಗಸ್ಟ್ ೧೬ರಿಂದ ಸೆಪ್ಟೆಂಬರ್ ೧೫ರವರೆಗೆ ನಡೆಸುವ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಅನುಷ್ಠಾನ ವಿಧಾನಗಳನ್ನು ತಿಳಿಯುವುದು ಹಾಗೂ ಈ ಗ್ರಾಮಸಭೆಯ ಜಾರಿಗೊಳಿಸುವಲ್ಲಿ ಎದುರಾಗುವ ಸಮಸ್ಯೆಗಳನ್ನು ಗುರುತಿಸುವುದು ಪ್ರಮುಖ ಆಶಯವಾಗಿದೆ. ಸಾಮಾಜಿಕ ಜಮಾಬಂದಿಯನ್ನು' ಜಮಾಬಂದಿಯೆಂದು ಅಧ್ಯಯನದಲ್ಲಿ ಬಳಸಲಾಗಿದೆ. ಗ್ರಾಮಪಂಚಾಯಿತಿಯನ್ನು ಪಂಚಾಯತ್ ಎಂದು' ಅಧ್ಯಯನದಲ್ಲಿ ಬಳಿಸಲಾಗಿದೆ.

ಭಾರತ ಸರ್ಕಾರ ವ್ಯವಸ್ಥೆಯು ಪ್ರಜಾಪ್ರಭುತ್ವ ಸಿದ್ಧಾಂತಗಳಿಂದ ಕೂಡಿರುವುದಗಿದೆ. ಜತಗೆ ಒಕ್ಕೂಟ ವ್ಯವಸ್ಥೆಯನ್ನು ಹೊಂದುವುದರ ಮೂಲಕ ಕೇಂದ್ರ ಸರ್ಕಾರ, ರಾಜ್ಯಸರ್ಕಾರ ಮತ್ತು ಸ್ಥಳೀಯ ಸಕಾರಗಳಲ್ಲಿ ಅಧಿಕಾರದ ಹಂಚುವಿಕೆ ಇದೆ. ತಳಮಟ್ಟದ ಸ್ಥಳೀಯ ಪ್ರಜಾಪ್ರಭುತ್ವ ಬಲಯುತಗೊಂಡರೆ ದೇಶದ ಪ್ರಜಾಪ್ರಭುತ್ವ ಗಟ್ಟಿಗೊಳ್ಳುತ್ತದೆ ಎಂಬ ಆಶಯ ಇದೆ. ಹಾಗಾಗಿ ಜಮಾಬಂದಿ ಕಾರ್ಯಕ್ರಮ ಆಯೋಜಿಸಿದೆ. ಈ ಪ್ರಜಾಸತ್ತಾತ್ಮಕ ಸರ್ಕಾರಗಳ ಕರ್ತರು ಪ್ರಜೆಗಳೇ ಆಗಿರುತ್ತಾರೆ. ಪ್ರಜೆಗಳಾಗಿ ಪ್ರಜೆಗಳಿಗೊಸ್ಕರ ಪ್ರಜೆಗಳಿಂದ ಹುಟ್ಟುವುದೇ ಪ್ರಜಾಪ್ರಭುತ್ವ ಈ ಪ್ರಜಾಪ್ರಭುತ್ವದಲ್ಲಿ ಜನತೆ ಅಥವಾ ಸಾರ್ವಜನಿಕರೇ ಪ್ರಮುಖರು ಆಗಿದ್ದಾರೆ. ಪ್ರಜೆಗಳ ಹಕ್ಕುಗಳನ್ನು ಸ್ವತಂತ್ರವನ್ನು, ಬೇಡಿಕೆಗಳನ್ನು ಈಡೇರಿಸಲು ಪ್ರಜಾಪ್ರತಿನಿಧಿಗಳನ್ನು ಆಯ್ಕೆ ಮಾಡುವುದರ ಮೂಲಕ ಕೇಂದ್ರ

ಮತ್ತು ರಾಜ್ಯ ಸರ್ಕಾರಗಳು ಜಾರಿಗೆ ಬರುತ್ತವೆ. ಈ ಸರ್ಕಾರಗಳ ಮುಖ್ಯ ಗುರಿ ತಮ್ಮ ದೇಶದ ರಾಜ್ಯದ ಪ್ರಜೆಗಳಿಗೆ ಉತ್ತಮ ಗೌರವಯುತ ಜೀವನ ನಡೆಸಲು ಬೇಕಾದ ಮೂಲಭೂತ ಸೌಲಭ್ಯಗಳನ್ನು ಒದಗಿಸುವುದು. ಪ್ರಜೆಗಳಿಗೆ ಅವಶ್ಯಕವಾದ ಸೌಲತ್ತುಗಳನ್ನು ನೀಡಲು, ಕೇಂದ್ರ ಸಂಸತ್ತು ಸಭೆ ಸೇರಿ ರಾಷ್ಟ್ರದ ಜನತೆಯ ಅವಶ್ಯಕತೆಗೆ ಬೇಕಾದ ಕಾನೂನುಗಳನ್ನು ಕಾಯ್ದೆಗಳನ್ನು ಬಹುಮತದ ಮೂಲಕ ಜಾರಿಗೆ ತರಲಾಗುತ್ತದೆ. ಅದೇ ರೀತಿಯಲ್ಲಿ ರಾಜ್ಯದಲ್ಲಿ ಶಾಸಕಾಂಗಗಳು ಸಭೆ ಸೇರಿ ರಾಜ್ಯದ ಜನತೆಯ ಹಿತಾಸಕ್ತಿಗೆ ಅನುಕೂಲಕರವಾದ ಕಾನೂನು ಕಾಯ್ದೆಗಳನ್ನು ಜಾರಿಗೆ ತಂದು ಅನುಷ್ಠಾನಗೊಳಿಸುವ ಜವಾಬ್ದಾರಿ ಮತ್ತು ರಕ್ಷಿಸುವ ಕೆಲಸವನ್ನು ಮಾಡುತ್ತವೆ. ಕೇಂದ್ರ ಸರ್ಕಾರದ ತಿದ್ದುಪಡಿ ಕಾಯಿದೆ ಅನ್ವಯವಾಗಿ ರಾಜ್ಯ ಸರ್ಕಾರ ಪಂಚಾಯತ್‌ರಾಜ್ ಸಂಸ್ಥೆಗಳ ಕುರಿತು ವಿಧೇಯಕವನ್ನು ರೂಪಿಸಿದೆ.

## ಸ್ವಾತಂತ್ರ್ಯ ನಂತರ ಅಭಿವೃದ್ಧಿ

ಭಾರತವು ಗ್ರಾಮೀಣ ಪ್ರದೇಶದಿಂದ ಕೂಡಿರುವ ನಾಡು ಆಗಿದೆ. ಗ್ರಾಮೀಣ ಜನ ಜೀವನ ಸ್ವಾತಂತ್ರ್ಯ ನಂತರದ ದಿನಗಳಲ್ಲಿ ತಳಮಟ್ಟದ ಜೀವನ ಸ್ಥಿತಿವು ಇದಿತ್ತು. ೧೯೪೮ ರಿಂದಲೇ ಕೇಂದ್ರ ಸರ್ಕಾರವು ಗ್ರಾಮೀಣ ಅಭಿವೃದ್ಧಿ ಯೋಜನೆಗಳನ್ನು ಅನುಷ್ಠಾನಗೊಳಿಸಲು ಆರಂಭಿಸಿತು. ಆ ಪ್ರಯತ್ನದ ಫಲವಾಗಿ ಜಿಲ್ಲಾ ಹಾಗು ರಾಜ್ಯ ಮಟ್ಟಗಳಲ್ಲಿ ಅಭಿವೃದ್ಧಿ ಸಂಸ್ಥೆಗಳನ್ನು ರಚಿಸಲಾಯಿತು. ಈ ಅಭಿವೃದ್ಧಿ ಸಂಸ್ಥೆಗಳಿಗೆ ಅಧಿಕಾರೇತರ ಪ್ರತಿನಿಧಿಗಳನ್ನು ಮುಖ್ಯಸ್ಥರನ್ನಾಗಿ ನೇಮಿಸಿ ಇವರುಗಳ ಮುಖಾಂತರ ಗ್ರಾಮೀಣ ಅಭಿವೃದ್ಧಿ ಇಲಾಖೆಯು ಕಾರ್ಯನಿರ್ವಹಿಸುವಂತೆ ಅನುವು ಮಾಡಿಕೊಟ್ಟಿತು.

೧೯೫೨ರಲ್ಲಿ ಪ್ರಾರಂಭವಾದ ಸಮುದಾಯ ಅಭಿವೃದ್ಧಿಯ ಯೋಜನೆಯು ಕೆಳಜಾತಿ/ವರ್ಗಗಳ ಸಾಮಾಜಿಕ ಆರ್ಥಿಕ ಹಾಗೂ ರಾಜಕಿಯ ಬದಲಾವಣೆಗಳನ್ನು ತರುವುದಕ್ಕಾಗಿ ಈ ಅಭಿವೃದ್ಧಿ ಕಾರ್ಯಕ್ರಮಗಳು ಜಾರಿಗೆ ತರಲಾಯಿತು. ೧೯೫೬ರ ಒತ್ತಿಗೆ ಸುಮೂರು ೧೧೪ ಬ್ಲಾಕ್‌ಗಳಲ್ಲಿ ಸಮುದಾಯ ಅಭಿವೃದ್ಧಿ ಯೋಜನೆಗಳನ್ನು ಅನುಷ್ಠಾನಗೋಳಿಸಲಾಯಿತು.

ಅ ಅವಧಿಯಲ್ಲಿ ಆರಂಭಗೊಂಡ ಪಂಚವಾರ್ಷಿಯೋಜನೆಗಳಲ್ಲೂ ಗ್ರಾಮೀಣ ಅಭಿವೃದ್ಧಿಗೆ ತಕ್ಕಮಟ್ಟಿನ ಪ್ರಮುಖ್ಯತೆ ಕೊಡಲಾಯಿತು. ಈ ಯೋಜನೆಗಳ ಮುಖ್ಯ ಉದ್ದೇಶ ಜನತೆಯ ಜೀವನಮಟ್ಟ ಸುಧಾರಣೆ ಸಾಮಾಜಿಕ ನ್ಯಾಯ ಮತ್ತು ಅಭಿವೃದ್ಧಿ ಕಾರ್ಯಕ್ರಮಗಳನ್ನು ತಳಮಟ್ಟದ ಜನರಿಗೆ ತಲುಪಿಸುವುದು ಅಗಿತ್ತು. ಜಿಲ್ಲೆಯು ಯೋಜನೆಯ ಮುಖ್ಯ ಕೇಂದ್ರವಾಗಿತ್ತು.

ಮಹಾತ್ಮಗಾಂಧಿಜಿಯವರ ಪ್ರಕಾರ ಗ್ರಾಮಗಳು ಸ್ವಾವಲಂಬಿಯಾಗಬೇಕಾದರೆ ಚುನಾಯಿತ ಸಂಸ್ಥೆಗಳ ಮೂಲಕ ಅವು ಸ್ವಯಂ ಅಧಿಕಾರನ್ನು ಪಡೆಯಬೆಕು ಎಂದು ಅಭಿಪ್ರಾಯ ಪಡುತ್ತಾರೆ.

ಗ್ರಾಮ ಸ್ವರಾಜ್ಯ ಎಂಬ ಪರಿಕಲ್ಪನೆಯನ್ನು ಗಾಂಧಿಜೀಯವರು ರೂಪಿಸಿದರು. ಸಂವಿಧಾನದ ಭಾಗ ನಾಲ್ಕರಲ್ಲಿ ರಾಜ್ಯ ನಿರ್ದೇಶಕ ತತ್ವಗಳ ಮೂಲಕ ನಾಲ್ವತ್ತನೆ ವಿಧಿಯಲ್ಲಿ ಪಂಚಾಯತ್ ರಾಜ್ ಸ್ಥಳೀಯ ಸಂಸ್ಥೆಗಳಿಗೆ ಅವಕಾಶ ಕಲ್ಪಿಸಲಾಯಿತು. ಆ ಮೂಲಕ ಗ್ರಾಮಸ್ವರಾಜ್ಯವನ್ನು ಜಾರಿಗೊಳಿಸುವ ಜವ್ಬಾದಾರಿಯನ್ನು ರಾಜ್ಯಗಳಿಗೆ ವಹಿಸಲಾಯಿತು. ಪಂಚಾಯಿತ್ ರಾಜ್ಯ ಸಂಸ್ಥೆಗಳ ಸ್ಥಾಪನೆ ಕುರಿತು ಸಂವಿಧಾನದಲ್ಲಿ ಉಲ್ಲೇಖಿತವಾದರು ಸಂವಿಧಾನಿಕ ನಿಯಮಾನುಸಾರ ಸ್ಥಳೀಯ ಸಂಸ್ಥೆಗಳು ಸ್ಥಾಪನೆಗೊಳ್ಳಲಿಲ್ಲ. ಅಭಿವೃದ್ಧಿ ಯೋಜನೆಗಳು ಆರಂಭಗೊಂಡರು ಅವುಗಳು ಜಾರಿಗೆ ಬರಲಿಲ್ಲ. ಬ್ಲಾಕ್‌ಮಟ್ಟದಲ್ಲಿ ಸಮುದಾಯ ಅಭಿವೃದ್ಧಿ ಯೋಜನೆಗಳನ್ನು ಜಾರಿಗೆ ತಂದರು ಸಹ ಅದಕ್ಕೆ ಸಾಂಸ್ಥಿಕ ಚೌಕಟ್ಟು ಇರಲಿಲ್ಲ. ಗ್ರಾಮಗಳಲ್ಲಿ ಉಳಿಗಮಾನ್ಯ ಲಕ್ಷಣಗಳು ಸ್ಥಳೀಯ ಸಂಸ್ಥೆಗಳಲ್ಲಿ ಉಳಿದುಕೊಂಡಿದವು. ಸ್ಥಳಿಯ ಸಂಸ್ಥೆಗಳ ಆಡಳಿತಕ್ಕೆ ಒಂದು ಚೌಕಟ್ಟನ್ನು ಸರ್ಕಾರ ಒದಗಿಸಿದರು ಸಹ ಎಲ್ಲಾ ವರ್ಗದ ಜನರ ಭಾಗವಹಿಸುವಿಕೆ ಸಾಧ್ಯವಾಗಲಿಲ್ಲ. ಸಮುದಾಯ ಅಭಿವೃದ್ಧಿ ಕಾರ್ಯಕ್ರಮ ಜನತೆಯನ್ನು ಅಭಿವೃದ್ಧಿ ಪಥದಲ್ಲಿ ಸಾಗುಸುವ ಗುರಿಯನ್ನು ಸಾಧಿಸಲು ಸಾಧ್ಯವಾಗಲಿಲ್ಲ. ಈ ಯೋಜನೆಯ ವಿಫಲತೆಗೆ ಕಾರಣಗಳನ್ನು ತಿಳಿಯಲು ೧೯೫೭ರಲ್ಲಿ ಬಲವಂತ್‌ರಾಯ್ ಮೆಹತಾರವರ ಸಮಿತಿಯನ್ನು ನೇಮಿಸಲಾಯಿತು. ಈ ಸಮಿತಿಯು ಸ್ಥಳೀಯ ಸಂಸ್ಥೆಗಳಿಗೆ ಅಧಿಕಾರ ವಿಕೇಂದ್ರಿಕರಣವಾಗದೆ ಇರುವುದು, ಗ್ರಾಮಪಂಚಾಯಿತಿಗಳು ಸ್ವಶಕ್ತಿಕರಣ ಆಗಿದೆ ಇರುವುದು, ಮತ್ತು ತಳವರ್ಗಗಳಿಗೆ/ತಳಸಮುದಾಯಗಳಿಗೆ ಅಭಿವೃದ್ಧಿಯ ಫಲ ಸಿಗದೆ ಇರುವುದು, ಕಾರಣಗಳೇಂದು ಎಂದು ಸಮಿತಿ ಶಿಫಾರಸ್ಸು ಮಾಡಿತು. ಈ ಸಮೀತಿಯ ಶಿಫಾರಸ್ಸಿನ ಫಲವಾಗಿ ಪಂಚಾಯತ್ ರಾಜ್ ವ್ಯವಸ್ಥೆಗೆ ಹೊಸ ಸ್ವರೂಪ/ ಆಕಾರವು ಸಿಕ್ಕಿತು. ಪಂಚಾಯಿತ್ ರಾಜ್ ಸಂಸ್ಥೆಗಳ ರಚನೆ. ಬೇಕಾದ ಸಂಪನ್ಮೂಲಗಳ ಸರ್ಕಾರಗಳು ನೀಡಬೇಕು. ಅಭಿವೃದ್ಧಿ ಯೋಜನೆಗಳನ್ನು ಅನುಷ್ಠಾನಗೊಳಿಸುವ ಅಧಿಕಾರ ಸ್ಥಳೀಯ ಸಂಸ್ಥೆಗಳಿಗೆ ನೀಡಲಾಯಿತು. ಚುನಾವಣೆಯ ಮೂಲಕ ಸಂಸ್ಥೆಗಳ ಸಂರಚನೆ ಮಾಡಬೇಕು.[೧]

೧೯೫೯ ರಲ್ಲಿ ಕಾಯ್ದೆಯನ್ನು ಕರ್ನಾಟಕ, ಆಂಧ್ರಪ್ರದೇಶ ಮತ್ತು ರಾಜ್ಯಸ್ಥಾನಗಳು ಜಾರಿಗೆ ತಂದವು. ಕರ್ನಾಟಕವು ೧೯೫೯ ರಲ್ಲಿ ಬಲವಂತರಾಯ್ ಮೆಹತ್ ಸಮಿತಿಯ ಶಿಫಾರಸ್ಸಿನ ಹಿನ್ನತೆಯಲ್ಲಿ ಪಂಚಾಯತ್‌ರಾಜ್ ಕಾಯ್ದೆಯನ್ನು ಜಾರಿಗೆ ತರುವುದರ ಮೂಲಕ ವಿಕೇಂದ್ರಿಕರಣ ವ್ಯವಸ್ಥೆಯನ್ನು ಕಾರ್ಯಗತಗೊಳಿಸಿತು. ಎರಡನೇ ಮತ್ತು ಮೂರನೇ ಪಂಚಾವಾರ್ಷಿಕ ಯೋಜನೆಗಳಲ್ಲಿಯು ಗ್ರಾಮಗಳ ಅಭಿವೃದ್ಧಿಗೆ ಹೆಚ್ಚು ಆದ್ಯತೆಯನ್ನು ಕೊಟ್ಟಿತು. ಜಿಲ್ಲಾ ಮಟ್ಟದಲ್ಲಿ ಜನತೆಯ ಸಹಭಾಗಿತ್ವವನ್ನು ಒಳಗೊಂಡಿದ್ದು ಜಿಲ್ಲಾ ಅಭಿವೃದ್ಧಿ ಮಂಡಳಿ ಸ್ಥಾಪನೆ ಮತ್ತು ಮಾನವ ಶಕ್ತಿಯನ್ನು ಬಳಸಲಾಯಿತು. ಅಧಿಕ ಸಂಪನ್ಮೂಲ ಸಂಗ್ರಹ ಜನತೆಯ ಸಹಕಾರ ಸಮುದಾಯಗಳನ್ನು ಗುರುತಿಸುವಂತಹ ಕೆಲಸ ಅಥವಾ ಅವಕಾಶಗಳು ಪಂಚಾವಾರ್ಷಿಕ ಯೋಜನೆಗಳಿಂದ ಸ್ಥಳೀಯ

ಸಂಸ್ಥೆಗಳಿಗೆ ಸಿಕ್ಕವು. ಆದರೆ ಈ ಪ್ರಯತ್ನಗಳು ಗ್ರಾಮದ ಯೋಜನೆಗಳು ಗ್ರಾಮೀಣ ಜನತೆಯ ಹಿತಾಸಕ್ತಿಯ ಪ್ರಕಾರ ಇರಲಿಲ್ಲ. ಸ್ಥಳೀಯ ಸಂಸ್ಥೆಗಳು ಸಂಪನ್ಮೂಲ ಬಳಸುವಲ್ಲಿ ವಿಫಲಗೊಂಡವು. ಜಿಲ್ಲಾ ಯೋಜನೆಗಳು ಗ್ರಾಮ ಮಟ್ಟದಲ್ಲಿ ಜನತೆಗೆ ತಲುಪಲಿಲ್ಲ. ಅಭಿವೃದ್ಧಿಯ ವಿಕೇಂದ್ರಿಕರಣಗೊಳಿಸುವ ಪ್ರಯತ್ನ ಸಫಲವಾಗಲಿಲ್ಲ.

ಕರ್ನಾಟಕ ಸರ್ಕಾರ ವಿ.ವೆಂಕಟಪ್ಪ ಅವರ ಅಧ್ಯಕ್ಷತೆಯಲ್ಲಿ ಸಮಿತಿಯನ್ನು ನೇಮಿಸಲಾಯಿತು. ಈ ಸಮಿತಿಯು ೧೯೫೦ರಲ್ಲಿ ವರದಿಯನ್ನು ಸಲ್ಲಿಸಿತು. ಗುಂಪು ಪಂಚಯತ್ ವ್ಯವಸ್ಥೆಯನ್ನು ರಚಿಸುವಂತೆ ಮತ್ತು ಸ್ಥಳೀಯ ನಾಯಕತ್ವ ಬೆಳೆಸುವುದು, ಹೆಚ್ಚಿನ ಆರ್ಥಿಕ ನೇರವು ನೀಡುವುದು, ತಾಲ್ಲುಕು ಅಭಿವೃದ್ದಿ ಮಂಡಳಗಳನ್ನು ತಾಲ್ಲುಕು ಮಟ್ಟದಲ್ಲಿ ಜಿಲ್ಲ ಅಭಿವೃದ್ಧಿ ಮಂಡಳಿಗಳನ್ನು ಜಿಲ್ಲಾ ಮಟ್ಟದಲ್ಲಿ ರಚಿಸಬೇಕು. ಪರಿಶಿಷ್ಟ ಜಾತಿ ಜನಾಂಗದವರಿಗೆ ಪ್ರಾತಿನಿಥ್ಯ ನೀಡಬೇಕು. ಎಂದು ಸಮಿತಿ ಶಿಫಾರಸ್ಸುಗಳನ್ನು ಸಲ್ಲಿಸಿತು. ಈ ಸಮಿತಿಯ ಶಿಫಾರಸ್ಸಿನ ಅನ್ವಯ ೧೯೫೨ರಲ್ಲಿ ಕರ್ನಾಟಕದಲ್ಲಿ ೧೯೫೨ರಲ್ಲಿ ಮೈಸೂರು ಗ್ರಾಮ ಪಂಚಾಯತ್ ಮತ್ತು ಜಿಲ್ಲಾ ಬೋರ್ಡುಗಳ ಕಾಯ್ದೆಯನ್ನು ರೂಪಿಸಲಾಯಿತು. ಈ ಕಾಯ್ದೆಯಲ್ಲಿ ಗುಂಪು ಪಂಚಾಯಿತ ವ್ಯವಸ್ಥೆ ಸೇರಿದಂತೆ ಜಿಲ್ಲಾ ಅಭಿವೃದ್ಧಿ ಮಂಡಳಿ ಪರೋಕ್ಷ ಚುನಾವಣೆ ಮಾಡುವಂತಹ ವಿಷಯಗಳಲ್ಲಿ ಗೊಂದಲಗಳು ಉಂಟಾಗಿ ಈ ಕಾಯ್ದೆಯು ನೀರಿಕ್ಷಿಸಿದ ಗುರಿ ಸಾಧಿಸಲು ಸಾಧ್ಯವಾಗಲಿಲ್ಲ.[೨]

೧೯೫೩ರಲ್ಲಿ ಡಿ.ಎಲ್. ಚಂದ್ರಶೇಖರಯ್ಯ ಸಮಿತಿಯನ್ನು ನೇಮಿಸಲಾಯಿತು. ೧೯೫೪ರಲ್ಲಿ ಸಮಿತಿಯು ವರದಿಯನ್ನು ಸಲ್ಲಿಸಿತ್ತು. ಮೂರು ಹಂತಗಳಲ್ಲಿ ಪಂಚಾಯತ್ ಸಂಸ್ಥೆಗಳ ರಚನೆ ಸೂಚಿಸಿತ್ತು. ಮಹಿಳೆಯರ ಮತ್ತು ಹಿಂದುಳಿದ ವರ್ಗಗಳ ಪ್ರಾತಿನಿಧ್ಯ ಕುರಿತು ವರದಿಯಲ್ಲಿ ಉಲ್ಲೇಖಿಸಲಾಗಿತ್ತು. ತಾಲ್ಲೂಕು ಬೋರ್ಡುಗಳಿಗೆ ೨/೩ ಸದಸ್ಯರನ್ನು ನೇರವಾಗಿ ೧/೩ ಸದಸ್ಯರ ಪರೋಕ್ಷ ಆಯ್ಕೆ ಮಾಡುವುದಾಗಿ ಜಿಲ್ಲಾ ಬೋರ್ಡುಗಳಿಗೆ ಪರೋಕ್ಷ ಆಯ್ಕೆಯನ್ನು ಮಾಡಬೇಕು ಎಂದು ವರದಿ ಶಿಫಾರಸ್ಸು ನೀಡಿತ್ತು. ಈ ಸಮಿತಿ ಶಿಫಾರಸ್ಸುಗಳ ಫಲವಾಗಿ ೧೯೫೯ರಲ್ಲಿ ಗ್ರಾಮ ಪಂಚಾಯತ್ ಕಾಯ್ದೆಯನ್ನು ಜಾರಿಗೆ ತರಲಾಯಿತು. ಈ ಕಾಯ್ದೆಯು ಜನರ ಭಾಗವಹಿಸುಕೆಯ ಮುಖ್ಯ ಉದ್ದೇಶದಿಂದ ಮೂರು ಹಂತಗಳಲ್ಲಿ ಪಂಚಾಯತ್ ರಾಜ್ ಸಂಸ್ಥೆಗಳನ್ನು ಸ್ಥಾಪಿಸಲಾಯಿತು. ಗ್ರಾಮ ಮಟ್ಟದಲ್ಲಿ ಗ್ರಾಮ ಪಂಚಾಯಿತಿಗಳನ್ನು ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕು ಅಭಿವೃದ್ಧಿ ಮಂಡಳಿ ಮತ್ತು ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಅಭಿವೃದ್ಧಿ ಪರಿಷತ್‌ಗಳನ್ನು ಜಾರಿಗೆ ತರಲಾಯಿತು. ಚುನಾಯಿತ ಪ್ರತಿನಿಧಿಗಳ ಆಯ್ಕೆ ಮಾಡಲು ಕಾಯ್ದೆ ಅವಕಾಶ ಮಾಡಿಕೊಟ್ಟಿತ್ತು.

ಗ್ರಾಮ ಪಂಚಾಯಿತಿಯ ವ್ಯಾಪ್ತಿಯಲ್ಲಿ ೧೫೦೦ ರಿಂದ ೧೦೦೦೦ ಸಾವಿರ ಜನಸಂಖ್ಯೆ ಹೊಂದಿರಬೇಕು. ತಾಲ್ಲೂಕು ಬೋರ್ಡುಗಳಿಗೆ ನೇರ ಚುನಾವಣೆಗಳನ್ನು ನಡೆಸಬೇಕು. ನಾಲ್ಕು

ವರ್ಷದವರೆಗೆ ಅಧಿಕಾರ ಅವಧಿಯನ್ನು ಸಲಹಾ ಮತ್ತು ಮೇಲ್ವಿಚಾರಣಾ ಘಟಕವಾಗಿತು. ಅನುದಾನಗಳಿಗೆ ಕೇಂದ್ರ ಮತ್ತು ರಾಜ್ಯ ಸರ್ಕಾರ ಅವಲಂಬಿಸುವಂತಿತ್ತು. ತಾಲ್ಲೂಕು ಬೋರ್ಡುಗಳು ಗ್ರಾಮ ಪಂಚಾಯಿತಿಗಳ ಆರ್ಥಿಕ ಸಂಪನ್ಮೂಲಗಳ ನಿಯಂತ್ರಣ ಮತ್ತು ನಿರ್ವಹಣಾ ಅಧಿಕಾರವನ್ನು ಹೊಂದ್ದಿದವು. ಈ ಕಾಯ್ದೆಯು ಪಂಚಾಯತ್ ರಾಜ್ ಸಂಸ್ಥೆಗಳಿಗೆ ಅಧಿಕಾರ ನೀಡಿದರು. ಅವುಗಳ ನಿಯಂತ್ರಣ ಮತ್ತು ಮೇಲಿನ ಸಂಸ್ಥೆಗಳಲ್ಲಿ ಅವಲಂಬನೆಯಿಂದ ಈ ಕಾಯ್ದೆಯು ಹೆಚ್ಚು ಪ್ರಗತಿಯನ್ನು ಸಾಧಿಸದೇ ಇರುವುದು ತಿಳಿದುಬರುತ್ತದೆ.

೧೯೬೨ರ ಕೊಂಡಜ್ಜಿ ಬಸಪ್ಪ ಸಮಿತಿಯ ನೇಮಿಸಲಾಯಿತ್ತು ಈ ಸಮಿತಿಯು ೧೯೬೩ರಲ್ಲಿ ಸರ್ಕಾರಕ್ಕೆ ವರದಿ ಸಲ್ಲಿಸಿತು. ಜಿಲ್ಲಾ ಅಭಿವೃದ್ಧಿ ಸಲಹಾ ಸಮಿತಿ ಬದಲು ಜಿಲ್ಲಾ ಪರಿಷತ್ ಸ್ಥಾಪನೆ ಜಿಲ್ಲಾ ಪರಿಷತ್‌ಗಳಿಗೆ ನೇರ ಚುನಾವಣೆ ಜಿಲ್ಲಾ ಮಟ್ಟದಲ್ಲಿ ಕಾರ್ಯಾಂಗ ಘಟಕವನ್ನು ಸ್ಥಾಪಿಸಿ ತಾಲ್ಲೂಕು ಅಭಿವೃದ್ಧಿ ಮಂಡಳಿ ಮತ್ತು ಗ್ರಾಮ ಪಂಚಾಯಿತಿಗಳೊಂದಿಗೆ ಸಾಂಸ್ಥಿಕ ಸಂಬಂಧ ಇರುವಂತೆ ಶಿಫಾರಸ್ಸು ಮಾಡಿತು. ಗ್ರಾಮ ಸಭೆಗಳನ್ನು ನಡೆಸುವಂತೆ, ಜಿಲ್ಲಾ ಪರಿಷತ್, ತಾಲ್ಲೂಕು ಅಭಿವೃದ್ಧಿ ಬೋರ್ಡು ಗ್ರಾಮಸಭೆ ಮತ್ತು ನ್ಯಾಯ ಪಂಚಾಯಿತಿಗಳನ್ನು ಒಳಗೊಡಿದ ಗ್ರಾಮ ಪಂಚಾಯತಿಗಳನ್ನು ಸ್ಥಾಪಿಸುವಂತೆ ಸಮಿತಿ ಸಲಹೆ ನೀಡಿತು. ಈ ಸಮಿತಿಯ ವರದಿಯು ೧೯೬೪ರ ಮೈಸೂರು ಪಂಚಾಯತ್ ರಾಜ್ ಕಾಯ್ದೆಯನ್ನು ಜಾರಿಗೆ ತರುತ್ತದೆ, ಈ ಕಾಯ್ದೆಯಾನುಸಾರವಾಗಿ ಗ್ರಾಮ ಪಂಚಾಯಿತಿ ಸದಸ್ಯರು ಸಂಖ್ಯೆ ಗ್ರಾಮ ಪಂಚಾಯಿತಿಗಳ ಜನಸಂಖ್ಯೆಯನ್ನು ಆಧರಿಸಿ ಇರುವಂತೆ ಹೇಳುತ್ತದೆ. ಕನಿಷ್ಠ ೯ ರಿಂದ ೧೧ ಗರಿಷ್ಠ ೧೫ ಸದಸ್ಯರು ಹೊಂದಬೇಕು. ಗ್ರಾಮಸಭೆಗೆ ಸಂಬಂಧಿಸಿದಂತೆ ಸಮಿತಿ ಶಿಫಾರಸ್ಸುಗಳನ್ನು ಒಪ್ಪಿಕೊಂಡಿತ್ತು. ಗ್ರಾಮ ಪಂಚಾಯಿತಿ ಅಧ್ಯಕ್ಷರ ಮತ್ತು ಉಪಾಧ್ಯಕ್ಷರ ನಿರ್ವಹಿಸಿ ಕಾರ್ಯಗಳನ್ನು ಪರಿಷ್ಕರಿಸಿತ್ತು. ಕಾಯ್ದೆಯಲ್ಲಿರಿಸಲಾಯಿತ್ತು. ಆದರೆ ಈ ಕಾಯ್ದೆಯು ಕಾರಣಾಂತರಗಳಿಂದ ಜಾರಿಗೆ ಬರಲಿಲ್ಲ.[೩]

**೧೯೮೩ರ ಕರ್ನಾಟಕ ಪಂಚಾಯತ್ ಕಾಯ್ದೆ:** ಈ ಕಾಯ್ದೆ ಕರ್ನಾಟಕ ಪಂಚಾಯತ್ ಸಂಸ್ಥೆಗಳ ಅಧಿಕಾರ ಸ್ವರೂಪದಲ್ಲಿ ಬದಲಾವಣೆಗಳು ತರತ್ತದೆ. ಜಿಲ್ಲಾ ಪರಿಷತ್, ತಾಲ್ಲೂಕು ಪಂಚಾಯಿತಿ ಸಮಿತಿಗಳನ್ನು ಮಂಡಲ ಪಂಚಾಯಿತಿ ಮತ್ತು ನ್ಯಾಯ ಪಂಚಾಯಿತಿಗಳನ್ನು ಈ ಕಾಯ್ದೆ ಜಾರಿಗೊಳಿಸುತ್ತದೆ. ಜಿಲ್ಲಾ ಪರಿಷತ್ ಮತ್ತು ಮಂಡಲ ಪಂಚಾಯಿತಿಗಳಿಗೆ ಹೆಚ್ಚಿನ ಅಧಿಕಾರ ನೀಡಲಾಯಿತು. ತಾಲ್ಲೂಕು ಪಂಚಾಯಿತಿ ಸಮಿತಿಯ ಜಿಲ್ಲಾ ಪರಿಷತ್ ಮತ್ತು ಮಂಡಲ ಪಂಚಾಯಿತಿಗಳ ಸಮನ್ವಯ ಸಂಸ್ಥೆಯಾಗಿರುತ್ತದೆ. ಶೇ ೨೫ರಷ್ಟು ಮಹಿಳೆಯರಿಗೆ, ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡದವರಿಗೆ ಜನಸಂಖ್ಯೆಯ ಆಧಾರಿಸಿ ಮೀಸಲಾತಿಯನ್ನು ನೀಡಲಾಯಿತು. ೮ ರಿಂದ ೧೨ ಸಾವಿರ ಗರಿಷ್ಟ ಜನಸಂಖ್ಯೆಯುಳ್ಳ ಗ್ರಾಮಗಳ ಗುಂಪಿನ ವ್ಯಾಪ್ತಿಗೆ ಒಂದು ಮಂಡಲ

ಪಂಚಾಯಿತಿ ರಚಿಸಲಾಯಿತ್ತು. ಪ್ರತಿ ೪೦೦ ಜನಸಂಖ್ಯೆ ಒಬ್ಬ ಸದಸ್ಯರನ್ನು ಆಯ್ಕೆ ಮಾಡಲಾಗುತ್ತಿತು. ಮಂಡಲ ಪಂಚಾಯಿತಿ ವ್ಯಾಪ್ತಿ ೮ ಕಿ.ಮೀ. ವ್ಯಾಪ್ತಿಗೆ ಸಿಮೀತಗೊಳಿಸಲಾಗಿತ್ತು. ಮಂಡಲ ಪಂಚಾಯಿತಿಯ ಅಧ್ಯಕ್ಷರು ಗ್ರಾಮ ಸಭೆಯನ್ನು ಕರೆದು ಅವರು ಅಧ್ಯಕ್ಷತೆಯನ್ನು ವಹಿಸಿಕೊಳ್ಳುತ್ತಿದ್ದರೂ. ಅವರ ಅನೂಪ ಸ್ಥಿತಿಯಲ್ಲಿ ಉಪಾಧ್ಯಕ್ಷರು ಗ್ರಾಮಸಭೆಯ ಅಧ್ಯಕ್ಷತೆಯನ್ನು ಮಂಡಲ ಪಂಚಾಯಿತಿಯ ವ್ಯಾಪ್ತಿಗೆ ನೀಡಿ ಜನತೆಗೆ ಸಿಗುವಂತೆ ಅವಕಾಶ ಮಾಡಿಕೊಡಲಾಗಿತ್ತು.

**೧೯೯೩ರ ಕರ್ನಾಟಕ ಪಂಚಾಯತ್ ಕಾಯ್ದೆ:** ಸಂವಿಧಾನದ ೭೩ನೇ ತಿದ್ದುಪಡಿಯಾನ್ವಯ ೧೯೯೩ರಲ್ಲಿ ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮವನ್ನು ಜಾರಿಗೆ ತರಲಾಯಿತು. ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಪಂಚಾಯಿತಿ ಮಟ್ಟದಲ್ಲಿ ಗ್ರಾಮ ಪಂಚಾಯಿತಿಗಳನ್ನು ಜಾರಿಗೆ ತರಲಾಯಿತು. ಈ ಸ್ಥಳೀಯ ಸಂಸ್ಥೆಗಳಲ್ಲಿ ಮಹಿಳೆಯರಿಗೆ, ಹಿಂದುಳಿದ, ದುರ್ಬಲ ವರ್ಗದವರಿಗೆ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ ಮೀಸಲಿಡಲಾಯಿತು. ಗ್ರಾಮ ಪಂಚಾಯಿತಿಯ ವ್ಯಾಪ್ತಿಯಲ್ಲಿ ೨೯ ವಿಷಯಗಳಿಗೆ ಸಂಬಂಧಿಸಿದಂತೆ ಅಧಿಕಾರ ಮತ್ತು ಆರ್ಥಿಕ ನೇರವನ್ನು ಈ ಕಾಯ್ದೆ ಒದಗಿದಿದೆ.

ಗ್ರಾಮ ಪಂಚಾಯಿತಿಯ ಜನಸಂಖ್ಯೆ ೬೦೦೦ ರಿಂದ ೭೦೦೦ಕ್ಕೆ ಮೀರಬಾರದು. ಈ ನಿರ್ದಿಷ್ಟ ಜನಸಂಖ್ಯೆ ಸೇರಿದ ಗ್ರಾಮಗಳ ಗುಂಪುಗಳನ್ನು ಸೇರಿಸಿಕೊಂಡು ಗ್ರಾಮ ಪಂಚಾಯಿತಿ ರಚನೆಯಾಗುತ್ತದೆ. ೫ ಕಿ.ಮೀ. ವ್ಯಾಪ್ತಿಯಲ್ಲಿರುವ ಪ್ರದೇಶ ಮಿತಿಯನ್ನು ಮೀರದಂತೆ ಇರಬೇಕು. ಪ್ರತಿ ೪೦೦ ಜನಸಂಖ್ಯೆಗೆ ಒಬ್ಬ ಚುನಾಯಿತ ಸದಸ್ಯರ ಆಯ್ಕೆ ಮಾಡಬೇಕು. ಗ್ರಾಮ ಪಂಚಾಯಿತಿ ವ್ಯಾಪ್ತಿಯಲ್ಲಿ ಪರಿಶಿಷ್ಟ ಜಾತಿಗೆ ಶೇ ೧೫ರಷ್ಟು, ಪರಿಶಿಷ್ಟ ಪಂಗಡಗಳಿಗೆ ಶೇ. ೩ರಷ್ಟು ಸ್ಥಾನಗಳನ್ನು ಮೀಸಲಿಡಲಾಗಿದೆ. ಪಂಚಾಯಿತಿಗಳಿಗೆ ೨೯ ಅಧಿಕಾರಿಗಳನ್ನು ಕೊಡಲಾಗಿದೆ. ಗ್ರಾಮ ಪಂಚಾಯಿತಿಗಳಲ್ಲಿ ಸ್ಥಾಯಿ ಸಮಿತಿಗಳ ರಚನೆಗೆ ಅವಕಾಶವಿದೆ.

ಈ ಕಾಯ್ದೆಯು ಗ್ರಾಮಸಭೆಗೆ ಹೆಚ್ಚಿನ ಅಧಿಕಾರ ಮತ್ತು ನಿರ್ವಹಿಸುವ ಕಾರ್ಯಗಳ ಸ್ವತಂತ್ರ ನೀಡಲಾಗಿದೆ. ಪ್ರತಿ ವರ್ಷ ಎರಡು ಬಾರಿ ಗ್ರಾಮ ಸಭೆಗಳನ್ನು ಕರೆಯಲು ಅವಕಾಶವಿದ್ದಿತ್ತು. ಕೆಲವು ಸುಧಾರಣೆಗಳ ನಂತರ ಪ್ರತಿ ವರ್ಷ ಗ್ರಾಮಸಭೆಗಳನ್ನು ಕರೆಯಬೇಕಾಗಿದೆ. ಗ್ರಾಮಸಭೆಯ ಬಗ್ಗೆ ಕಾರ್ಯದರ್ಶಿ ಅಧ್ಯಕ್ಷರೊಡನೆ ಸಮಲೋಚಿಸಿ ಸಭೆಯ ದಿನಾಂಕ, ಸ್ಥಳ ಮತ್ತು ವೇಳೆಯನ್ನು ನಿಗದಿಪಡಿಸಬೇಕು.

೧. ಗ್ರಾಮಸಭೆಯನ್ನು ವರ್ಷಕ್ಕೆ ನಾಲ್ಕು ಬಾರಿ ಕರೆಯಲಾಗುತ್ತದೆ.

೧. ಸಾಮಾನ್ಯ ಗ್ರಾಮಸಭೆ

೨. ವಿಶೇಷ ಗ್ರಾಮಸಭೆ

೩. ತುರ್ತು ಗ್ರಾಮಸಭೆ

## ಗ್ರಾಮಸಭೆಯ ಕಾರ್ಯಗಳು

ಒಂದು ಗ್ರಾಮ ಸಭೆಗೆ ಮತ್ತೊಂದು ಗ್ರಾಮಸಭೆಯ ಅಂತರವನ್ನು ಕಾಪಡಿಕೊಂಡು ಹೋಗಬೇಕು. ಕಾರ್ಯನಿರ್ವಾಹಕ ಅಧಿಕಾರಿ ಗ್ರಾಮಸಭೆಯ ಬಹುದಾಗಿದೆ. ಅಭಿವೃದ್ಧಿ ಯೋಜನೆಗಳನ್ನು ಗ್ರಾಮಸಭೆಯಲ್ಲಿ ರೂಪಿಸುವುದು, ಗ್ರಾಮ ಪಂಚಾಯಿತಿಗಳ ವಾರ್ಷಿಕ ಲೆಕ್ಕಪತ್ರಗಳ ವಿವರಣೆ, ಹಿಂದಿನ ಹಣಕಾಸು ವರ್ಷದ ಆಡಳಿತ ವರದಿ, ವಾರ್ಷಿಕ ಆಯವ್ಯಯ ಲೆಕ್ಕ ಪರಿಶೋಧನೆ ಟಿಪ್ಪಣಿ. ಪ್ರಸ್ತುತ ವರ್ಷದ ಕಾಮಗಾರಿಗಳ ಅನುಮೋದನೆ ಗ್ರಾಮದ ಜನತೆಯಲ್ಲಿ ಏಕತೆ ಹಾಗೂ ಸೌಹಾರ್ದತೆಯನ್ನು ಬೆಳಸಿಕೊಂಡು ಬರುವುದು. ಮೂಲಭೂತ ಸೌಕರ್ಯಗಳ, ಸಮಸ್ಯೆಗಳ ಚರ್ಚಿಸಲಾಗುವುದು. ಅಭಿವೃದ್ಧಿ ಯೋಜನೆಗಳಿಗೆ ಫಲಾನುಭವಿಗಳನ್ನು ಆಯ್ಕೆ ಮಾಡಲಾಗುತ್ತದೆ.[೪]

ರಾಷ್ಟ್ರದ ಒಕ್ಕೂಟ ವ್ಯವಸ್ಥೆಯ ಅಂಗವಾಗಿ ಕೇಂದ್ರದಲ್ಲಿ ಪಂಚಾಯತಿ ಸಂಸ್ಥೆಗಳಿಗೆ ಜಾರಿಗೆ ತಂದ ಕಾಯ್ದೆಗಳನ್ನು ಕರ್ನಾಟಕ ಸರ್ಕಾರವು ಕಾಲಕಾಲಕ್ಕೆ ಪರಿಷ್ಕರಿಸಿ ರಾಜ್ಯದ ಅನುಕೂಲತೆಗೆ ತಕ್ಕಂತೆ ಕಾಯ್ದೆಗಳನ್ನು ಜಾರಿಗೆ ತಂದಿವೆ. ಅದರ ಅಂಗವಾಗಿ ೧೯೫೯ರ ಕಾಯ್ದೆ, ೧೯೮೩ರ ಕಾಯ್ದೆ ಮತ್ತು ೧೯೯೩ರ ಕಾಯ್ದೆನ್ವಯ ಗ್ರಾಮಸಭೆ ಮತ್ತು ಪಂಚಾಯತಿ ಅಧಿಕಾರಗಳ ಕುರಿತಾಗಿ ಕರ್ನಾಟಕ ಸರ್ಕಾರ ಮತ್ತು ಕೇಂದ್ರ ಸರ್ಕಾರ ಹಲವಾರು ವಿದೇಶಿ ಸಂಸ್ಥೆಗಳು, ವಿಶ್ವಸಂಸ್ಥೆಯ ಅಂಗ ಸಂಸ್ಥೆಗಳು, ಸಂಘಸಂಸ್ಥೆಗಳು ಗ್ರಾಮೀಣಾಭಿವೃದ್ಧಿಗಾಗಿ ೫೦ರ ದಶಕದಿಂದಲ್ಲೂ ಹಲವು ಯೋಜನೆಗಳನ್ನು ಜಾರಿಗೆ ತಂದಿವೆ. ಆದರೂ ರಾಷ್ಟ್ರದ ಮತ್ತು ಕರ್ನಾಟಕದ ಗ್ರಾಮೀಣ ಜನರ ಬಡತನ ಸರ್ಕಾರಗಳು ನಿರೀಕ್ಷಿಸಿದ ಗುರಿಯನ್ನು ತಲುಪಲಿಲ್ಲ. ಇದಕ್ಕೆ ಕಾರಣ ಗ್ರಾಮೀಣಾಭಿವೃದ್ಧಿ ಯೋಜನೆಗಳಲ್ಲಿ ಹಣಕಾಸಿನ ಕೊರತೆ ಮತ್ತು ಹಣ ಸೋರಿಕೆಯಾಗುತ್ತಿರುವುದು ಕಂಡುಬಂದಿದೆ. ಆ ಯೋಜನೆಗಳು ಗ್ರಾಮೀಣ ಜನರಿಗೆ ತಿಳಿಯದೇ ಇರುವುದು ಮತ್ತು ಜನತೆಗೆ ತಿಳಿಯದೇ ಗ್ರಾಮೀಣಾಭಿವೃದ್ಧಿಗೆ ಯೋಜನೆಗಳು ಅನುಷ್ಠಾನಗೊಂಡು ಮುಕ್ತಾಯವಾಗಿರುವುದು ಕಂಡುಬಂದಿದೆ. ಈ ಎಲ್ಲಾ ರೀತಿಯ ಸಮಸ್ಯೆಗಳ ನಿವಾರಣೆಗಾಗಿ ಕರ್ನಾಟಕ ಸರ್ಕಾರವು ಗ್ರಾಮಸಭೆಗಳ ಜಾರಿಗೆ ತಂದಿತು. ಜನತೆ ಸೇರಿ ಗ್ರಾಮಪಂಚಾಯಿತಿಯ ಯೋಜನೆಗಳಿಗೆ ಅನುಮೋದನೆ ಪಡೆಯುವುದು. ಯೋಜನಾ ಖರ್ಚುವೆಚ್ಚಗಳ ಕುರಿತು ಸಭೆಯಲ್ಲಿ ಚರ್ಚಿಸಿ ಮತ್ತು ಫಲಾನುಭವಿಗಳನ್ನು ಆಯ್ಕೆ ಮಾಡುವ ಕೆಲಸ ಗ್ರಾಮಸಭೆದಾಗಿತ್ತು. ಆದರೆ ಗ್ರಾಮಸಭೆಗಳು ನಾಮಮಾತ್ರವಾಗಿ ಸಭೆಗಳನ್ನು ನಡೆಸಿದ್ದು ಗ್ರಾಮಸಭೆ ಯಶಸ್ವಿಯಾಗಲಿಲ್ಲ. ನಂತರದಲ್ಲಿ ಜನಾಯೋಜನೆಯನ್ನು ಜಾರಿಗೆ ತರಲಾಯಿತು. ಜನಾ ಯೋಜನೆಯಲ್ಲಿ ಗ್ರಾಮದ ಜನರು ತಮ್ಮ ಸಮಸ್ಯೆಗಳನ್ನು ಬೇಡಿಕೆಗಳನ್ನು ಸಮಸ್ಯೆಗಳ ಆದ್ಯತೆಯಾನುಸಾರವಾಗಿ ಯೋಜನೆ ತಯಾರಿಸುವುದು. ಆದರೆ ಈ ಜನಾಯೋಜನೆಯು ಯಶಸ್ವಿಯಾಗಲಿಲ್ಲ. ಗ್ರಾಮಸಭೆಗಳಲ್ಲಿ ಆಗಲಿ ಜನಾಯೋಜನೆಗಳಲ್ಲಿ ಆಗಲಿ ಸಾರ್ವಜನಿಕರಿಗೆ

ಸೀಮಿತವಾದ ಅಧಿಕಾರ ಇದ್ದಿತ್ತು. ಈ ಮೇಲೆ ಚರ್ಚಿಸಿದ ಸಮಸ್ಯೆಗಳನ್ನು ಮತ್ತು ಗ್ರಾಮಸಭೆ ಜನಾಯೋಜನೆ ವಿಫಲತೆಗಳನ್ನು ಗಮನದಲ್ಲಿಟ್ಟು ಕರ್ನಾಟಕ ಸರ್ಕಾರವು "೨೦೦೮ರಲ್ಲಿ ಕರ್ನಾಟಕ ಪಂಚಾಯಿತಿ ಜಮಾಬಂದಿ ಅಧಿನಿಯಮ"ವನ್ನು ಜಾರಿಗೆ ತರಲಾಯಿತು. ಈ ಅಧಿನಿಯಮ ೨೦೦೫ರಲ್ಲಿ ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಗ್ರಾಮಸಭೆಯಾಗಿ ಜಾರಿಗೆ ಬಂದಿತ್ತು.

ಸಾಮಾಜಿಕ ಜಮಾಬಂದಿ ಮುಖ್ಯ ಉದ್ದೇಶ ಗ್ರಾಮಪಂಚಾಯಿತಿಯ ಗ್ರಾಮಸಭೆಗಳಲ್ಲಿ ಜನರಿಗೆ, ಯೋಜನೆಗಳ ಗುಣಮಟ್ಟ ಕುರಿತು ಕಾಮಗಾರಿಗೆ ಖರ್ಚುವೆಚ್ಚ, ಜಮಾಬಂಧಿ ಸಭೆಯಲ್ಲಿ ದಾಖಲೆಗಳನ್ನು ಪರಿಶೀಲಿಸುವುದು, ಕಾಮಗಾರಿಗಳ ಗುಣಮಟ್ಟ ಇಲ್ಲದಿದ್ದರೆ ಗ್ರಾಮಸಭೆಯಲ್ಲಿ ಜಮಾಬಂದಿ ಅಧಿಕಾರಿಗಳಿಗೆ ದೂರು ಸಲ್ಲಿಸುವ ಅವಕಾಶ ಕಲ್ಪಿಸಲಾಗಿದೆ. ಆ ಮೂಲಕ ಗ್ರಾಮಸಭೆ ಗಳಲ್ಲಿ ಸಾರ್ವಜನಿಕರು ಹೆಚ್ಚು ಭಾಗವಹಿಸಿ ಗ್ರಾಮಪಂಚಾಯಿತಿಯ ಆಡಳಿತಾತ್ಮಕ ಮತ್ತು ಹಣಕಾಸಿನ ನಿರ್ವಹಣೆ ಕುರಿತು ಅರಿತುಕೊಳ್ಳಲು ಅವಕಾಶವನ್ನು ಕಲ್ಪಿಸುವುದು ಈ ಕಾಯ್ದೆಯ ಉದ್ದೇಶವಾಗಿದೆ.

ಈ ಸಾಮಾಜಿಕ ಜಮಾಬಂದಿ ಪ್ರತಿವರ್ಷ ಗ್ರಾಮಪಂಚಾಯಿತಿಯ ಆಡಳಿತ ನಿರ್ವಹಣೆಯಲ್ಲಿ ಸುಧಾರಣೆ ಕಂಡುಬಂದಿದೆ. ಆ ಮೂಲಕ ಗ್ರಾಮಪಂಚಾಯಿತಿಗಳು ಪರಾದರ್ಶಕ ಆಡಳಿತ ನೀಡಲು ಸಾಧ್ಯವಾಗುತ್ತದೆ. ಜನತೆಯು ಪಂಚಾಯಿತಿ ಆಡಳಿತಾತ್ಮಕ ವಿಷಯಗಳನ್ನು ತಿಳಿದು ಹೆಚ್ಚು ಉಪಯೋಗಗಳನ್ನು ಪಡೆಯಲು ಸಾಧ್ಯವಾಗುತ್ತದೆ.

ಪಂಚಾಯಿತಿ ಸಾಮಾಜಿಕ ಜಮಾಬಂದಿಯೂ ಪ್ರತಿವರ್ಷ ಆಗಸ್ಟ್ ೧೬ ರಿಂದ ಸೆಪ್ಟೆಂಬರ್ ೧೫ ರವರೆಗೆ ಗ್ರಾಮ ಪಂಚಾಯಿತಿಗಳಲ್ಲಿ ಸಾಮಾಜಿಕ ಜಮಾಬಂದಿ ಗ್ರಾಮ ಸಭೆಗಳನ್ನು ಆಯೋಜಿಸಬೇಕು. ಸಾಮಾಜಿಕ ಜಮಾಬಂದಿ ಗ್ರಾಮಸಭೆಯೂ ತಾಲ್ಲೂಕು ಪಂಚಾಯಿತಿ ಕಾರ್ಯನಿರ್ವಾಹಕ ಅಧಿಕಾರಿಯ ಆದೇಶದ ಮೇರೆಗೆ ಗ್ರಾಮ ಪಂಚಾಯಿತಿ ಕಾರ್ಯದರ್ಶಿಯು ೧೫ ದಿನಗಳ ಮುಂಚಿನವಾಗಿ ಎಲ್ಲಾ ಗ್ರಾಮಸ್ಥರಿಗೆ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ವಿಷಯವನ್ನು ಮುಟ್ಟಿಸಬೇಕು. ಅದಕ್ಕಾಗಿ ಪ್ರಚಾರವನ್ನು ಕೈಗೊಳ್ಳಬೇಕು. ಈ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ನಿರ್ವಹಣೆ, ಯೋಜನೆ, ಹಣ ಶೇ.೨೫ರಷ್ಟು ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಪ್ರಚಾರ ಕಾರ್ಯಕ್ಕೆ ಮತ್ತು ಸಭೆ ನಿರ್ವಹಣೆ ಬಳಸಿಕೊಳ್ಳಬಹುದಾಗಿದೆ.

ಸಾಮಾಜಿಕ ಜಮಾಬಂದಿ ಸಭೆಯನ್ನು ನರೇಗಾ ಯೋಜನೆಯಲ್ಲಿ ಸಾಮಾಜಿಕ ಲೆಕ್ಕಪರಿಶೋಧನೆ ಎಂಬ ಶಿರ್ಷಿಕೆಯಲ್ಲಿ ಅನುಷ್ಠಾನಕ್ಕೆ ತರಲಾಗಿದೆ. ಸಾಮಾಜಿಕ ಜಮಾಬಂದಿ ಸಭೆಯಿಂದ ಗ್ರಾಮದ ಜನರಿಗೆ ಪ್ರತಿ ವರ್ಷ ಅನುಮೋದನೆಗೊಂಡ ಮನೆಗಳ ವಿವರ, ಕಾಮಗಾರಿಗಳ ವಿವರ, ಖರ್ಚುವೆಚ್ಚಗಳ ವಿವರಗಳು ಸಿಗುವುದರಿಂದ ಯೋಜನೆಗಳ ಅನುಷ್ಠಾನ, ಕುರಿತು ಜನತೆಗೆ ಬೇಕಾದ ಮಾಹಿತಿಗಳ ~~ಪಡೆದು~~ ಸಮಸ್ಯೆಗಳು ಕಂಡು ಬಂದಲ್ಲಿ ದೂರು ಸಲ್ಲಿಸುವ ಅವಕಾಶ ನೀಡಿದೆ. ಸಾಮಾಜಿಕ ಜಮಾ

ಬಂದಿ ಗ್ರಾಮಸಭೆಯ ಅನುಷ್ಠಾನದಿಂದ ವರ್ಷದಿಂದ ವರ್ಷ ಪಂಚಾಯಿತಿ ಅಭಿವೃದ್ಧಿ ಯೋಜನೆಗಳು ಹೆಚ್ಚು ಜನತೆಗೆ ತಲುಪುತ್ತಿವೆ. ವರ್ಷ ಹಣಕಾಸಿನ ಅನುದಾನಗಳು ಹೆಚ್ಚು ಬಳಕೆಯಾಗಿ ಗ್ರಾಮ ಪಂಚಾಯಿತಿಯ ಆಡಳಿತದಲ್ಲಿ ಪ್ರಗತಿಕಂಡು ಬಂದಿದೆ.

ಬಳ್ಳಾರಿ ಜಿಲ್ಲೆಯಲ್ಲಿ ಅಧ್ಯಯನ ಆಯ್ದುಕೊಂಡು ಗ್ರಾಮ ಪಂಚಾಯಿತಿಗಳಲ್ಲಿ ಸಾಮಾಜಿಕ ಅರಿವು, ಭಾಗವಹಿಸುವಿಕೆ ಎಷ್ಟು ಇದೆ, ಸಾಮಾಜಿಕ ಜಮಾಬಂದಿ ಹೇಗೆ ಅನುಷ್ಠಾನಗೊಳ್ಳುತ್ತಿದೆ. ಗ್ರಾಮದ ಸಾರ್ವಜನಿಕರು ಸಾಮಾಜಿಕ ಜಮಾಬಂದಿ ಎಷ್ಟು ಉಪಯುಕ್ತತೆ ಪಡೆದಿದ್ದಾರೆ ಎಂದು ಈ ಅಧ್ಯಯನದ ಮೂಲಕ ಗುರುತಿಸಲಾಗಿದೆ.

## ೧.೧. ಅಧ್ಯಯನದ ಸಮಸ್ಯೀಕರಣ(Problemsation of Study)

ಪ್ರಸ್ತುತ ಅಧ್ಯಯನವನ್ನು ಹಲವಾರು ಸಮಸ್ಯೆಗಳನ್ನು ಇಟ್ಟುಕೊಂಡು ಕೈಗೊಳ್ಳಲಾಗಿದೆ. ತಳಮಟ್ಟದಲ್ಲಿ ಜಮಾಬಂದಿ ಕಾರ್ಯಕ್ರಮ ಪಾರದರ್ಶಕ ಆಡಳಿತ ಮತ್ತು ಗ್ರಾಮಪಂಚಾಯಿತಿಗಳಲ್ಲಿ ಮುಕ್ತ ಆಡಳಿತ ಮಾಡಬೇಕೆಂಬ ಉದ್ದೇಶವನ್ನು ಈ ಕಾರ್ಯಕ್ರಮ ಒಳಗೊಂಡಿದೆ. ಇಂತಹ ಒಂದು ಕಾರ್ಯಕ್ರಮದಲ್ಲಿ ಹಲವಾರು ಸಮಸ್ಯೆಗಳಿವೆ. ಈ ಸಮಸ್ಯೆಗಳನ್ನು ಅಧ್ಯಯನ ಸಮಸ್ಯೆಗಳಾಗಿ ಇಟ್ಟುಕೊಳ್ಳಲಾಗಿದೆ.

೧. ಯೋಜನೆಗಳಲ್ಲಿ ಕಂಡುಬಂದ ಸಮಸ್ಯೆಗಳನ್ನು ಪಟ್ಟಿ ಮಾಡುವುದು.

೨. ಸರ್ಕಾರದ ಆಡಳಿತಗಾರ ಮತ್ತು ಯೋಜನೆ ತಯಾರಕರ ಜೊತೆಗೂಡಿ ಜನರು ಸಾರ್ವಜನಿಕ ಯೋಜನೆಗಳಲ್ಲಿ ಆಡಳಿತದಲ್ಲಿ ಸಮಸ್ಯೆಗಳಿಗೆ ಪರಿಹಾರಗಳನ್ನು ಹುಡುಕುವುದು.

೩. ಯೋಜನೆ ತಯಾರಿಕೆಯಲ್ಲಿ ಜನರ/ನಾಗರಿಕ ಸಹಕಾರ ನೀಡುವುದು

೪. ಆರ್ಥಿಕ/ಹಣಕಾಸಿ ಸಂಪನ್ಮೂಲಗಳನ್ನು ನಾಗರಿಕರ ಭಾಗವಹಿಸುವಿಕೆಯನ್ನು ಹೆಚ್ಚಿಸುವುದು

೫. ಸರ್ಕಾರದ ಆಡಳಿತಗಾರರು, ನಾಗರಿಕರು ಮತ್ತು ಸಾರ್ವಜನಿಕವಾಗಿ ಅಭಿನಂದಿಸುವುದು

೬. ಹೊಸ ಯೋಜನೆಗಳನ್ನು ಸಿದ್ಧಗೊಳಿಸುವುದು.

ಸಾರ್ವಜನಿಕ ಸಂಸ್ಥೆಗಳಲ್ಲಿ ಯೋಜನೆಗಳು ಸಕ್ರಿಯವಾಗಿ ಅನುಷ್ಠಾನಗೊಳ್ಳುವಲ್ಲಿ ಮತ್ತು ಯೋಜನೆ ನಿರ್ವಹಣೆಯಲ್ಲಿ ಜನರ ಭಾಗವಹಿಸುವಿಕೆ ಅತ್ಯಂತ ಪ್ರಮುಖವಾದ ಪಾತ್ರವಹಿಸುತ್ತದೆ ಸರ್ಕಾರ ಕಾರ್ಯಾನುಷ್ಠಾನದ ಹಂತಗಳಲ್ಲಿ ಜನರ ಭಾಗವಹಿಸುವಿಕೆಯಿಂದ ಇಲಾಖೆಗಳ ಸಾಧನೆಗಳು ಮತ್ತು ಇಲಾಖೆ ಗುರಿಯನ್ನು ಸಾಧಿಸಲು ಎದುರಾಗ ಸಮಸ್ಯೆಗಳು ತಿಳಿದುಬರುತ್ತವೆ. ಆ ಮೂಲಕ ಸಮಸ್ಯೆಗಳಿಂದ ಮುಕ್ತಿ ಹೊಂದಿ ಜನರಿಗೆ ಸರ್ಕಾರ ಉಪಯುಕ್ತತೆಗಳನ್ನು ನೀಡಿ ಸರ್ಕಾರಗಳ ಮತ್ತು ಇಲಾಖೆಗಳ ಗುರಿ ಸಾಧಿಸಲು ಸಾಧ್ಯವಾಗುತ್ತದೆ ಎಂದು ಉಲ್ಲೇಖಿಸುತ್ತಾರೆ.[೬]

## ೧.೨.ಅಧ್ಯಯನದ ಉದ್ದೇಶಗಳು(Objectives of Study)

ಗ್ರಾಮಪಂಚಾಯಿತಿಗಳು ದೇಶದ ಚಿಕ್ಕ ಮತ್ತು ತಳಮಟ್ಟದ ಆಡಳಿತ ಘಟಕಗಳಾಗಿ ಸುಮಾರು ದಶಕಗಳಿಂದ ಗ್ರಾಮೀಣ ಭಾಗದ ಜನರ ಅಭಿವೃದ್ಧಿ ಶ್ರಮಿಸುತ್ತಾ ಬಂದಿದೆ. ಪಂಚಾಯತ್‌ರಾಜ್ ವ್ಯವಸ್ಥೆಯು ವಿವಿಧ ರಾಜ್ಯಗಳಲ್ಲಿ ವಿವಿಧ ಮಾದರಿಗಳಲ್ಲಿ ಕೆಲಸ ನಿರ್ವಹಿಸಲಾಗುತ್ತಿತ್ತು ೭೩ನೇ ತಿದ್ದುಪಡಿಯ ನಂತರ ಪ್ರಜಾಪ್ರಭುತ್ವ ಆಧಾರಿತ ಏಕರೂಪದಲ್ಲಿ ಆಡಳಿತಾತ್ಮಕ ಅವಕಾಶಗಳನ್ನು ಪಂಚಾಯತ್ ವ್ಯವಸ್ಥೆಯಲ್ಲಿ ಕಾಯ್ದೆಯ ಮೂಲಕ ಜಾರಿಗೆ ತರಲಾಯಿತು. ಪಂಚಾಯತ್ ಸಂಸ್ಥೆಗಳಿಗೆ ಹೆಚ್ಚಿನ ಅಧಿಕಾರಗಳನ್ನು ನೀಡಲಾಯಿತು. ಆ ಮೂಲಕ ಗ್ರಾಮ ಪಂಚಾಯಿತಿಗಳು ಸ್ವಾಲಂಬನೆಗೊಳ್ಳುವ ಅವಕಾಶ ದೊರೆಯುತ್ತದೆ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಅಭಿವೃದ್ಧಿ ಯೋಜನೆಗಳನ್ನು ಗ್ರಾಮೀಣ ಮಟ್ಟದಲ್ಲಿ ಅನುಷ್ಠಾನಗೊಳ್ಳುವಂತರ  ಅಧಿಕಾರಿಗಳು ಸಿಕ್ಕವು ಅದೇ ರೀತಿ ಗ್ರಾಮಸಭೆ ಗಳನ್ನು ನಡೆಸಿ ಗ್ರಾಮ ಜನರಿಗೆ ಬೇಕಾದ ಯೋಜನೆಗಳನ್ನು ಸಿದ್ದಪಡಿಸಲು ಶಿಫಾರಸ್ಸು ಮಾಡುವಂತೆ ಗ್ರಾಮಸಭೆಗಳನ್ನು ಮತ್ತು ಜನಾ ಯೋಜನಾ ಸಭೆಗಳನ್ನು ಏರ್ಪಡಿಸಿ ಉತ್ತಮ ಆಡಳಿತ ಸೇವೆ ನೀಡುವಂತಹ ಅಧಿಕಾರಗಳನ್ನು ಗ್ರಾಮಪಂಚಾಯಿತಿಗಳಿಗೆ ನೀಡಲಾಯಿತು. ಗ್ರಾಮಪಂಚಾಯಿತಿಗಳಿಗೆ ನೀಡದ ಅಧಿಕಾರಿಗಳು ಮತ್ತು ಗ್ರಾಮೀಣಾಭಿವೃದ್ಧಿ ಯೋಜನೆಗಳ ಉಪಯೋಗಗಳು ಅಥವಾ ಫಲಿತಾಂಶಗಳು ಜನರಿಗೆ ಸರಿಯಾದ ಕ್ರಮದಲ್ಲಿ ಸಿಗುತ್ತಿವೆ ಎಂಬ ಪ್ರಶ್ನೆ ಹುಟ್ಟುತ್ತದೆ. ಗ್ರಾಮೀಣ ಅಭಿವೃದ್ಧಿ ಯೋಜನೆಗಳು ಗ್ರಾಮೀಣ ಜನರಿಗೆ ತಲುಪುವಲ್ಲಿ ಯಾವುದಾದರೂ ಸಮಸ್ಯೆಗಳು ಕಂಡು ಬಂದಿವೆ ಎಂಬ ಪ್ರಶ್ನೆಗಳು ಹುಟ್ಟುತ್ತವೆ. ಗ್ರಾಮಸಭೆಗಳು ಜನರಿಗೆ ಉಪಯುಕ್ತವಾಗಿದೆಯೇ? ಮತ್ತು ೭೩ನೇ ತಿದ್ದುಪಡಿಯ ಪ್ರಜಾಪ್ರಭುತ್ವ ಆಧಾರಿತ ಜನಪರ ಕೆಲಸಗಳನ್ನು ಗ್ರಾಮಪಂಚಾಯಿತಿಗಳು ಅನುಷ್ಠಾನಕ್ಕೆ ತರಲು ಸಾಧ್ಯವಾಗಿಲ್ಲವೆ? ಎಂಬ ಪ್ರಶ್ನೆಗಳು ಹುಟ್ಟಿಕೊಳ್ಳುತ್ತವೆ. ಹಾಗಾದರೆ ಗ್ರಾಮ ಪಂಚಾಯಿತಿ ಗ್ರಾಮೀಣ ಜನರ ಅಭಿವೃದ್ಧಿಗೆ ಉಪಯೋಗಿಸುತ್ತಿರುವ ಹಣ, ಫಲಾಪೇಕ್ಷೆಗಳು, ಯಾರಿಗೆ ಸಿಗುತ್ತಿವೆ. ನಿಜವಾಗಿ ಫಲಾನುಭವಿಗಳಿಗೆ ಸಿಕ್ಕಿದರೆ ಎಷ್ಟು ಪ್ರಮಾಣದಲ್ಲಿ ನಿಜವಾದ ಫಲಾಪೇಕ್ಷಕರಿಗೆ ಅಭಿವೃದ್ದಿ ಯೋಜನೆಗಳ ಫಲಾ ಸಿಕ್ಕಿದೆ ಎನ್ನುವ ಅಂಶಗಳನ್ನು ನೋಡಿದಾಗ ಗ್ರಾಮಸಭೆಗಳು ಜನರ ಸಭೆಗಳು ಆಗಿಲ್ಲವೆ ಆಗಿದ್ದರೆ ಈ ಗ್ರಾಮಸಭೆಗಳು ಕಾರ್ಯಚಟುವಟಿಕೆ ಯಾವ ಕೆಲಸಗಳಿಗೆ ಸೀಮಿತವಾಗಿದೆ.

ಈ ಗ್ರಾಮಸಭೆ ಪಂಚಾಯಿತಿಗಳಲ್ಲಿ ಬಡವರು ಯೋಜನೆ ಪಡೆಯಲು ಅರ್ಹತೆ ಹೊಂದಿದ ಜನರಿಗೆ ಯೋಜನೆಗಳು ಸಿಗದೇ ಇದ್ದಾಗ ಜನರು ಪ್ರಶ್ನೆಗಳು ಕೇಳುವ ಯೋಜನೆಯ ಆರ್ಥಿಕ ಮತ್ತು ಅನುಷ್ಠಾನದ ಮಾಹಿತಿಗಳನ್ನು ಪಡೆಯಲು ಸಾಧ್ಯವಾಗದ ಸ್ಥಿತಿಯು ಗ್ರಾಮಸಭೆಗಳಲ್ಲಿ ಕಂಡು ಬರುವುದನ್ನು ಹಲವು ಅಧ್ಯಯನಗಳಲ್ಲಿ ಕಂಡು ಬಂದಿದೆ.

ಈ ಸಮಸ್ಯೆಗಳಿಗೆ ಪರ್ಯಾಯವಾಗಿ ಜಾರಿಗೆ ತಂದ ಅಧಿನಿಯಮವೇ ಸಾಮಾಜಿಕ ಜಮಾಬಂದಿ ಅಧಿನಿಯಮ ಈ ಸಾಮಾಜಿಕ ಜಮಾಬಂದಿ ಸಭೆಯು ಗ್ರಾಮಸಭೆಗಳಲ್ಲಿ ಜನರಿಗೆ ಅಥವಾ ಸಾಮಾನ್ಯ ಜನರಿಗೆ ಹೆಚ್ಚಿನ ಅಧಿಕಾರಗಳನ್ನು ನೀಡುವುದರ ಮೂಲಕ ಗ್ರಾಮ ಪಂಚಾಯಿತಿ ಗಳನ್ನು ಹೆಚ್ಚು ಪರದರ್ಶಕವಾದ ಆಡಳಿತ ನೀಡುವ ಅವಕಾಶ ಕಲ್ಪಿಸಿತು. ಸಾಮಾಜಿಕ ಜಮಾಬಂದಿ ಸಭೆಯು ಜನರಿಗೆ ಗ್ರಾಮ ಪಂಚಾಯಿತಿಗಳ ಆಡಳಿತಾತ್ಮಕ ಮತ್ತು ಆರ್ಥಿಕ ಅಂಶಗಳನ್ನು ಯೋಜನೆಗಳ ಅನುಷ್ಠಾನ ಕುರಿತು ಗ್ರಾಮೀಣ ಜನರಲ್ಲಿ ಅರಿವು ಇದೆಯೆಂಬ ಪ್ರಶ್ನೆ ಹುಟ್ಟಿತು. ಜಮಾಬಂದಿ ಸಭೆಗಳ ಕಾಯ್ದೆಯನುಸಾರವಾಗಿ ಅನುಷ್ಠಾನಗೊಳ್ಳಲು ಕಾರಣವೇನು? ಎಂಬ ಪ್ರಶ್ನೆಗಳನ್ನು ಹುಟ್ಟಿ ಕೊಂಡವು ಈಗಾಗಲೇ ಸಾಮಾಜಿಕ ಜಮಾಬಂದಿ ಅಥವಾ ಸಾಮಾಜಿಕ ಲೆಕ್ಕ ಪರಿಶೋಧನೆಡ ಸಾರ್ವಜನಿಕ ಕ್ಷೇತ್ರದ ಪಾರದರ್ಶಕತೆ ಹೆಚ್ಚಿನ ಜನರಿಗೆ ಉತ್ತಮ ಆಡಳಿತ ಸೇವೆ ನೀಡುವ ಕೆಲಸ ಈ ಕೆಲಸ ಬಳ್ಳಾರಿ ಜಿಲ್ಲೆಯಲ್ಲಿ ಸಕ್ರೀಯವಾಗಿ ಅನುಷ್ಠಾನಗೊಳ್ಳುತ್ತಿದ್ದೆಯೆ ಎಂಬುದನ್ನು ನೋಡಲು ಮತ್ತು ಅನುಷ್ಠಾನಗೊಳ್ಳದಿದ್ದಾರೆ ಅದಕ್ಕೆ ಕಾರಣಗಳೇನು? ಜಿಲ್ಲೆಯಲ್ಲಿ ಯಾವ ರೀತಿ ಅಥವಾ ಮಾದರಿಯಲ್ಲಿ ಸಾಮಾಜಿಕ ಜಮಾಬಂದಿ ಗ್ರಾಮಸಭೆ ನಡೆಯುತ್ತಿವೆ. ಜಮಾಬಂದಿ ಸಭೆ ನಡೆದಿರಲು ಕಂಡುಬರುವ ತೊಂದರೆಗಳನ್ನು ತಿಳಿಯುವುದು ಈ ಅಧ್ಯಯನದ ಮುಖ್ಯವಾದ ಉದ್ದೇಶಗಳಾಗಿವೆ.

೧. ಜಮಾಬಂದಿ ಕಾರ್ಯಕ್ರಮದ ಅನುಷ್ಠಾನದ ವಿಧಿ–ವಿಧಾನಗಳನ್ನು ಮತ್ತು ಮಹತ್ವವನ್ನು ವಿಶ್ಲೇಷಣೆ ಮಾಡುವುದು

೨. ಬಳ್ಳಾರಿಯ ಗ್ರಾಮ ಪಂಚಾಯಿತಿಗಳಲ್ಲಿ ಸಾಮಾಜಿಕ ಜಮಾಬಂದಿ ಸಭೆಯು ಹೇಗೆ ಅನುಷ್ಠಾನ ಗೊಳ್ಳುತ್ತದೆ ಎಂಬುದನ್ನು ಗುರುತಿಸುವುದು

೩. ಬಳ್ಳಾರಿ ಜಿಲ್ಲೆ ಗ್ರಾಮ ಪಂಚಾಯಿತಿಯ ಜನತೆಯ ಸಾಮಾಜಿಕ ಜಮಾಬಂದಿ ಸಭೆ ಅರಿವು ಮತ್ತು ಭಾಗವಹಿಸುವಿಕೆಯನ್ನು ನೋಡುವುದು.

೪. ಸಾಮಾಜಿಕ ಜಮಾಬಂದಿಸಭೆಯ ಕಾರ್ಯಾನಷ್ಠಾನದಲ್ಲಿ ಆಗುವ ತೊಡುಕುಗಳನ್ನು ಹಾಗೂ ಪರಿಹಾರೋಪಾಗಳನ್ನು ಕಂಡುಹಿಡಿಯುವುದು.

## ೧.೩.ಅಧ್ಯಯನ ವಿಧಾನ(Method of Study)

ಪ್ರಸ್ತುತ ಮಹಾಪ್ರಬಂಧವನ್ನು ಪ್ರಯೋಗಾತ್ಮಕ ಅಧ್ಯಯನವಾಗಿದೆ. ಎಂಪಿರಿಕಲ್ ಅಧ್ಯಯನ ವಿಧಾನ ಬಳಸಿಕೊಂಡು ಅಧ್ಯಯನ ಕೈಗೊಳ್ಳಲಾಗಿದೆ. ಅಧ್ಯಯನವು ಕ್ಷೇತ್ರಕಾರ್ಯಧಾರಿತವಾಗಿದೆ. ಬಳ್ಳಾರಿ ಜಿಲ್ಲೆಯನ್ನು ಅಧ್ಯಯನಕ್ಕೆ ಆಯ್ಕೆಮಾಡಿಕೊಳ್ಳಲಾಗಿದೆ. ಪ್ರಾಥಮಿಕ ಮತ್ತು ಆನುಷಂಗಿಕ

ಮಾದರಿಯ ವಿಧಾನಗಳಿಂದ ಅಧ್ಯಯನಕ್ಕೆ ಬೇಕಾದ ಮಾಹಿತಿಗಳನ್ನು ಸಂಗ್ರಹಿಸಿ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

**ಪ್ರಾಥಮಿಕ ಮಾಹಿತಿ**

ಗ್ರಾಮಪಂಚಾಯಿತಿಗಳಿಗೆ ನೇರವಾಗಿ ಹೋಗಿ ಗ್ರಾಮಪಂಚಾಯಿತಿಗಳಲ್ಲಿ ಸಾಮಾಜಿಕ ಜಮಾಬಂದಿ ಸಭೆಯ ಮಾಹಿತಿಯನ್ನು ಪಡೆಯಲಾಗಿದೆ. ಗ್ರಾಮ ಪಂಚಾಯಿತಿ ಸಿಬ್ಬಂದಿ ಮತ್ತು ಪಿ.ಡಿ.ಓ.ಗಳಿಂದ ಸಾಮಾಜಿಕ ಜಮಾಬಂದಿ ಸಭೆಯ ಅನುಷ್ಠಾನಕ್ಕೆ ಸಂಬಂಧಿಸಿದಂತೆ ಮಾಹಿತಿಯನ್ನು ಪಡೆಯಲಾಗಿದೆ. ಗ್ರಾಮಪಂಚಾಯಿತಿಗಳಲ್ಲಿನ ಜನತೆಯಿಂದ ಪಡೆಯಲಾಗಿದೆ. ಗ್ರಾಮ ಪಂಚಾಯಿತಿ ಗಳಲ್ಲಿನ ಜನಸಾಮಾನ್ಯರು ಸಾಮಾಜಿಕ ಜಮಾಬಂದಿ ಗ್ರಾಮಸಭೆಗಳಲ್ಲಿ ಎಷ್ಟರ ಮಟ್ಟಿಗೆ ಒಳಗೊಂಡಿದ್ದಾರೆ ಎಂಬ ಮಾಹಿತಿಗಳನ್ನು ಸಾರ್ವಜನಿಕರಿಂದ ಪಡೆಯಲಾಯಿತು. ಅಧ್ಯಯನಕ್ಕೆ ಆಯ್ದುಕೊಂಡ ಗ್ರಾಮಗಳಲ್ಲಿನ ರಚನಾತ್ಮಕ ಪ್ರಶ್ನಾವಳಿಯ ಮೂಲಕ ನೇರ ಸಂದರ್ಶನ ಮಾಡುವುದರ ಮೂಲಕ ಗ್ರಾಮದ ವಿವಿಧ ಮಾದರಿಯ ಕುಟುಂಬಗಳ ಸಾಮಾಜಿಕ ಜಮಾಬಂದಿ ಸಾಮಾಜಿಕ ಆಯಾಮಗಳ ಕುರಿತು ಮಾಹಿತಿಗಳನ್ನು ಪಡೆಯಲಾಗಿದೆ. ಈ ಅಧ್ಯಯನದಲ್ಲಿ ಎಂಪಿರಿಕಲ್ ವಿಧಾನಕ್ಕಾಗಿ ಅವಲೋಕನ ಮಾದರಿ ನೇರಸಂದರ್ಶನ ಅಥವಾ ಮುಖಾಮುಖಿ ಸಂದರ್ಶನ, ಗ್ರಾಮಸ್ಥರೊಂದಿಗೆ ಗ್ರಾಮ ಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆ ಕುರಿತಾದ ಚರ್ಚೆಯನ್ನು ಮಾಡಿ ಮಾಹಿತಿ ಸಂಗ್ರಹಿಸಲಾಗಿದೆ. ಗ್ರಾಮ ಪಂಚಾಯಿತಿ ಸದಸ್ಯರಿಂದ ಪಡೆದ ಮಾಹಿತಿಗಳನ್ನು ಆಧರಿಸಿ, ಅಂಕಿ-ಸಂಖ್ಯೆ ಪ್ರಕಾರ ಬಳಸಿಕೊಂಡು ಮಹಾಪ್ರಬಂಧವನ್ನು ಸಿದ್ಧಪಡಿಸಲಾಗಿದೆ.

**ಆನುಷಂಗಿಕ ಮಾಹಿತಿ**

ಪಂಚಾಯತ್‌ರಾಜ್ ಇಲಾಖೆಯ ತರಬೇತಿ ಕೈಪಿಡಿಗಳನ್ನು, ಕಾಯ್ದೆ ಕರಪತ್ರಗಳನ್ನು ಮತ್ತು ರಾಜ್ಯಪತ್ರ, ಪ್ರಕಟಿತ ಪುಸ್ತಕ, ನಿಯತಕಾಲಿಕೆ ಮತ್ತು ಪ್ರಕಟಿತ ಅಪ್ರಕಟಿತ ಮಹಾಪ್ರಬಂಧಗಳನ್ನು ಅಧ್ಯಯನ ಮಾಡಿ ಬೇಕಾದ ಮಾಹಿತಿಗಳನ್ನು ಸಂಗ್ರಹಿಸಿ ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ. ಇ.ಪಿ.ಡಬ್ಲ್ಯೂ. ಸಂಶೋಧನಾ ಲೇಖನಗಳನ್ನು ಜಿಲ್ಲಾ ಸಂಖ್ಯಾ ವರದಿಗಳನ್ನು, ಮಾನವ ಅಭಿವೃದ್ಧಿ ವರದಿಗಳನ್ನು, ಸಂಶೋಧನಾ ಗ್ರಂಥಗಳನ್ನು, ಐತಿಹಾಸಿಕ ವರದಿಗಳನ್ನು ಮತ್ತು ಪಂಚಾಯಿತಿ ಅಂತರ್ಜಾಲದಲ್ಲಿ ಸಿಗುವ ಮಾಹಿತಿಗಳನ್ನು ಅಧ್ಯಯನದಲ್ಲಿ ಬಳಸಿಕೊಳ್ಳಲಾಗಿದೆ.

## ೧.೪. ಅಧ್ಯಯನದ ವ್ಯಾಪ್ತಿ(Scope of Study)

ಅಧ್ಯಯನದ ಭೌಗೋಳಿಕ ವ್ಯಾಪ್ತಿಯನ್ನು ಬಳ್ಳಾರಿಯ ನಾಲ್ಕು ತಾಲ್ಲೂಕುಗಳಾದ ಸಂಡೂರು, ಕೂಡ್ಲಿಗಿ, ಬಳ್ಳಾರಿ ಮತ್ತು ಹೊಸಪೇಟೆ ತಾಲ್ಲೂಕುಗಳಿಗೆ ಸೀಮಿತಗೊಳಿಸಲಾಗಿದೆ. ಬಳ್ಳಾರಿ ಜಿಲ್ಲೆಯನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲು ಪ್ರಮುಖವಾದ ಕಾರಣ ಈ ಜಿಲ್ಲೆಯು ಡಾ.ಡಿ.ಎಂ.ನಂಜುಂಡಪ್ಪನವರ

ಪ್ರಾದೇಶೀಕ ಅಸಮಾನತೆಯ ವರದಿಯ ಪ್ರಕಾರ ಬಳ್ಳಾರಿ ಜಿಲ್ಲೆ ಹಿಂದುಳಿದ ಪ್ರದೇಶವಾದ ಹೈದರಬಾದ್ ಕರ್ನಾಟಕ ಜಿಲ್ಲೆಗಳಲ್ಲಿ ಒಂದಾಗಿದೆ. ಈ ಜಿಲ್ಲೆಯಲ್ಲಿ ಸಂಡೂರು ಮತ್ತು ಕೂಡ್ಲಿಗಿ ತಾಲ್ಲೂಕುಗಳು ಅತ್ಯಂತ ಹಿಂದುಳಿದ ತಾಲ್ಲೂಕುಗಳಿವೆ. ಬಳ್ಳಾರಿ ಮತ್ತು ಹೊಸಪೇಟೆ ತಾಲ್ಲೂಕುಗಳು ಜಿಲ್ಲೆಯಲ್ಲಿ ಅಭಿವೃದ್ಧಿ ಹೊಂದಿದ ತಾಲ್ಲೂಕುಗಳಿವೆ. ಆದ್ದರಿಂದ ಬಳ್ಳಾರಿ ಜಿಲ್ಲೆಯಲ್ಲಿ ಹಿಂದುಳಿದ ಸಂಡೂರು ತಾಲ್ಲೂಕಿನಲ್ಲಿ ಎರಡೂ ಗ್ರಾಮಪಂಚಾಯಿತಿಗಳಾದ ಚೋರನೂರು ಗ್ರಾಮಪಂಚಾಯಿತಿ ಸುವೇನಹಳ್ಳಿ ಗ್ರಾಮಪಂಚಾಯಿತಿಗಳನ್ನು ಮತ್ತು ಕೂಡ್ಲಿಗಿ ತಾಲ್ಲೂಕಿನಲ್ಲಿ ಗುಡೇಕೋಟೆ ಗ್ರಾಮಪಂಚಾಯಿತಿ, ಅಪ್ಪನಯ್ಯಹಳ್ಳಿ ಗ್ರಾಮಪಂಚಾಯಿತಿಗಳನ್ನು ಅಧ್ಯಯನಕ್ಕೆ ಆಯ್ದುಕೊಳ್ಳಲಾಗಿದೆ. ಅಭಿವೃದ್ಧಿ ಹೊಂದಿದ ಬಳ್ಳಾರಿ ತಾಲ್ಲೂಕಿನಲ್ಲಿ ಎರಡು ಗ್ರಾಮಪಂಚಾಯಿತಿಗಳಾದ ಮೋಕಾ ಮತ್ತು ಸಂಗನಕಲ್ಲು ಗ್ರಾಮ ಪಂಚಾಯಿತಿಗಳನ್ನು ಆಯ್ದುಗೊಳ್ಳಲಾಗಿದೆ. ಹೊಸಪೇಟೆ ತಾಲ್ಲೂಕಿನಲ್ಲಿ ಪಾಪಿನಾಯಕನಹಳ್ಳಿ ಮತ್ತು ಮಲಪನಗುಡಿ ಗ್ರಾಮಪಂಚಾಯಿತಿ ಒಳಗೊಂಡಂತೆ ಅಧ್ಯಯನ ವ್ಯಾಪ್ತಿ ಸೀಮಿತಗೊಳಿಸಲಾಗಿದೆ. ಈ ಅಧ್ಯಯನವು ಗ್ರಾಮಪಂಚಾಯಿತಿಗಳ ಸಾಮಾಜಿಕ ಲೆಕ್ಕಪರಿಶೋಧನಾ ಅಥವಾ ಸಾಮಾಜಿಕ ಜಮಾಬಂದಿ ಸಂಬಂಧಿಸಿದಂತಹ ವಿಷಯವಸ್ತುವನ್ನು ಹೊಂದಿದೆ. ಈ ಅಧ್ಯಯನದಲ್ಲಿ ಗ್ರಾಮ ಪಂಚಾಯಿತಿಗಳನ್ನು ಒಳಗೊಂಡಿರುತ್ತದೆ.

### ೧.೫. ಅಧ್ಯಯನದ ಪ್ರಾಮುಖ್ಯತೆ(Importance of Study)

ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯ ಅಧ್ಯಯನದಿಂದ ಗ್ರಾಮ ಪಂಚಾಯಿತಿಯಲ್ಲಿ ಗ್ರಾಮಸಭೆಗಳು ಜನಪರವಾಗಿ, ಪಾರದರ್ಶಕವಾಗಿ ನಡೆಯದಿರಲು ಇರುವ ಕಾರಣಗಳನ್ನು ತಿಳಿಯಬಹುದು. ಪ್ರಸ್ತುತ ಗ್ರಾಮಪಂಚಾಯತಿಗಳಲ್ಲಿ ಯಾವ ರೀತಿಯಲ್ಲಿ ಜಮಾಬಂದಿ ಸಭೆ ನಡೆಯುತ್ತದೆ? ಅದರಲ್ಲಿ ಸದಸ್ಯರು ಯಾವ ರೀತಿಯಲ್ಲಿ ಪಾಲ್ಗೊಳ್ಳುತ್ತಾರೆ. ಗ್ರಾಮದ ಜನಸಾಮಾನ್ಯರು ಉತ್ತರದಾಯಿಗಳಾಗಿ ಹೇಗೆ ಕಾರ್ಯ ನಿರ್ವಹಿಸುತ್ತಾರೆಂಬುದು ಪ್ರಸ್ತುತ ಅಧ್ಯಯನ ದಿಂದ ತಿಳಿಯಬಹುದು. ಯೋಜನೆಗಳ, ಫಲಾನುಭವಿಗಳ ಹಂಚಿಕೆಗಳನ್ನು ಯಾವ ರೀತಿಯಲ್ಲಿ ನಡೆಸುತ್ತಾರೆಂಬುದನ್ನು ತಿಳಿಯಲು ಪ್ರಯತ್ನಿಸಲಾಗಿದೆ.

### ೧.೬. ಅಧ್ಯಯನದ ಸಮಸ್ಯೀಕರಣ

೧. **Geeta** ಅವರ **Transparency and Accountability in NREGA** ಲೇಖನದಲ್ಲಿ ಆಂಧ್ರಪ್ರದೇಶದ ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನ ಕುರಿತು ಚರ್ಚಿಸಲಾಗಿದೆ. ಆಂಧ್ರದ ಮೂರು ಜಿಲ್ಲೆಗಳಾದ ಕಡಪ, ಕಮ್ಮಂ ಮತ್ತು ಮೆದಕ್ ಗ್ರಾಮಪಂಚಾಯಿತಿಗಳ ಸಾಮಾಜಿಕ ಜಮಾಬಂದಿ ಗ್ರಾಮಸಭೆ ಪೂರ್ವದಲ್ಲಿ ಗ್ರಾಮಸ್ಥರಲ್ಲಿ ಯೋಜನೆ

ಕುರಿತಾದ ಅರಿವು ಮತ್ತು ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ನಂತರ ಗ್ರಾಮಸ್ಥರ ಅರಿವು ಹೆಚ್ಚಾಗಿರುವುದರ ಕುರಿತು ಅಧ್ಯಯನದಲ್ಲಿ ಚರ್ಚಿಸಿದ್ದಾರೆ. ಈ ಜಿಲ್ಲೆಗಳಲ್ಲಿ ೮೪೦ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆ ಕೂಲಿ ಕಾರ್ಮಿಕರನ್ನು ಸಂದರ್ಶನ ಮಾಡಿ ಏಳು ತಿಂಗಳಲ್ಲಿ ಮೂರು ಹಂತಗಳಲ್ಲಿ ಪ್ರಶ್ನೆಗಳನ್ನು ಕೇಳಲಾಯಿತು. ನರೇಗಾ ಯೋಜನೆಯ ವೇತನ ಕುರಿತು ಮತ್ತು ಎಷ್ಟು ದಿನಗಳು ಕೆಲಸ ನೀಡುತ್ತದೆ ಎಂಬ ಪ್ರಶ್ನೆಗಳನ್ನು ಮೊದಲನೇ ಹಂತದಲ್ಲಿ ಕೇಳಿದಾಗ ಶೇ.. ೩೯ರಷ್ಟು ಜನರು ಮಾತ್ರ ಉತ್ತರವನ್ನು ನೀಡಿದರು. ಎರಡನೇ ಹಂತದಲ್ಲಿ ಅದೇ ಪ್ರಶ್ನೆಗಳನ್ನು ಕೇಳಿದಾಗ ಶೇ.. ೯೪ರಷ್ಟು ಜನರು ಉತ್ತರಿಸಿದ್ದಾರೆ. ಮೂರನೇ ಹಂತದಲ್ಲಿ ಶೇ. ೯೮ರಷ್ಟು ಜನರು ಪ್ರಶ್ನೆಗಳಿಗೆ ಉತ್ತರ ನೀಡಿದ್ದಾರೆ. ೯ ಗ್ರಾಮಸ್ಥರು ಸಾಮಾಜಿಕ ಜಮಾಬಂದಿ ಬಗ್ಗೆ ಪ್ರಶ್ನೆಗಳನ್ನು ಕೇಳಿದಾಗ ಮೊದಲಿಗೆ ಯೋಜನೆ ಬಗ್ಗೆ ಮತ್ತು ಗ್ರಾಮಸಭೆ ಬಗ್ಗೆ ತಿಳಿದುಕೊಂಡು ಎರಡನೇ ಹಂತದಲ್ಲಿ ಸಾಮಾಜಿಕ ಜಮಾಬಂದಿ ಗ್ರಾಮಸಭೆಗಳಲ್ಲಿ ಭಾಗವಹಿಸಿದ್ದರು. ಹಾಗಾಗಿ ಮೂರನೇ ಹಂತದ ಸಂಶೋಧಕರ ಪ್ರಶ್ನೆಗಳಿಗೆ ಉತ್ತರಗಳು ಹೆಚ್ಚು ಸಿಕ್ಕವು. ೧೦೦ ದಿನಗಳ ಕಾಲ ಕೂಲಿ ಕೆಲಸ ನೀಡುವ ಅವಧಿ ಪ್ರಶ್ನೆಗೆ ಮೊದಲ ಹಂತದಲ್ಲಿ ಶೇ. ೩೧ರಷ್ಟು, ಎರಡನೇ ಹಂತದಲ್ಲಿ ಶೇ. ೮೮ರಷ್ಟು ಮತ್ತು ಮೂರನೇ ಹಂತದಲ್ಲಿ ಶೇ. ೯೯ರಷ್ಟು ಜನರು ಅರಿವು ಹೊಂದಿದ್ದರು.

ಖಾಸಗಿ ಕಂಟ್ರಾಕ್ಟರ್ ರದ್ದುಗೊಳಿಸುವುದರ ಕುರಿತು ಅವರನ್ನು ಪ್ರಶ್ನಿಸಿದಾಗ ಮೊದಲ ಬಾರಿಗೆ ಶೇ. ೨೭ರಷ್ಟು ಜನರು ಅರಿವು ಹೊಂದಿದ್ದರು. ಎರಡನೇ ಬಾರಿಗೆ ಪ್ರಶ್ನಿಸಿದಾಗ ಶೇ.೮೮ರಷ್ಟು ಮತ್ತು ಶೇ.೯೯ರಷ್ಟು ಜನರು ಅರಿವು ಹೊಂದಿದ್ದರು. ಸಾಮಾಜಿಕ ಜಮಾಬಂದಿ ಸಭೆ ಮಾಹಿತಿ ಮತ್ತು ಬೇಡಿಕೆ ಕುರಿತು ಪ್ರಶ್ನಿಸಿದಾಗ ಶೇ. ೨೫ರಷ್ಟು ಜನರು ಅರಿವು ಹೊಂದಿದ್ದರು. ಎರಡನೇ ಹಂತದಲ್ಲಿ ಶೇ. ೭೪ರಷ್ಟು ಸದಸ್ಯರು ಸದಸ್ಯರು ಅರಿವು ಹೊಂದಿದ್ದರು, ಮೂರನೇ ಹಂತದಲ್ಲಿ ಶೇ. ೯೫ರಷ್ಟು ಜನರು ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ಚರ್ಚಿಸುವ ವಿಷಯಗಳ ಕುರಿತು, ಜನರ ಬೇಡಿಕೆಗಳ ಕುರಿತು ಅರಿವು ಹೊಂದಿದ್ದರು.[೫]

೨. **Nidhi Vij** ಅವರ ಲೇಖನ **Collaborative Governance: Anolysing Social Audit in MGNREGA in India** ಮಹಾತ್ಮಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆ ಐತಿಹಾಸಿಕ ಉನ್ನತಿ ಮತ್ತು ಸಾಮಾಜಿಕ ಭದ್ರತೆ ಒದಗಿಸುವಂತಹ ಯೋಜನೆಗಳ ಕುರಿತು ಚರ್ಚಿಸಿದೆ. ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯು ಭಾರತದ ಗ್ರಾಮೀಣ ಬಡತನ ರೇಖೆಗಿಂತ ಕೆಳಗಿನ ಸಮುದಾಯಗಳಿಗೆ ನೀಡುವ ಉಪಯೋಗಗಳನ್ನು ಕುರಿತು ಚರ್ಚಿಸಿದ್ದಾರೆ. ಈ ಯೋಜನೆ ದೇಶದ ಬಯಲು ಸೀಮೆಗಳ ಜಿಲ್ಲೆಗಳಲ್ಲಿನ ಜನ ಸಮುದಾಯಗಳಿಗೆ ಮತ್ತು ಬಡತನ ರೇಖೆಗಿಂತ ಕೆಳಗಿನ ಜೀವನಮಟ್ಟ ಹೊಂದಿರುವ ಕಡಿಮೆ, ಪೌಷ್ಟಿಕಾಂಶ, ಕಡಿಮೆ ಸಾಮಾಜಿಕ

ಅರಿವು ಇರುವಂತಹ ಕುಟುಂಬಗಳ ಜೀವನಮಟ್ಟ ಸುಧಾರಿಸಲು ಸಿದ್ಧಗೊಳಿಸಿದ ಬಡವರಿಗೆ ವರದಾನ ಈ ಯೋಜನೆ. ಈ ಯೋಜನೆಯಲ್ಲಿ ಸಾಮಾಜಿಕ ಜಮಾಬಂದಿ ಗ್ರಾಮಸಭೆಗಳು ಗ್ರಾಮಪಂಚಾಯಿತಿ ಆಡಳಿತ ಸುಧಾರಣೆಗಳನ್ನು ಜಾರಿಗೆ ತಂದಿದ್ದು ಪಂಚಾಯಿತಿಗಳಲ್ಲಿ ಸಾರ್ವಜನಿಕ ಸೇವೆಗಳ ನಿರ್ವಹಣೆ ಸೂಕ್ತವಾದ ರೀತಿಯಲ್ಲಿ ಜಾರಿಯಾಗುವಂತೆ ಸಾಮಾಜಿಕ ಲೆಕ್ಕಪರಿಶೋಧನ ಗ್ರಾಮಸಭೆಯಿಂದ ಸಾಧ್ಯವಾಯಿತು.[೬]

ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯ ಸಾಮಾಜಿಕ ಲೆಕ್ಕ ಪರಿಶೋಧನಾ ಗ್ರಾಮಸಭೆ ವರ್ಷದಲ್ಲಿ ಎರಡು ಬಾರಿ ನಡೆಸುವುದರಿಂದ ಯೋಜನೆಯ ಅನುಷ್ಠಾನದಲ್ಲಿ ಅಕ್ರಮ ನಡೆಯುವುದನ್ನು ತಪ್ಪಿಸಲಾಗಿದೆ. ಗ್ರಾಮಪಂಚಾಯಿತಿಗಳಲ್ಲಿ ಭ್ರಷ್ಟಾಚಾರ ಕಡಿಮೆಯಾಗಿ ಸಾಮಾಜಿಕ ಜಮಾಬಂದಿ ಸಭೆಯಿಂದ ಸಾಮಾಜಿಕ ಭದ್ರತೆ, ತಳಸಮುದಾಯಗಳ, ಬಡವರ ಪೌಷ್ಟಿಕಾಂಶಗಳ ಕೊರತೆ ನೀಗಿಸಿದೆ. ಈ ಯೋಜನೆಯಿಂದ ಬಿ.ಪಿ.ಎಲ್. ಕುಟುಂಬಗಳ ಆರ್ಥಿಕ ಅಭಿವೃದ್ಧಿ ಪ್ರತಿವರ್ಷ ಶೇ.೫ರಷ್ಟು ವೃದ್ಧಿಗೊಳ್ಳುತ್ತದೆ.

ದೇಶದ ಬಡತನ ರೇಖೆಯು ಈ ಯೋಜನೆ ಅನುಷ್ಠಾನದಿಂದ ಪ್ರತಿ ವರ್ಷ ಶೇ.೧ರಷ್ಟು ಕಡಿಮೆಯಾಗುತ್ತಿದ್ದು ೧೯೮೩ರಲ್ಲಿ ಶೇ.೪೬.೯ರಷ್ಟು ಇದ್ದ ದೇಶದ ಬಡತನ ೨೦೦೫ರ ಹೊತ್ತಿಗೆ ೨೮.೪ರಷ್ಟು ಕಡಿತಗೊಳ್ಳುತ್ತಾ ಬಂದಿದೆ. ಈ ಯೋಜನೆಯನ್ನು ಸಕ್ರಿಯವಾಗಿ ಅನುಷ್ಠಾನಗೊಳಿಸುವುದರಿಂದ ಬಡತನ ಕುಟುಂಬಗಳು ಹೆಚ್ಚು ಹೆಚ್ಚು ಸಾಮಾಜಿಕ ಜಮಾಬಂದಿ ಗ್ರಾಮಸಭೆಗಳಲ್ಲಿ ಭಾಗವಹಿಸಿ ಸಬಲೀಕರಣ ಹೊಂದಲು ಸಹಾಯಕಾರಿಯಾಗಿದೆ.

ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯು ಬಡವರ ಕೈಯಲ್ಲಿನ ಬ್ರಹ್ಮಾಸ್ತ್ರದಂತೆ ಕೆಲಸ ಮಾಡುತ್ತದೆ. ಸಾಮಾಜಿಕ ಜಮಾಬಂದಿ ಸಭೆಯ ಈ ಯೋಜನೆಯನ್ನು ನಿಯಮಾನುಸಾರವಾಗಿ ಕಾನೂನುಬದ್ಧವಾಗಿ ಜಾರಿಗೆ ತರುವುದರಿಂದ ಉತ್ತಮವಾಗಿ ಅನುಷ್ಠಾನಗೊಂಡು ಏಪ್ರಿಲ್‌ನಿಂದ ಮಾರ್ಚ್ ೨೦೧೦ರ ಹೊತ್ತಿಗೆ ೫೦ ಮಿಲಿಯನ್ ಕುಟುಂಬಗಳಿಗೆ ಕೂಲಿ ಕೆಲಸ ಅಥವಾ ಉದ್ಯೋಗ ಸೃಷ್ಟಿಸಿದೆ. ೨.೮. ಬಿಲಿಯನ್ ದಿನಗಳ ಕೂಲಿಕೆಲಸವನ್ನು ದೃಢೀಕರಿಸಲಾಗಿದೆ. ೩೮೦ ಬಿಲಿಯನ್ ರೂಪಾಯಿ ಹಣ ಖರ್ಚು ಮಾಡಿ ಗ್ರಾಮೀಣ ಭಾಗದ ಜನರಿಗೆ ಜೀವನ ಮಟ್ಟ ಸುಧಾರಿಸಿದೆ. ಉದ್ಯೋಗ ಬೇಡಿಕೆ ನೀಡಿದ ೧೫ ದಿನಗಳ ನಂತರ ಕೂಲಿಕೆಲಸ ನೀಡಿದ ಕುಟುಂಬಗಳ ಕೂಲಿಯ ಪೂರ್ಣ ಹಣವನ್ನು ಸಂದಾಯ ಮಾಡಬೇಕಾಗಿರುತ್ತದೆ. ಸಕ್ರಿಯವಾಗಿ ವರ್ಷಕ್ಕೆ ಎರಡು ಬಾರಿ ಸಾಮಾಜಿಕ ಲೆಕ್ಕಪರಿಶೋಧನೆ ಗ್ರಾಮಸಭೆಗಳನ್ನು ನಿರ್ವಹಿಸುವುದರಿಂದ ಗ್ರಾಮಸಭೆಗಳಲ್ಲಿ ಜನರ ಭಾಗವಹಿಸುವಿಕೆ ಹೆಚ್ಚಾಗಿ ಕಂಡುಬರುತ್ತಿದೆ. ಈ ಯೋಜನೆ ಫಲಾನುಭವ ಪಡೆಯುವವರಲ್ಲಿ ಮಹಿಳೆಯರ ಸಂಖ್ಯೆ ಹೆಚ್ಚಾಗಿದೆ. ರಾಜಸ್ಥಾನ,

ತಮಿಳುನಾಡು, ಮಧ್ಯಪ್ರದೇಶ, ಆಂಧ್ರಪ್ರದೇಶಗಳಲ್ಲಿ ಸಾಮಾಜಿಕ ಜಮಾಬಂದಿ ಗ್ರಾಮಸಭೆಗಳಲ್ಲಿ ಮತ್ತು ಸಾಮಾನ್ಯ ಗ್ರಾಮಸಭೆಗಳಲ್ಲಿ ಮಹಿಳೆಯರ ಭಾಗವಹಿಸುವಿಕೆ ಶೇ.೪೮ರಷ್ಟು ಹೆಚ್ಚಾಗಿರುವುದು ಕಂಡುಬಂದಿದೆ.

ಗ್ರಾಮೀಣ ತಳಸಮುದಾಯದ ಮಹಿಳೆಯರು ಹೆಚ್ಚು ಹೆಚ್ಚು ಗ್ರಾಮಸಭೆಗಳಲ್ಲಿ ಭಾಗವಹಿಸುತ್ತಿದ್ದಾರೆ. ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯ ಮಹಿಳೆಯರು ಹೆಚ್ಚು ಭಾಗವಹಿಸಿ ಯೋಜನೆಯ ಉಪಯುಕ್ತತೆಯನ್ನು ಪಡೆಯುತ್ತಿದ್ದಾರೆ. ಈ ರೀತಿ ಗ್ರಾಮಸಭೆಗಳಲ್ಲಿ ಗ್ರಾಮೀಣ ತಳಸಮುದಾಯಗಳು ಹೆಚ್ಚು ಭಾಗವಹಿಸುವುದರಿಂದ ಗ್ರಾಮಪಂಚಾಯಿತಿಗಳಲ್ಲಿ ಭ್ರಷ್ಟಾಚಾರಗಳು ಬಯಲಾಗುತ್ತಿದ್ದು ಗ್ರಾಮಪಂಚಾಯಿತಿ ಪಾರದರ್ಶಕ ಆಡಳಿತ ನೀಡುವಂತಹ ಸ್ಥಿತಿಯುಂಟಾಗಿದೆ. ಪ್ರಜಾಸತ್ತಾತ್ಮಕ ಆಡಳಿತ ವ್ಯವಸ್ಥೆಯು ಸಾಮಾಜಿಕ ಜಮಾಬಂದಿ ಸಭೆಯಿಂದ ಸಾಧ್ಯವಾಗುತ್ತಿದೆ. ಸಾಮಾಜಿಕ ಜಮಾಬಂದಿ ಗ್ರಾಮಸಭೆಗಳು ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆ ಸಕ್ರಿಯವಾಗಿ ಅನುಷ್ಠಾನಗೊಳಿಸುವಲ್ಲಿ ಪ್ರಧಾನ ಪಾತ್ರ ವಹಿಸಿವೆ. ಈ ಯೋಜನೆ ಅನುಷ್ಠಾನದಿಂದ ಗ್ರಾಮೀಣ ಭಾಗದಲ್ಲಿ ವಲಸೆ ಕಡಿಮೆಯಾಗಿದ್ದು ಕಾರ್ಮಿಕರಿಗೆ ಕೂಲಿಕೆಲಸಗಳ ಅವಕಾಶ ಹೆಚ್ಚು ದೊರೆತಿದೆ. ಗ್ರಾಮೀಣ ಭಾಗದಲ್ಲಿ ಇತರೆ ಕೂಲಿ ಕೆಲಸಗಳಿಗೂ ಹೆಚ್ಚು ಬೇಡಿಕೆ ಇರುವುದರಿಂದ ಕೂಲಿಕೆಲಸದ ವೇತನ ಹೆಚ್ಚಾಗಿದೆ.

ರಾಜಸ್ಥಾನದ ದುಗಣುರ ಜಿಲ್ಲೆಯ ಗ್ರಾಮಪಂಚಾಯಿತಿಯಲ್ಲಿ ವರ್ಷಕ್ಕೆ ಕೇವಲ ೭೬ ದಿನಗಳು ಮಾತ್ರ ಕುಟುಂಬಕ್ಕೆ ಕೆಲಸ ನೀಡಿರುವ ಅಂಶಗಳು ಪತ್ತೆ ಆಗಿವೆ. ಗ್ರಾಮಪಂಚಾಯಿತಿಗಳ ಸಾಮಾಜಿಕ ಜಮಾಬಂದಿ ಗ್ರಾಮಸಭೆಗಳಲ್ಲಿ ಭಾಗವಹಿಸಿದ ಶೇ.೮೦ರಷ್ಟು ಜನರಿಗೆ ಸಾಮಾಜಿಕ ಜಮಾಬಂದಿ ಅರಿವು ಇಲ್ಲದೆ ಮೂಕ ಪ್ರೇಕ್ಷಕರಂತೆ ಸಭೆಯಲ್ಲಿ ಹಾಜರಾಗಿ ಯಾವುದೇ ಸಮಸ್ಯೆಗಳ ಬಗ್ಗೆ ಚರ್ಚಿಸದೆ ಗ್ರಾಮಸಭೆಗಳನ್ನು ಮುಕ್ತಾಯಗೊಳಿಸಲಾಗಿದೆ. ರಾಜಸ್ಥಾನದ ಜಿಲ್ಲೆಗಳಲ್ಲಿ ಸಾಮಾಜಿಕ ಜಮಾಬಂದಿ ಗ್ರಾಮಸಭೆಯು ಯಶಸ್ವಿಯಾಗದಿರಲು ರಾಜ್ಯವು ಹೆಚ್ಚು ಭೌಗೋಳಿಕವಾಗಿ ವಿಸ್ತೀರ್ಣ ಹೊಂದಿರುವ ರಾಜ್ಯವಾಗಿರುವುದು ಕಾರಣವಾಗಿದೆ. ಈ ರಾಜ್ಯದಲ್ಲಿ ಅನಕ್ಷರತೆ ಹೆಚ್ಚಾಗಿದೆ. ಮಹಿಳಾ ಅನಕ್ಷರತೆ ಹೆಚ್ಚಾಗಿರುವುದು ಮಹಿಳೆಯರು ಸಾರ್ವಜನಿಕ ಜಮಾಬಂದಿ ಗ್ರಾಮಸಭೆ ನಡೆಯದಿರಲು ಕಾರಣಗಳಾದರೂ ಸಾಮಾಜಿಕ ಜಮಾಬಂದಿ ಗ್ರಾಮಸಭೆಗಳನ್ನು ನಡೆಸಲಾದ ಕೆಲವು ಗ್ರಾಮಪಂಚಾಯಿತಿಗಳ ವ್ಯಾಪ್ತಿಗಳಲ್ಲಿ ರಾಜ್ಯದ ವ್ಯಾಪ್ತಿಯಲ್ಲಿ ಹಲವಾರು ಪರೋಕ್ಷ ಉಪಯೋಗಗಳಾಗಿರುವುದು ಈ ಅಧ್ಯಯನದಿಂದ ತಿಳಿದುಬರುತ್ತದೆ.

೩. **Salim lakha** ಅವರ **Accountability from below the experience of MGNREGA in Rajasthan (India)** ಲೇಖನವು ರಾಜಸ್ಥಾನದ ದುರ್ಗಾಪುರ, ಬನಸವರ

ಜಿಲ್ಲೆಗಳಲ್ಲಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯ ಅನುಷ್ಠಾನ ಕುರಿತಂತೆ ಸಾಮಾಜಿಕ ಜಮಾಬಂಧಿ ಅಥವಾ ಸಾಮಾಜಿಕ ಲೆಕ್ಕಪರಿಶೋಧನೆಯ ಪಾತ್ರವನ್ನು ಕುರಿತು ಚರ್ಚಿಸಿದೆ. ಗ್ರಾಮಪಂಚಾಯಿತಿಗಳ ಪಾರದರ್ಶಕ ಆಡಳಿತದಿಂದ ಸಾಮಾಜಿಕ ಲೆಕ್ಕ ಪರಿಶೋಧನೆ ಸಭೆಗಳನ್ನು ನಡೆಸುವುದರಿಂದ ತಳ ಮಟ್ಟದ ಸಮುದಾಯಗಳಿಗೆ ಅದರ ಉಪಯೋಗ ಸಿಗುತ್ತದೆ. ಅದರಿಂದ ಎನ್.ಜಿ.ಓ.ಗಳಿಗೆ ಹಣಕಾಸು ಸಹಾಯ ಸಿಗುತ್ತದೆ.[೬] ಸಾಮಾಜಿಕ ಜಮಾಬಂಧಿ ನಡೆಸುವುದರಿಂದ ಜನರಿಗೆ ಸರ್ಕಾರಿ ಸೇವೆಗಳು ಸಿಗುವುದರ ಜೊತೆಗೆ ತಳಸಮುದಾಯಗಳಿಗೆ ಬೇಕಾದಂತಹ ಅಭಿವೃದ್ಧಿ ನಿರ್ವಹಣೆಗೆ ಹೆಚ್ಚು ಅವಕಾಶಗಳು ಸಿಗುತ್ತವೆ. ಎನ್.ಜಿ.ಓ.ಗಳಿಗೆ ಕೇಂದ್ರ ಸರ್ಕಾರಗಳಿಂದ, ಇತರೆ ಸಂಸ್ಥೆಗಳಿಂದ ಮತ್ತು ವಿದೇಶಗಳಿಂದ ಧನಸಹಾಯದ ನೆರವು ಹೆಚ್ಚು ಸಿಗುತ್ತದೆ. ಸಾಮಾಜಿಕ ಜಮಾಬಂಧಿಯು ಸಾಮಾಜಿಕ ನ್ಯಾಯದ ಪಾರದರ್ಶಕತೆಯನ್ನು ಉಂಟುಮಾಡುತ್ತದೆ. ಸರ್ಕಾರಗಳ ಸ್ಥಳೀಯ ಸಂಸ್ಥೆಗಳ ಆಡಳಿತ ಸುಧಾರಣೆಯಾಗುತ್ತದೆ, ಅಭಿವೃದ್ಧಿ ಯೋಜನೆಗಳು ಉತ್ತಮವಾಗುತ್ತವೆ. ಯೋಜನೆಗಳು ಪರಿಣಾಮಕಾರಿಯಾಗಿ ಮತ್ತು ಸಬಲೀಕರಣಗೊಳಿಸುವ ನಿಟ್ಟಿನಲ್ಲಿ ಈ ಸಾಮಾಜಿಕ ಜಮಾಬಂಧಿ ಸಭೆಯು ತಳಸಮುದಾಯಕ್ಕೆ ಸಹಕಾರಿಯಾಗಿದೆ.

ಸಬಲೀಕರಣ ಎಂದರೆ ಆರ್ಥಿಕವಾಗಿ ಪ್ರಬಲವಾಗಿರುವುದರ ಜೊತೆಯಲ್ಲಿ ಸಮುದಾಯ ಅಭಿವೃದ್ಧಿ ಅವಶ್ಯಕತೆಗಳನ್ನು ಅರ್ಥ ಮಾಡಿಕೊಳ್ಳುವುದು, ಅಭಿಪ್ರಾಯಗಳನ್ನು ವ್ಯಕ್ತಪಡಿಸುವುದು, ಸಮುದಾಯಗಳು ತಮ್ಮ ಅಭಿವೃದ್ಧಿಗೆ ಬೇಕಾದ ಅವಶ್ಯಕತೆಗಳ ಸಂಪನ್ಮೂಲಗಳನ್ನು ಆಯ್ಕೆ ಮಾಡಿ ಕೊಳ್ಳುವುದು, ಸಮುದಾಯಗಳು ಇತರೆ ಸಮುದಾಯಗಳೊಂದಿಗೆ, ಸರ್ಕಾರಗಳೊಂದಿಗೆ ಪ್ರತಿಸ್ಪಂದಿಸುವುದು, ತಳಸಮುದಾಯದ ಜನರಿಗೆ ತಮ್ಮ ಆಯ್ಕೆ ಸ್ವಾತಂತ್ರ್ಯವನ್ನು ಒದಗಿಸುವುದು, ತಮ್ಮ ಸಮಸ್ಯೆಗಳ ಬಗ್ಗೆ ಮುಕ್ತವಾಗಿ ಚರ್ಚಿಸುವುದು ಸಾಮಾಜಿಕ ಜಮಾಬಂಧಿ ಸಭೆಯ ಉದ್ದೇಶ ವಾಗಿದೆ. ಯೋಜನೆಗಳ ಕುರಿತು, ಸರ್ಕಾರದ ಅವಕಾಶಗಳ ಕುರಿತು ಹಂತಹಂತವಾಗಿ ಅರಿವು ಹೊಂದುವುದು ಕಂಡುಬಂದಿದೆ.

ಸಾಮಾಜಿಕ ಜಮಾಬಂಧಿ ಗ್ರಾಮಸಭೆಯು ಸಾಮಾನ್ಯ ಗ್ರಾಮಸಭೆಗಳನ್ನು ಉನ್ನತೀಕರಿಸಿವೆ. ಜಮಾಬಂಧಿ ಗ್ರಾಮಸಭೆಗಳಲ್ಲಿ ತಳಸಮುದಾಯಗಳಿಗೆ, ಮಹಿಳೆಯರಿಗೆ, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದವರಿಗೆ, ಹಿಂದುಳಿದ ವರ್ಗದವರಿಗೆ ಗ್ರಾಮಸಭೆಗಳಲ್ಲಿ ದಾಖಲೆಗಳನ್ನು ಪರಿಶೋಧಿಸುವ ಅವಕಾಶ ಇರುವುದರಿಂದ ಮತ್ತು ಸಭೆಯಲ್ಲಿ ದೂರುಗಳನ್ನು ಸಲ್ಲಿಸುವ ಅವಕಾಶವಿರುವುದರಿಂದ ಮಧ್ಯಪ್ರದೇಶದಲ್ಲಿ ರಾಜಸ್ಥಾನದ ಮಾದರಿಯಲ್ಲಿ ಪಂಚಾಯತ್‌ರಾಜ್ ಇಲಾಖೆಯು ಸಾಮಾಜಿಕ ಲೆಕ್ಕಪರಿಶೋಧನಾ ಗ್ರಾಮಸಭೆಯನ್ನು ಆಯೋಜಿಸಲಾಗುತ್ತದೆ ಕರ್ನಾಟಕದ ಮಾದರಿಯಂತೆ ಸಾಮಾಜಿಕ ಲೆಕ್ಕಪರಿಶೋಧನಾ ಮೇಲ್ವಿಚಾರಕರು ಬೇರೆ ಬೇರೆ ಇಲಾಖೆಯ ಪ್ರಥಮ ಮತ್ತು

ದ್ವಿತೀಯ ದರ್ಜೆಯ ಅಧಿಕಾರಿಗಳ ಅಧೀನದಲ್ಲಿ ನಡೆಯುತ್ತದೆ ಎನ್.ಜಿ.ಓ.ಗಳು ಮಧ್ಯಪ್ರದೇಶದ ಸಾಮಾಜಿಕ ಜಮಾಬಂದಿ ಗ್ರಾಮಸಭೆಗಳಲ್ಲಿ ಭಾಗವಹಿಸುವುದಿಲ್ಲ. ಗ್ರಾಮಸಭೆಗಳಲ್ಲಿ ಯಾವುದೇ ದೂರುಗಳ ದಾಖಲೆ ಆಗಿಲ್ಲ. ತೀರಾ ಕಡಿಮೆ ಗ್ರಾಮಸ್ಥರ ಭಾಗವಹಿಸುವಿಕೆ ಕಂಡುಬಂದಿತ್ತು. ಸಾಮಾಜಿಕ ಜಮಾಬಂದಿಯ ಕುರಿತು ಯೋಜನೆಯ ಫಲಾನುಭವಿಗಳಿಗೆ ಅರಿವು ತೀರಾ ಕಡಿಮೆಯಿದೆ. ಜಾರಹ, ಜೆಂಡ್ರಾ ಗ್ರಾಮಸಭೆ ಕಡಿಮೆ ಕೂಲಿ ನೀಡುತ್ತಿರುವ ಕುರಿತು, ಕಡಿಮೆ ದಿನಗಳು ಕೂಲಿ ಕೆಲಸ ನೀಡುತ್ತಿರುವ ಕುರಿತು ದೂರುಗಳು ದಾಖಲೆ ಆಗಿವೆ. ಒಮ್ಮೆ ೧೮ ಗ್ರಾಮಗಳಲ್ಲಿ ಸಾಮಾಜಿಕ ಲೆಕ್ಕಪರಿಶೋಧನೆ ನಡೆಸಿದ್ದರೆ ಕೆಲವು ಗ್ರಾಮಗಳ ಕಾರ್ಯದರ್ಶಿಗಳು ಬ್ಯಾಂಕ್ ಖಾತೆಗಳಿಗೆ ಹಣ ನೀಡದಿರುವ, ಮತ್ತೊಂದು ಗ್ರಾಮದ ಫಲಾನುಭವಿಗಳನ್ನು ಲಂಚ ಪಡೆದು ಆಯ್ಕೆ ಮಾಡುತ್ತಿರುವುದು ಕಂಡುಬಂದಿದೆ. ಕೆಲವು ಗ್ರಾಮಗಳಲ್ಲಿ ಗ್ರಾಮಸ್ಥರ ಸಹಿಯನ್ನು ನಕಲು ಮಾಡಿ ಫಲಾನುಭವಿಗಳ ಹಣವನ್ನು ಕಾರ್ಯದರ್ಶಿಗಳು ತಿಂದಿರುವುದು ಕಂಡುಬಂದಿದೆ.

ಒಟ್ಟಾರೆ ಮೂರು ರಾಜ್ಯಗಳ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಆಯೋಜನೆಯಲ್ಲಿ ಆಂಧ್ರಪ್ರಧೇಶವು ಉತ್ತಮವಾಗಿ ಕಂಡುಬಂದಿದೆ. ಸಾವಮಾಜಿಕ ಜಮಾಬಂದಿಯು ಹೆಚ್ಚು ಪಾರದರ್ಶಕವಾಗಿ ನಡೆಯುತ್ತಿದೆ. ಸಾರ್ವಜನಿಕರು ಗ್ರಾಮಸಭೆಗಳಲ್ಲಿ ಹೆಚ್ಚು ಭಾಗವಹಿಸುತ್ತಾರೆ. ಸಾಮಾಜಿಕ ಜಮಾಬಂದಿ ಸಭೆಗಳಲ್ಲಿ ಕಳಪೆ ಕಾಮಗಾರಿಗಳ ಕುರಿತು ದಾಖಲೆಗಳ ಪರಿಶೋಧನೆಗೆ ಅವಕಾಶ, ಎನ್.ಜಿ.ಓ.ಗಳು ಗ್ರಾಮಸಭೆಗಳಲ್ಲಿ ಭಾಗವಹಿಸುತ್ತವೆ. ಆದ್ದರಿಂದ ಗ್ರಾಮಸ್ಥರು ಸಾಮಾಜಿಕ ಜಮಾಬಂದಿ ಗ್ರಾಮಸಭೆಗಳಲ್ಲಿ ಸಕ್ರಿಯವಾಗಿ ನಡೆಸುತ್ತಾರೆ. ಜನರು ಸರ್ಕಾರಿ ಯೋಜನೆಗಳ ಫಲಾನುಭವವನ್ನು ಹೆಚ್ಚು ಪರಿಣಾಮಕಾರಿಯಾಗಿ ಪಡೆಯುತ್ತಾರೆ. ರಾಜಸ್ಥಾನ ಮತ್ತು ಮಧ್ಯ ಪ್ರದೇಶಗಳಲ್ಲಿ ಆಂಧ್ರಪ್ರದೇಶದಂತೆ ಗ್ರಾಮಪಂಚಾಯಿತಿ ಸಂಸ್ಥೆಗಳಿಗೆ ಹೆಚ್ಚಿನ ಅಧಿಕಾರ ವಿಕೇಂದ್ರೀಕರಣ ನೀಡದಿರುವುದರಿಂದ ಹೆಚ್ಚು ಜನಪರವಾಗಿ ಇಲ್ಲದೆ, ಎನ್.ಜಿ.ಓ.ಗಳಿಗೆ ಅವಕಾಶಗಳು ಇಲ್ಲದಿರುವುದ ರಿಂದ ಸಾಮಾಜಿಕ ಜಮಾಬಂದಿ ಗ್ರಾಮಸಭೆಗಳು ಈ ಎರಡೂ ರಾಜ್ಯಗಳಲ್ಲಿ ಯಶಸ್ವಿ ಯಾಗದಿರುವುದು ಕಂಡುಬಂದಿದೆ.

ಕೊಂಡ್ಯಾರಾ ಗ್ರಾಮದಲ್ಲಿ ಸಾಮಾಜಿಕ ಜಮಾಬಂದಿ ಸಭೆಯನ್ನು ಕಾರ್ಯಾನುಷ್ಠಾನಕ್ಕೆ ತರಲಾಯಿತು. ಇಪ್ಪತ್ತು ಜಿಲ್ಲಾ ಸಂಪನ್ಮೂಲಗಳು ಮತ್ತು ಇಬ್ಬರು ರಾಜ್ಯ ಸಂಪನ್ಮೂಲ ವ್ಯಕ್ತಿಗಳು ಮೂವತ್ತೊಂದು ಜನ ಸಾಮಾಜಿಕ ಲೆಕ್ಕಪರಿಶೋಧಕರು ೨೦೦೬ ನವೆಂಬರ್ ತಿಂಗಳಲ್ಲಿ ಎಂಟು ದಿನಗಳ ಗ್ರಾಮಸಮೀಕ್ಷೆ ನಡೆಸಿ ಸಾಮಾಜಿಕ ಲೆಕ್ಕಪರಿಶೋಧನಾ ಗ್ರಾಮಸಭೆಯನ್ನು ಆಯೋಜಿಸ ಲಾಯಿತು. ಈ ಪರಿಶೋಧನಾ ಸಭೆಯಲ್ಲಿ ಭ್ರಷ್ಟಾಚಾರದಲ್ಲಿ ತೊಡಗಿದ್ದ ಗ್ರಾಮಸಮೀಕ್ಷೆ ಸಹಾಯಕರನ್ನು

ಅಮಾನತ್ತುಗೊಳಿಸಲಾಯಿತು. ಲೆಕ್ಕಪರಿಶೋಧನೆಯ ಕುರಿತು ಪ್ರಚಾರ ಕೈಗೊಳ್ಳದೇ ಕಾಮಗಾರಿಗಳನ್ನು ತಪ್ಪಾಗಿ ಗುರುತಿಸಲಾಗಿತ್ತು. ಗ್ರಾಮದಲ್ಲಿ ಪೋಸ್ಟ್ ಮಾಸ್ಟರ್ ಕೂಲಿಗಾರಿಗೆ ವೇತನ ಖಾತೆಯಿಂದ ವೇತನ ನೀಡಲು ಲಂಚ ರೂಪದಲ್ಲಿ ಹಣ ಪಡೆಯುತ್ತಿದ್ದುದನ್ನು ಕಂಡುಹಿಡಿಯಲಾಯಿತು. ಕಾರ್ಮಿಕರಿಗೆ ಕೂಲಿ ನೀಡದೇ ಅಕ್ರಮವೆಸಗಿದ ೧೭ ಗ್ರಾಮಪಂಚಾಯಿತಿಗಳ ಭ್ರಷ್ಟ ಸದಸ್ಯರನ್ನು ಅಮಾನತ್ತು ಮಾಡಿ ಅವರಿಂದ ಸಾಲದ ಹಣ ಹಿಂಪಡೆಯಲಾಯಿತು. ಈ ಕಾರ್ಯಾಚರಣೆ ಅಥವಾ ಸಾಮಾಜಿಕ ಲೆಕ್ಕಪರಿಶೋಧನಾ ಸಭೆಯಿಂದ ಭ್ರಷ್ಟಾಚಾರ ಕಡಿತಗೊಂಡಿತ್ತು. ಉದ್ಯೋಗ ವೇತನಗಳನ್ನು ಮತ್ತು ಮಾಸ್ಟರ್ ರೋಲ್‌ಗಳನ್ನು ಸರಿಯಾದ ದಿನಾಂಕದಲ್ಲಿ ನೀಡಲಾಯಿತು. ಈ ದಿನಗಳ ನಂತರ ಕಾರ್ಮಿಕರ ಕೂಲಿವೇತನ ಮಾಡುವಂತೆ ಗ್ರಾಮಪಂಚಾಯಿತಿ ವ್ಯವಸ್ಥೆಯು ಬದಲಾಯಿತು.

ರಾಜಸ್ಥಾನದ ೧೮ ಗ್ರಾಮಗಳಲ್ಲಿ ಸಾಮಾಜಿಕ ಲೆಕ್ಕಪರಿಶೋಧನೆಯನ್ನು ಜಾರಿಗೆ ತರಲಾಯಿತು. ಕೋಡಾ, ಧಾರಕಡ, ಗರಡ, ಧೂನ್‌ದಿಯ್ ಗ್ರಾಮಗಳು ಪಂಚಾಯತ್‌ರಾಜ್ ಇಲಾಖೆಯ ಸಾಮಾಜಿಕ ಜಮಾಬಂದಿ ಗ್ರಾಮಸಭೆಯನ್ನು ಆಯೋಜಿಸುತ್ತವೆ. ಆಂಧ್ರಪ್ರದೇಶಕ್ಕಿಂತ ಭಿನ್ನವಾದ ರೀತಿಯಲ್ಲಿ ಈ ರಾಜ್ಯದಲ್ಲಿ ಸಾಮಾಜಿಕ ಜಮಾಬಂದಿ ನಡೆಯುತ್ತದೆ. ಎನ್.ಜಿ.ಓ.ಗಳ ಭಾಗವಹಿಸುವಿಕೆ ಇರುವುದಿಲ್ಲ. ಮನೋಹರ್ ತಾಂಡ ಮತ್ತು ಬೀಲ್‌ವರ ತಾಲ್ಲೂಕುಗಳ ತಾಲ್ಲೂಕು ಪಂಚಾಯಿತಿ ಅಧ್ಯಕ್ಷರು ಸಾಮಾಜಿಕ ಜಮಾಬಂದಿ ಗ್ರಾಮಸಭೆಯನ್ನು ಆಯೋಜಿಸುತ್ತಾರೆ. ಗ್ರಾಮಸಭೆ ನಡೆದ ನಂತರ ಅಧ್ಯಕ್ಷರು ಕಾಮಗಾರಿ, ಅನುಮತಿ, ಖರ್ಚು, ಕೂಲಿ ದಿನಗಳು, ವೇತನ ಬಿಡುಗಡೆ ಕುರಿತು, ಫಲಾನುಭವಿಗಳ ಆಯ್ಕೆ ಕುರಿತು ಸಾಮಾಜಿಕ ಜಮಾಬಂದಿ ಗ್ರಾಮಸಭೆ ಅಧ್ಯಕ್ಷರು ಓದಿ ಸಭೆಯನ್ನು ಮುಕ್ತಾಯಗೊಳಿಸುತ್ತಾರೆ. ಈ ಸಭೆಯಲ್ಲಿ ೧೦೦ ದಿನಗಳು ಕಳೆದರೂ ವೇತನ ನೀಡದಿರುವುದರ ಕುರಿತು ದೂರುಗಳು ಬಂದಿವೆ. ಅನರ್ಹರಿಗೆ ಕಾಮಗಾರಿಗಳನ್ನು ಗುತ್ತಿಗೆ ನೀಡಿರುವುದು, ಅಧ್ಯಕ್ಷರ ಹತ್ತಿರವಿರುವ ಸ್ಥಳೀಯ ವ್ಯವಸ್ಥೆಯಲ್ಲಿ ಪ್ರಬಲವಾಗಿರುವಂತಹವರಿಗೆ ಕಾಮಗಾರಿಗಳನ್ನು ನೀಡಿರುವ ದೂರಗಳು ಬಂದರೂ ಅವುಗಳನ್ನು ಪರಿಗಣಿಸದೇ ಸಭೆಯನ್ನು ಮುಕ್ತಗೊಳಿಸಿರುವುದು ರಾಜಸ್ಥಾನದಲ್ಲಿ ಕಂಡುಬಂದಿದೆ.

೪. **Shylashri Shankar** ಅವರ **Can social Audits count ASARC working paper** ಲೇಖನವು ಆಂಧ್ರಪ್ರದೇಶ, ರಾಜಸ್ಥಾನ ಮತ್ತು ಮಧ್ಯಪ್ರದೇಶ ರಾಜ್ಯಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿದೆ. ಆಂದ್ರಪ್ರದೇಶದಲ್ಲಿ ೮ ಹಳ್ಳಿಗಳನ್ನು ರಾಜಸ್ಥಾನ ಮತ್ತು ಮಧ್ಯಪ್ರದೇಶದಲ್ಲಿ ತಲಾ ೮ ಹಳ್ಳಿಗಳನ್ನು ಆಯ್ಕೆ ಮಾಡಿಕೊಂಡು ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯ ನಿಯಮಾವಳಿಯ ಪ್ರಕಾರ ಸಾಮಾಜಿಕ ಲೆಕ್ಕಪರಿಶೋಧನೆಯು ಅಥವಾ ಸಾಮಾಜಿಕ ಅಮಾಬಂದಿ ಕಾರ್ಯಾನುಷ್ಠಾನಗೊಳ್ಳುತ್ತದೆಯೇ ಮತ್ತು ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ನಡೆಸುವ

ಸಂದರ್ಭದಲ್ಲಿ ಕಂಡುಬರುವ ಸಮಸ್ಯೆಗಳ ಕುರಿತು ಚರ್ಚಿಸಲಾಗಿದೆ. ಮೊದಲನೆಯದಾಗಿ ನಿಯಮಾವಳಿಯಲ್ಲಿರುವ ಸಮಸ್ಯೆಗಳನ್ನು ಪ್ರಶ್ನಿಸದೇ ಗ್ರಾಮಸ್ಥರು ಮತ್ತು ಅಧಿಕಾರಿಗಳು ಇರುವುದು ಸಾಮಾಜಿಕ ಲೆಕ್ಕಪರಿಶೋಧನಾ ಸಿಬ್ಬಂದಿ ಅಧಿಕಾರಿಗಳು ಮತ್ತು ಎನ್.ಜಿ.ಓ ಸದಸ್ಯರ ನಡುವಿನ ಹೊಂದಾಣಿಕೆ ಇಲ್ಲದಿರುವುದು, ಸಾರ್ವಜನಿಕ ಲೆಕ್ಕಪರಿಶೋಧನೆ ಮಾಡುವ ಸಿಬ್ಬಂದಿಯವರು, ಗ್ರಾಮಪಂಚಾಯಿತಿಯವರು ಖಾಯಂ ಸಿಬ್ಬಂದಿಯಾಗಿರುವುದಿಲ್ಲ. ಗ್ರಾಮಪಂಚಾಯಿತಿ ಸಿಬ್ಬಂದಿ ಸರ್ಕಾರಿ ಅಧಿಕಾರಿಗಳಾಗಿರುತ್ತಾರೆ. ಸಾಮಾಜಿಕ ಲೆಕ್ಕಪರಿಶೋಧನಾ ಸಿಬ್ಬಂದಿಯವರು ತಾತ್ಕಾಲಿಕ ಸಿಬ್ಬಂದಿಗಳಾಗಿರುತ್ತಾರೆ. ಗ್ರಾಮದ ರಾಜಕೀಯ ಪ್ರತಿನಿಧಿಗಳು ಗ್ರಾಮಪಂಚಾಯಿತಿ ಮತ್ತು ಯೋಜನೆಗಳು ಅಧಿಕಾರಿಗಳ ಅಧೀನದಲ್ಲಿ ಕಾರ್ಯಾನುಷ್ಠಾನಗೊಳ್ಳುವಂತೆ ನೋಡಿಕೊಳ್ಳುತ್ತಾರೆ. ಸಾಮಾಜಿಕ ಲೆಕ್ಕಪರಿಶೋಧನೆಯು ಯಶಸ್ವಿಯಾಗದಿರಲು ಮತ್ತೊಂದು ಕಾರಣ ಸರ್ಕಾರಗಳು ಯೋಜನೆ ಕುರಿತು ಪೂರ್ವಸಿದ್ಧತೆ ಗುರಿಯನ್ನು ಹೊಂದಿದ್ದು ಗುರಿ ಸಾಧಿಸಲು ಸ್ಥಳೀಯ ಸಂಸ್ಥೆಗಳಿಗೆ ಸೂಚನೆ ನೀಡಲಾಗುತ್ತದೆ.[೪] ಆದರೆ ಆ ಗುರಿ ಸಾಧನೆಗೆ ಬೇಕಾದಂತಹ ಯಾವುದೇ ಸಾಧನ ಸಲಕರಣೆಗಳು, ಕಿಟ್ಟುಗಳು, ಸಾಮಾಜಿಕ ಲೆಕ್ಕಪರಿಶೋಧನಾ ಸಿಬ್ಬಂದಿಗೆ ಮತ್ತು ಗ್ರಾಮಪಂಚಾಯಿತಿ ಸಿಬ್ಬಂದಿಗೆ ತಲುಪಿಸದೇ ಇರುವುದು ಸಾಮಾಜಿಕ ಲೆಕ್ಕಪರಿಶೋಧನೆಯ ವಿಫಲತೆಗೆ ಕಾರಣವಾಗಿದೆ.

ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯು ಬಡತನ ರೇಖೆಗಿಂತ ಕೆಳಗಿರುವ ಜನರಿಗೆ ಉಪಯುಕ್ತವಾಗಬೇಕು. ಆದರೆ ಉತ್ತಮ ಜೀವನಸ್ಥಿತಿಯನ್ನು ಹೊಂದಿದ್ದವರು ಅದರ ಫಲವನ್ನು ಪಡೆಯುತ್ತಿದ್ದಾರೆ. ಬಡವರಿಗೆ ಸ್ವಯಂ ತರಬೇತಿ ಇಲ್ಲದಿರುವುದು, ಫಲಾನುಭವಿಗಳ ಆಯ್ಕೆಯಲ್ಲಿ ದೋಷಗಳು, ಉದ್ಯೋಗ ಬೇಡಿಕೆಯನ್ನು ಮಂಜೂರು ಮಾಡದಿರುವುದು, ಕಾಮಗಾರಿಗಳನ್ನು ಸಿದ್ಧಗೊಳಿಸುವ ಸಮಯದಲ್ಲಿ ಕಳಪೆ ಕೆಲಸಗಳನ್ನು ಆಯ್ಕೆ ಮಾಡುವುದು ಈ ರೀತಿಯ ಸಮಸ್ಯೆಗಳಿಂದ ರಾಷ್ಟ್ರೀಯ ಉದ್ಯೋಗ ಖಾತರಿ ಸಾಮಾಜಿಕ ಲೆಕ್ಕಪರಿಶೋಧನೆಯು ಸಕ್ರಿಯವಾಗಿ ನಡೆಯದೇ ಇರುವುದು ಕಂಡುಬಂದಿದೆ.[೮]

೫. **C.A.K. Yesudian** ಅವರು **Legislative frame work for performance accountability in government** ದೇಶದಲ್ಲಿ ಬಡತನ ನಿರ್ಮೂಲನಾ ವಿಮೋಚನಾ ಯೋಜನೆಗಳನ್ನು ಜಾರಿಗೆ ತರಲಾಯಿತು ಎಂದು ವಿವರಿಸಿದ್ದಾರೆ. ಆ ಎಲ್ಲಾ ಯೋಜನೆಗಳಲ್ಲಿ ಸಲಕರಣೆಗಳು ನಿರೀಕ್ಷಿಸಿದಂತೆ ಯಶಸ್ಸನ್ನು ಸಾಧಿಸಲು ಸಾಧ್ಯವಾಗಲಿಲ್ಲ. ಕೆಲವೊಂದು ಯೋಜನೆಗಳು ಮಾತ್ರ ಜನರಿಗೆ ತಲುಪಿದ್ದು ಯಶಸ್ವಿಯಾಗಿರುವುದು ಕಂಡುಬಂದಿದೆ ಎಂದಿದ್ದರೆ, ಬಹುಪಾಲು ಯೋಜನೆಗಳು ಯಶಸ್ವಿಯಾಗದಿರಲು ಹಲವು ಕಾರಣಗಳನ್ನು ಏಸುದಿನ್ ವಿವರಿಸಿದ್ದಾರೆ. ಐ.ಆರ್.ಡಿ.ಯ ಎಸ್.ಜಿ.ಎಸ್.ವೈ. ಯೋಜನೆಯ ಮೂಲಕ ಗ್ರಾಮೀಣ ಬಡತನದಲ್ಲಿರುವ ಮಹಿಳೆಯರಿಗೆ

ಸ್ವ ಸಹಾಯ ಗುಂಪುಗಳಿಗೆ ಸಾಲ ಸೇವೆ ವ್ಯವಸ್ಥೆಯನ್ನು ಜಾರಿಗೆ ತರಲಾಯಿತು. ಈ ಯೋಜನೆಯಿಂದ ೨೦೦೪ರ ಹೊತ್ತಿಗೆ ೧,೨೩,೨೭೮ ಸ್ವಸಹಾಯ ಗುಂಪುಗಳು ಬ್ಯಾಂಕ್ ಸೇವೆಯನ್ನು ಹೊಂದಿದ್ದವು. ೧,೦೭೯೦೯೧ ಗುಂಪುಗಳು ೩೫,೦೦೦ ಬ್ಯಾಂಕ್‌ಗಳು ಸಾಲವನ್ನು ಪಡೆದಿದ್ದವು. ೧೯ ಮಿಲಿಯನ್ ಜನರು ಸ್ವಸಹಾಯ ಗುಂಪಿನ ಪ್ರಯೋಜನಗಳನ್ನು ಪಡೆದಿದ್ದಾರೆ. ೧೩೩ ಶೇ.(ಬಿ.ಪಿ.ಎಲ್) ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳು ಬ್ಯಾಂಕ್ ಸಾಲ ಸೇವೆಗಳನ್ನು ಪಡೆದರೂ ಚಿಕ್ಕ ಆರ್ಥಿಕ ಸಂಪನ್ಮೂಲ ಸಂಸ್ಥೆಗಳನ್ನು ಅಥವಾ ವ್ಯಾಪಾರ ಸಂಸ್ಥೆಗಳನ್ನು ಸ್ಥಾಪಿಸಿವೆ. ಈ ಸ್ವಸಹಾಯ ಉದ್ಯೋಗ ಕಾರ್ಯಕ್ರಮ ಯಶಸ್ವಿಗೊಳ್ಳಲು ಪ್ರಮುಖ ಕಾರಣ, ಗುಂಪಿನ ಸದಸ್ಯರು ಸಕ್ರಿಯವಾಗಿ ಕಾರ್ಯಕ್ರಮದ ಪ್ರತಿ ಹಂತದಲ್ಲಿ ಭಾಗವಹಿಸುವಿಕೆ ಕಾರಣವಾಗಿದೆ. ಈ ಸ್ವಸಹಾಯ ಗುಂಪುಗಳಲ್ಲಿ ನೀಡಿದ ಬ್ಯಾಂಕ್ ಸಾಲದ ನಿರ್ವಹಣೆಯನ್ನು ತಮ್ಮ ಗುಂಪು ಸ್ವತಂತ್ರವಾಗಿ ಬಳಸಿಕೊಳ್ಳುವ ಅವಕಾಶ ನೀಡಿರುವುದು, ಸ್ವಸಹಾಯಗುಂಪುಗಳ ಮೇಲ್ವಿಚಾರಣೆ ಬ್ಯಾಂಕಿನ ಸಲಹೆಗಾರರನ್ನು ನೀಡಿರುವುದು ಈ ಯೋಜನೆ ಯಶಸ್ವಿಗೆ ಕಾರಣವಾಗಿದೆ. ವೇಜ್ ಎಂಪ್ಲಾಯಮೆಂಟ್ ಪ್ರೋಗ್ರಾಮ್ ಯಶಸ್ವಿಯಾಗದಿರಲು ಕಾರಣ, ಕ್ರಮೇಥ ಹಣಕಾಸಿನ ಸಹಾಯ ಕಡಿಮೆಯಾಗುತ್ತಾ ಬಂದಿದ್ದು ೯ನೇ ಯೋಜನೆಯಲ್ಲಿ ಸರ್ಕಾರವು ನೀಡಿದ ಹಣಕಾಸಿನ ನೆರವು ಶೇ.೫೦ರಷ್ಟು ಹಣಕಾಸು ಮಾತ್ರ ಖರ್ಚಾಗಿದ್ದು ಈ ಯೋಜನೆಯು ನಿರೀಕ್ಷಿಸಿದಷ್ಟು ಯಶಸ್ವಿಯಾಗಲಿಲ್ಲ. ಬಡತನ ರೇಖೆಗಿಂತ ಕಡಿಮೆ ಆದಾಯದ ಜನರು ಯೋಜನೆ ಕುರಿತಾಗಿ ಅರ್ಥಮಾಡಿಕೊಳ್ಳದೇ ಇರುವುದು, ಮಾಸ್ಟರ್ ರೂಲ್ ಅನಧಿಕೃತವಾಗಿ ಬಳಕೆ ಮಾಡಿಕೊಂಡಿರುವುದು ಮತ್ತು ಕೇಂದ್ರದ ಯೋಜನೆಗಳು ಹೆಚ್ಚು ಅಧಿಕಾರಿಗಳ ಅಧೀನದಲ್ಲಿ ನೀಡಿರುವುದು. ಅಭಿವೃದ್ಧಿ ಯೋಜನೆಗಳ ಕುರಿತಾಗಿ ಉತ್ತಮ ತರಬೇತಿ ಹೊಂದಿರದ ಸಿಬ್ಬಂದಿ ಯೋಜನೆ ನಿಯಮಗಳನ್ನು ಸ್ಪಷ್ಟವಾಗಿ ಯೋಜನಾ ಅನುಷ್ಠಾನ ಸಿಬ್ಬಂದಿಗೆ ಒದಗಿಸದೇ ಯೋಜನಾ ಅನುಷ್ಠಾನಕ್ಕೆ ಬೇಕಾದ ಆರ್ಥಿಕ ಸಂಪನ್ಮೂಲಗಳನ್ನು ಆರ್ಥಿಕೇತರ ಸಂಪನ್ಮೂಲಗಳನ್ನು ನೀಡದೇ ಇರುವುದು. ಕೇಂದ್ರ ಸರ್ಕಾರದ ಯೋಜನೆಗಳಿಗೆ ಫಲಾನುಭವವನ್ನು ಪಡೆಯಲು ಸಾಮಾನ್ಯ ಬಿ.ಪಿ.ಎಲ್. ಜನರಿಗೆ ಅರಿವಿಲ್ಲದಿರುವುದು ಯೋಜನೆಗಳು ಯಶಸ್ವಿಯಾಗದಿರಲು ಕಾರಣವೆಂದು ಲೇಖಕರು ವಿವರಿಸಿದ್ದಾರೆ. ಯಾವುದೇ ಯೋಜನೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಕಾರ್ಯಕ್ರಮಗಳು ಯಶಸ್ವಿಯಾಗಬೇಕಾದರೆ ಅಥವಾ ಬಡತನ ನಿರ್ಮೂಲನಾ ಕಾರ್ಯಕ್ರಮಗಳು ಯಶಸ್ವಿಯಾಗಬೇಕಾದರೆ ಗ್ರಾಮೀಣ ಅಥವಾ ಸ್ಥಳೀಯ ಸಮುದಾಯಗಳ ಭಾಗವಹಿಸುವಿಕೆ ಪ್ರಮುಖವಾಗುತ್ತದೆ. ಯಾವುದೇ ಅಭಿವೃದ್ಧಿ ಯೋಜನೆಗಳು ಯಶಸ್ವಿಯಾಗಲ್ಲ, ಬಡತನ ನಿರ್ಮೂಲನಾ ಯೋಜನೆಗಳು ಅನುಷ್ಠಾನಗಳಿಸುವ ಪ್ರದೇಶದ ಸ್ಥಳೀಯ ಜನಸಮುದಾಯಗಳಿಗೆ ಯೋಜನೆಗಳ ಕುರಿತಾದ ಅರಿವು ಮತ್ತು ಮಾಹಿತಿ ನೀಡಬೇಕು. ಆ ಸಮುದಾಯಗಳಿಗೆ ಶಿಕ್ಷಣ ನೀಡಿದ ನಂತರ

ಯೋಜನೆಗಳನ್ನು ಕಾರ್ಯನುಷ್ಠಾನಗೊಳಿಸಬೇಕು. ಇಲ್ಲವಾದರೆ ಯೋಜನೆಗಳು ವಿಫಲಗೊಳ್ಳುತ್ತವೆ. ಬಡತನವನ್ನು ಆರ್ಥಿಕ ದೃಷ್ಟಿಕೋನದಿಂದ ನೋಡುವುದರ ಬದಲಾಗಿ ಅಂದರೆ ಕುಟುಂಬ ಅಥವಾ ಜನರ ಆದಾಯ ವ್ಯಯ-ಖರ್ಚು ಪೌಷ್ಟಿಕಾಂಶ ಸೇವೆಗಳ ಬದಲಾಗಿ ಸಾಮಾಜಿಕ ದೃಷ್ಟಿಕೋನದಿಂದ ಪರಿಗಣಿಸಬೇಕು. ಜನ ಜೀವನ ಮತ್ತು ಸಾಮಾಜಿಕ ತಳಹಂತದಲ್ಲಿರುವ ವೈಯಕ್ತಿಕ ಕುಟುಂಬಗಳ ಅಥವಾ ಸಮುದಾಯಗಳನ್ನು ಸಾಮಾಜಿಕ ಹಿಂದುಳಿದಿರುವುದಕ್ಕೆ ಬಡತನವೆಂದು ಅರ್ಥೈಸಿ ಕೊಳ್ಳಲಾಗಿದೆ. ಆರೋಗ್ಯ ಮತ್ತು ಶಿಕ್ಷಣ ಎಲ್ಲಾ ಸಾರ್ವಜನಿಕ ಸೌಲಭ್ಯಗಳ ಅಥವಾ ಸೇವೆಗಳನ್ನು ಪಡೆಯದೇ ವಂಚಿತರಾಗಿರುವ ಕುಟುಂಬಗಳನ್ನು ಬಡತನ ರೇಖೆಗಿಂತ ಕೆಳಗಿನ ಕುಟುಂಬಗಳು ಎಂದು ಲೇಖಕರು ವಿವರಿಸಿದ್ದಾರೆ. ಒಟ್ಟಾರೆ ಸಾರ್ವಜನಿಕ ಲೆಕ್ಕಪರಿಶೋಧನೆಗೆ ಒಳಪಡದೇ ಇರುವ ಯೋಜನೆಗಳಲ್ಲಿ ಸ್ಥಳೀಯ ಜನರು ಅಥವಾ ಸಮುದಾಯಗಳು ಭಾಗವಹಿಸದೇ ಇರುವುದೇ ಕಾರ್ಯಕ್ರಮಗಳು ಯಶಸ್ವಿಯಾಗದಿರಲು ಸಾಧ್ಯವಿಲ್ಲವೆಂದು ಈ ಲೇಖನವು ವಿವರಿಸುತ್ತದೆ.

೬. **Dr. P. Geetha, Legislative frame work for performance accountability**
೧೯೯೦ರ ವಿಶ್ವದ ಎಲ್ಲಾ ದೇಶಗಳಲ್ಲಿ ರಾಜಕೀಯ ಮತ್ತು ಆರ್ಥಿಕ ಸ್ಥಿತಿಗತಿಗಳು ಬದಲಾವಣೆಯ ಹಾದಿಯನ್ನು ಹಿಡಿದವು. ರಾಷ್ಟ್ರಗಳ ಸರ್ಕಾರ ಕಾರ್ಯಾನುಷ್ಠಾನ ಮತ್ತು ಕಾರ್ಯಾಚರಣೆ ಚೇತರಿಕೆ ಕಂಡುಬಂದಿತು. ಈ ನಾಗರಿಕರ ಬೇಡಿಕೆಗಳು ಸರ್ಕಾರದ ಪರಿಣಾಮಕಾರಿ ಕಾರ್ಯಾನುಷ್ಠಾನ ಜಾರಿಗೆ ಬಂದಿತು. ಆಂಧ್ರಪ್ರದೇಶದಲ್ಲಿ "TheAndhra Pradesh Governement performance accountability Act 2003, ಸರ್ಕಾರದಲ್ಲಿ ಹೆಚ್ಚು ಹೆಚ್ಚು ಪರಿಣಾಮಕಾರಿಯಾಗಿ ಸರ್ಕಾರದ ಯೋಜನೆಗಳು ಸರ್ಕಾರದ ಫಲಾನುಭವಗಳನ್ನು ನಾಗರಿಕರಿಗೆ ನೀಡಿ ಪಾರದರ್ಶಕವಾದ ಆಡಳಿತ ನೀಡುವುದರ ಮೂಲಕ ಸರ್ಕಾರಗಳ ಯೋಜನೆಗಳನ್ನು ಹೆಚ್ಚು ಜನಪರವಾಗಿ ಜಾರಿಗೆ ತರಲಾಗಿದೆ. ಪಡಿತರ ವ್ಯವಸ್ಥೆಯ ಆಂತರಿಕ ಮತ್ತು ಬಾಹ್ಯ ಲೆಕ್ಕಪರಿಶೋಧನೆಗಳು ಜಾರಿಯಲ್ಲಿವೆ. ಬಾಹ್ಯ ಲೆಕ್ಕ ಪರಿಶೋಧನೆಯ ಅಂಗ ಸಾರ್ವಜನಿಕ ಭಾಗವಹಿಸುವಿಕೆಯನ್ನು ಸರ್ಕಾರದ ಆರ್ಥಿಕ ಮತ್ತು ಯೋಜನೆ ಅನುಷ್ಠಾನದ ಹಂತದಲ್ಲಿ ಜಾರಿಗೆ ತರಲಾಗಿದೆ. ಸರ್ಕಾರದಲ್ಲಿ ನಾಗರಿಕರು ಭಾಗವಹಿಸುವಿಕೆ ಯಿಂದ ಆಗುವ ಉಪಯೋಗಗಳು:

೧. ಯೋಜನೆಗಳಲ್ಲಿ ಕಂಡುಬಂದ ಸಮಸ್ಯೆಗಳನ್ನು ಪಟ್ಟಿ ಮಾಡುವುದು.

೨. ಸರ್ಕಾರದ ಆಡಳಿತಗಾರರ ಮತ್ತು ಯೋಜನೆ ತಯಾರಕರ ಜೊತೆ ಕೂಡಿ ಜನರು ಸಾರ್ವಜನಿಕ ಯೋಜನೆಗಳಲ್ಲಿ ಆಡಳಿತದಲ್ಲಿ ಉಂಟಾಗುವ ಸಮಸ್ಯೆಗಳಿಗೆ ಪರಿಹಾರಗಳನ್ನು ಹುಡುಕುವುದು.

೩. ಯೋಜನೆ ತಯಾರಿಕೆಯಲ್ಲಿ ಜನರ/ನಾಗರಿಕ ಸಹಕಾರಗಳನ್ನು ನೀಡುವುದು.

೪. ಆರ್ಥಿಕ/ಹಣಕಾಸಿನ ಸಂಪನ್ಮೂಲಗಳನ್ನು ಪಡೆಯಲು ನಾಗರಿಕ ಭಾಗವಹಿಸುವಿಕೆಗೆ ಪ್ರಚೋದಿಸುವುದು.

೫. ಸರ್ಕಾರದ ಆಡಳಿತಗಾರನ್ನು ಮತ್ತು ನಾಗರಿಕರನ್ನು ಸಾರ್ವಜನಿಕವಾಗಿ ಅಭಿನಂದಿಸುವುದು.

೬. ಹೊಸ ಯೋಜನೆಗಳನ್ನು ಸಿದ್ಧಗೊಳಿಸುವುದು.

ಸರ್ಕಾರದ ಯಂತ್ರಾಂಗ ಎಲ್ಲಾ ಸಂಸ್ಥೆಗಳಲ್ಲಿ ಮತ್ತು ಇಲಾಖೆಗಳ ಸಕ್ರಿಯ ಅನುಷ್ಠಾನದಲ್ಲಿ ಮತ್ತು ಯೋಜನೆ ನಿರ್ವಹಣೆಯ್ಲಲಿ ಜನರ ಭಾಗವಹಿಸುವಿಕೆ ಅತ್ಯಂತ ಪ್ರಮುಖವಾದ ಪಾತ್ರ ವಹಿಸುತ್ತದೆ ಸರ್ಕಾರ ಕಾರ್ಯಾನುಷ್ಠಾನದ ಹಂತಗಳಲ್ಲಿ ಜನರ ಭಾಗವಹಿಸುವಿಕೆಯಿಂದ ಇಲಾಖೆಗಳ ಸಾಧನೆಗಳು ಮತ್ತು ಇಲಾಖೆ ಗುರಿಯನ್ನು ಸಾಧಿಸಲು ಎದುರಾದಾಗ ಸಮಸ್ಯೆಗಳು ತಿಳಿದು ಬರುತ್ತದೆ. ಆ ಮೂಲಕ ಸಮಸ್ಯೆಗಳಿಂದ ಮುಕ್ತಿ ಹೊಂದಿ ಜನರಿಗೆ ಸರ್ಕಾರ ಉಪಯುಕ್ತತೆಗಳನ್ನು ನೀಡಿ ಸರ್ಕಾರಗಳ ಮತ್ತು ಇಲಾಖೆಗಳ ಗುರಿ ಸಾಧಿಸಲು ಸಾಧ್ಯವಾಗುತ್ತದೆ ಎಂದು ಉಲ್ಲೇಖಿಸುತ್ತಾರೆ.[೧೦]

ಜನರ ಭಾಗವಹಿಸುವಿಕೆಯಿಂದ ಸರ್ಕಾರ ಮತ್ತು ಇಲಾಖೆಗಳಲ್ಲಿನ ಸಹಸಂಬಂಧದಲ್ಲಿ ಸಮಸ್ಯೆಗಳ ಕುರಿತು ಅರಿವು ಜನರಿಗೆ ಮೂಡುತ್ತದೆ. ಸರ್ಕಾರಗಳ ಮತ್ತು ಇಲಾಖೆಗಳ ಕಾರ್ಯಾನುಷ್ಠಾನವು ಉತ್ತಮಗೊಳ್ಳುತ್ತದೆ. ನಾಗರಿಕರಿಗೆ ಉತ್ತಮ ಸೇವೆಗಳ ಲಭ್ಯತೆ ಬರುತ್ತವೆ. ಸರ್ಕಾರ ಯೋಜನೆಗಳ ಕುರಿತು ಜನರಲ್ಲಿ ಅಥವಾ ನಾಗರಿಕರಲ್ಲಿ ಹೆಚ್ಚು ಮಾಹಿತಿ ಸಿಗುತ್ತದೆ. ಈ ಮೂಲಕ ಯೋಜನಾ ತಯಾರಿಕೆಯಲ್ಲಿ ಜನರ ಭಾಗವಹಿಸುವಿಕೆ ಹೆಚ್ಚಾಗಿ ಪ್ರಕರಣದ ಗುರಿಯನ್ನು ಸಾಧಿಸಲು ಸಾಧ್ಯವಾಗುತ್ತದೆ ಎಂದಿದ್ದಾರೆ. ಸಾರ್ವಜನಿಕರ ಲೆಕ್ಕಪರಿಶೋಧನೆಯು ಯೋಜನೆಗಳ ಅನುಷ್ಠಾನದಲ್ಲಿ ಹೆಚ್ಚು ಪರಿಣಾಮಕಾರಿಯಾಗಿ ಕೆಲಸ ನಿರ್ವಹಿಸುತ್ತವೆ. ಜನರ ಸಹಭಾಗಿತ್ವ ಇಲ್ಲದೆ ಯಾವುದೇ ಸರ್ಕಾರಿ ಕಾರ್ಯಕ್ರಮಗಳು ಯಶಸ್ವಿಯಾಗುವುದಿಲ್ಲ. ಜನರ ಭಾಗವಹಿಸುವಿಕೆಯಿಂದ ಅಭಿವೃದ್ಧಿ ಯೋಜನೆಗಳ ಕುರಿತು ಸರ್ಕಾರಿ ಆರ್ಥಿಕ ಅಂಶಗಳ ಕುರಿತು ಜನರಿಗೆ ಮಾಹಿತಿ ಸಿಗುತ್ತದೆ. ಆಗ ಜನರು ಅಥವಾ ಸಾರ್ವಜನಿಕರು ಸರ್ಕಾರದ ಆಡಳಿತವನ್ನು ಕುರಿತು, ಅದರ ಸಾಧನೆಗಳ ಕುರಿತು ಅರಿತುಕೊಂಡು ಜನಪರವಾದ ಪ್ರಕರಣಗಳನ್ನು ಜಾರಿಗೆ ತರಲು ಸಾಧ್ಯವಾಗುತ್ತದೆ. ಈ ಮೂಲಕ ಪ್ರಜಾಪ್ರಭುತ್ವವು ಹೆಚ್ಚು ಪ್ರಜಾಸತ್ತಾತ್ಮಕವಾಗಿ ಆಗಲು ಸಾಧ್ಯವಿರುತ್ತದೆ.[೧೧]

೭. **How effective are social audits under MGNREGS lessons from Karnataka.** ಈ ಲೇಖನವು ಚಿತ್ರದುರ್ಗ ಜಿಲ್ಲೆಯ ಸಾಮಾಜಿಕ ಲೆಕ್ಕಪರಿಶೋಧನೆ ಕಾರ್ಯಾನುಷ್ಠಾನ ಕುರಿತು ಮತ್ತು ಸಾಮಾಜಿಕ ಜಮಾಬಂದಿಯಲ್ಲಿ ಕಂಡುಬಂದ ಸಮಸ್ಯೆಗಳ ಕುರಿತು ಚರ್ಚಿಸಿದೆ. ಈ ಅಧ್ಯಯನದಲ್ಲಿ ಚಿತ್ರದುರ್ಗ ಜಿಲ್ಲೆಯ ಆರು ತಾಲ್ಲೂಕುಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿ

ಕೊಳ್ಳಲಾಗಿದೆ. ೧೨೦೦ ಕುಟುಂಬಗಳನ್ನು, ೪.೭೮೨ ಜನರನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಹಲವು ಸಮಸ್ಯೆಗಳು ಕಂಡುಬಂದಿರುವ ಕುರಿತು ವಿವರಿಸಿದ್ದಾರೆ. ಮಹಿಳೆಯ ಭಾಗವಹಿಸುವಿಕೆಯ ಕೊರತೆ, ಜಮಾಬಂದಿಗೆ ಆಯ್ಕೆ ಕಾಮಗಾರಿಗಳಲ್ಲಿನ ತೊಂದರೆಗಳು, ಸಾಮಾಜಿಕ ಜಮಾಬಂದಿ ತಂಡದ ಪರಿಣಾಮಕಾರಿ ಕೆಲಸ ನಿರ್ವಹಿಸದೇ ಇರುವುದು ಮತ್ತು ಸಾಮಾಜಿಕ ಜಮಾಬಂದಿಗೆ ಬೇಕಾದ ಜಮಾಬಂದಿ ಮಾಡುವ ಕೆಲಸಗಾರರು ಇಲ್ಲದೇ ಇರುವುದು ಕಂಡುಬಂದಿದೆ. ಗ್ರಾಮದ ಜನರಿಗೆ ಸಕ್ರಿಯವಾಗಿ ಸಾಮಾಜಿಕ ಜಮಾಬಂದಿ ಸಭೆಗಳಲ್ಲಿ ಜನರು ಭಾಗವಹಿಸಲು ಬೇಕಾದ ತರಬೇತಿ ಜನರಿಗೆ ನೀಡದೇ ಇರುವುದು, ಜನರು ದೂರು ನೀಡಿರುವುದು, ದಾಖಲೆಗಳು, ಲೆಕ್ಕಪತ್ರಗಳು ಇಲ್ಲದೇ ಇರುವುದು ಈ ಅಧ್ಯಯನದಲ್ಲಿ ಕಂಡುಬಂದಿದೆ. ಗ್ರಾಮಸಭೆಗಳಲ್ಲಿ ಮಹಿಳೆಯರು ಭಾಗವಹಿಸುವುದು ತೀರಾ ಕಡಿಮೆ. ಭಾಗವಹಿಸಿದರೂ ಮಹಿಳೆಯ ಯಾವುದೇ ಸಮಸ್ಯೆ ಅಥವಾ ವಿಷಯಗಳ ಕುರಿತು ಚರ್ಚಿಸುವುದರಲ್ಲಿ ಮತ್ತು ಸಾಮಾಜಿಕ ಜಮಾಬಂದಿ ಅಧಿಕಾರಗಳ ತಂಡ ಸೂಕ್ತ ರೀತಿಯಲ್ಲಿ ಜನರಿಗೆ ತರಬೇತಿ ನೀಡದಿರುವುದು ಚಿತ್ರದುರ್ಗದ ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಗ್ರಾಮಸಭೆಗಳಲ್ಲಿ ಕಂಡುಬಂದಿದೆ. ಗ್ರಾಮಪಂಚಾಯಿತಿ ಗಳಲ್ಲಿ ಸಾಮಾಜಿಕ ಜಮಾಬಂದಿ ಸಭೆಯ ಕುರಿತು ಹೆಚ್ಚು ಅರಿವು ನೀಡದೆ ಪಂಚಾಯಿತಿ ಗ್ರಾಮಸಭೆಗಳನ್ನು ನಡೆಸುತ್ತಿರುವುದು ಈ ಅಧ್ಯಯನದಲ್ಲಿ ಕಂಡುಬಂದಿದೆ. ಇಲಾಖೆಯಲ್ಲಿ ಪತ್ಯೇಕವಾದ ಜಮಾಬಂದಿ ಕಾರ್ಯವನ್ನು ಮಾಡುವಂತಹ ಅಥವಾ ನಿರ್ವಹಿಸುವ ಅಧಿಕಾರಿಗಳು ಮತ್ತು ಸಿಬ್ಬಂದಿಯು ಇಲ್ಲದೆ ಇರುವುದು ಪಂಚಾಯಿತಿ ಜಮಾಬಂದಿ ಅಥವಾ ಸಾಮಾಜಿಕ ಲೆಕ್ಕ ಪರಿಶೋಧನೆ ಯಶಸ್ವಿಯಾಗದೇ ಇರುವುದಕ್ಕೆ ಕಾರಣಗಳಾಗಿವೆ.[೧೧]

೮. **Nidhi vij** ಅವರ **Collaborative Governance: Anolysing Social Audit in MGNREGA in India** ಲೇಖನವು ನರೇಗಾ ಯೋಜನೆ ಸಾಮಾಜಿಕ ಜಮಾಬಂದಿ ಸಭೆಯಿಂದ ಆಗುವ ಉಪಯುಕ್ತತೆಗಳನ್ನು ವಿವರಿಸಿದೆ. ಸಾಮಾಜಿಕ ಜಮಾಬಂದಿ ಗ್ರಾಮಸಭೆಯು ಪ್ರತಿ ವರ್ಷದಲ್ಲಿ ಎರಡು ಬಾರಿ ಅಂದರೆ ಪ್ರತಿ ಆರು ತಿಂಗಳಲ್ಲಿ ಒಂದು ಬಾರಿ ಸಾಮಾಜಿಕ ಲೆಕ್ಕಪರಿಶೋಧನೆಯನ್ನು ಆಯೋಜಿಸಬೇಕು. ಇದರಿಂದ ಗ್ರಾಮೀಣ ಭಾಗದಲ್ಲಿರುವ ಬಡತನದ ಕುಟುಂಬಗಳಿಗೆ ಮತ್ತು ಆರ್ಥಿಕವಾಗಿ ಹಿಂದುಳಿದ ಕುಟುಂಬಗಳಿಗೆ ತಮ್ಮ ಜೀವನಕ್ಕೆ ಬೇಕಾದ ದುಡಿಮೆ ಹಕ್ಕನ್ನು ಪಡೆದಂತೆ ಆಗುತ್ತದೆ. ಬೇಸಗೆ ಮತ್ತು ಬರಗಾಲದಲ್ಲಿ ಕೂಲಿ ಕೆಲಸವನ್ನು ಗ್ರಾಮಸ್ಥರು ಸ್ಥಳೀಯವಾಗಿಸಿರುವುದರಿಂದ ಗ್ರಾಮದ ವಲಸೆ ಕಡಿಮೆಯಾಗುತ್ತದೆ. ಈ ರೀತಿ ಯೋಜನೆಯು ಸಕ್ರಿಯವಾಗಿ ಅನುಷ್ಠಾನಗೊಳ್ಳಲು ಸಾಮಾಜಿಕ ಜಮಾಬಂದಿ ಗ್ರಾಮಸಭೆ ಪಾತ್ರ ಅತ್ಯಂತ ಪ್ರಾಮುಖ್ಯತೆಯನ್ನು ಹೊಂದಿದೆ. ಈ ಜಮಾಬಂದಿ ಸಭೆಯನ್ನು ಕಾಮಗಾರಿಯ ವಿವರಗಳ ಯೋಜನೆಯ ದಾಖಲೆಗಳನ್ನು, ಪಾವತಿ

ರಶೀದಿಗಳನ್ನು ಸಾರ್ವಜನಿಕವಾಗಿ ಪರಿಶೋಧನೆಗೆ ಒಳಪಡಿಸುವುದರಿಂದ ನರೇಗಾ ಯೋಜನೆಯನ್ನು ನಿಯಮಾನುಸಾರವಾಗಿ ಅನುಷ್ಠಾನಗೊಳಿಸಲು ಅನುಕೂಲವಾಗುತ್ತದೆ. ಈ ಜಮಾಬಂಧಿ ಗ್ರಾಮಸಭೆಯಲ್ಲಿ ಮಹಿಳೆಯರು ಗ್ರಾಮಸಭೆಗಳಲ್ಲಿ ಭಾಗವಹಿಸುವ ಸಂಖ್ಯೆ ಹೆಚ್ಚಾಗುತ್ತಿದೆ. ಶೇ. ೩೩ರಷ್ಟು ಮಹಿಳೆಯರು ಗ್ರಾಮಸಭೆಗಳಲ್ಲಿ ಭಾಗವಹಿಸುವಂತೆ ಸಭೆಯ ಸಿದ್ಧತೆಗಳು ನಡೆಯುತ್ತಿವೆ. ಈ ಮೂಲಕ ಗ್ರಾಮಪಂಚಾಯಿತಿಯ ಯೋಜನೆ ಫಲಾನುಭವಿಗಳಿಗೆ ತಮಗೆ ಸಿಗಬೇಕಾದ ಸೌಲಭ್ಯಗಳ ಬಗ್ಗೆ ಅರಿವು ಅವಕಾಶ ಸಿಗುತ್ತದೆ. ಎಲ್ಲಾ ನಾಗರಿಕ ತಮ್ಮ ಹಕ್ಕುಗಳ ಕುರಿತು ಅರಿವು ಮತ್ತು ಪಂಚಾಯಿತಿಗಳ ಆಡಳಿತ ಹೆಚ್ಚು ಹೆಚ್ಚು ವಿಕೇಂದ್ರೀಕರಣಗೊಂಡು ಪ್ರಜಾಪ್ರಭುತ್ವ ವ್ಯವಸ್ಥೆ ಜನಸಾಮಾನ್ಯರಿಗೆ ಉಪಯುಕ್ತವಾಗಿ ಬಳಕೆಯಾಗುವುದು ಈ ಸಾಮಾಜಿಕ ಲೆಕ್ಕಪರಿಶೋಧನೆ ಗ್ರಾಮಸಭೆಯಿಂದ ಸಾಧ್ಯವಾಗುತ್ತದೆ.[೨]

೯. **Farzana Afridi vegard Iversen** ಅವರ **Vegard, lesson, Social Audits and MGNREGA delivery lessons from Andhra Pradesh** ಲೇಖನದಲ್ಲಿ ಆಂಧ್ರ ಪ್ರದೇಶದ ಎಂಟು ಜಿಲ್ಲೆಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡು ವಿಶ್ಲೇಷಣೆ ಮಾಡಿದೆ. ಎಂಟು ಜಿಲ್ಲೆಗಳಲ್ಲಿ ೧೦೦ ಗ್ರಾಮಪಂಚಾಯಿತಿಗಳನ್ನು ಆಯ್ದುಕೊಂಡು ಅದರ ವ್ಯಾಪ್ತಿಯಲ್ಲಿ ಬರುವ ೩೦೦ ಗ್ರಾಮಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡು ಈ ಗ್ರಾಮಪಂಚಾಯಿತಿಗಳು ಮಹಾತ್ಮಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆ ಅನುಷ್ಠಾನದ ಸಮಸ್ಯೆಗಳ ಬಗ್ಗೆ ಮತ್ತು ಈ ಗ್ರಾಮಪಂಚಾಯಿತಿಗಳಲ್ಲಿ ಸಾಮಾಜಿಕ ಜಮಾಬಂದಿ ಸಭೆಯು ಅನುಷ್ಠಾನಗೊಳ್ಳುತ್ತಿದೆಯೇ ಇಲ್ಲವೇ ಎಂಬ ಅಂಶಗಳನ್ನು ಅಧ್ಯಯನ ಮಾಡಲಾಗಿದೆ. ಆಂಧ್ರಪ್ರದೇಶ ಮತ್ತು ದೇಶದ ಇತರೆ ರಾಜ್ಯಗಳು ಸಾಮಾಜಿಕ ಜಮಾಬಂದಿಯ ಮಾದರಿಯನ್ನು ಪರಿಚಯಿಸಿತು. ಆದರೂ ಆಂಧ್ರ ಪ್ರದೇಶದ ಗ್ರಾಮಪಂಚಾಯಿತಿಗಳಲ್ಲಿ ಸಾಮಾಜಿಕ ಜಮಾಬಂದಿ ಸಭೆಯಿಂದ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆ ಸಮಸ್ಯೆಗಳನ್ನು ಕಂಡುಕೊಂಡು ಸರಿಪಡಿಸಿಕೊಳ್ಳಲು ಅಂಶಗಳನ್ನು ಗುರುತಿಸ ಲಾಯಿತು. ಈ ಯೋಜನೆಗೆ ಸಂಬಂಧಿಸಿದಂತೆ ಹಣ ಮತ್ತು ದಾಖಲೆ ಸೋರಿಕೆಯಾಗುತ್ತಿದೆ. ಒಂದು ಮಂಡಲ ಪಂಚಾಯಿತಿ ವ್ಯಾಪ್ತಿಯಲ್ಲಿ ಬರುವ ಎಲ್ಲಾ ಗ್ರಾಮಪಂಚಾಯಿತಿಗಳಿಗೆ ಒಂದೇ ಸಾಮಾಜಿಕ ಜಮಾಬಂದಿ ಪರಿಶೀಲನಾ ತಂಡವಿರುತ್ತದೆ. ಸಾಮಾಜಿಕ ಜಮಾಬಂದಿ ಸಭೆ ನಡೆಸಲು ಒಂದು ವಾರ ಮಾತ್ರ ಸಮಯ ಇರುವುದು ಸಾಮಾಜಿಕ ಜಮಾಬಂದಿ ಸಕ್ರಿಯವಾಗಿ ನಡೆಯದಿರಲು ಪ್ರಮುಖ ಕಾರಣವಾಗಿದೆ. ಗ್ರಾಮಪಂಚಾಯಿತಿಗಳ ಆಡಳಿತ ಉತ್ತಮವಾಗಿದ್ದರೆ ಸಾಮಾಜಿಕ ಜಮಾಬಂದಿ ಸಕಾಲಕ್ಕೆ ಸರಿಯಾಗಿ ನಡೆಸಬಹುದಾಗಿದೆ. ಆದರೆ ಕೆಲವು ಗ್ರಾಮಪಂಚಾಯಿತಿಗಳಲ್ಲಿ ಆಡಳಿತ ಮತ್ತು ಕಡತ ನಿರ್ವಹಣೆ ಹಲವು ಸಮಸ್ಯೆಗಳಿಂದ ಮತ್ತು ಭ್ರಷ್ಟಾಚಾರದಿಂದ ಕೂಡಿರುತ್ತವೆ. ಅಂತಹ ಗ್ರಾಮಪಂಚಾಯಿತಿಗಳಲ್ಲಿ ಸಾಮಾಜಿಕ ಜಮಾಬಂದಿ ಗ್ರಾಮಸಭೆ ನಡೆಸುವುದು ಕಷ್ಟ

ಸಾಧ್ಯದ ಕೆಲಸವಾಗಿರುತ್ತದೆ. ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯ ಫಲಾನುಭವಿಗಳಲ್ಲಿ ಈ ಯೋಜನೆಯ ಕುರಿತು ಅವರಿಗೆ ಸಿಗುವ ಹಕ್ಕುಗಳ ಕುರಿತು ಅರಿವಿಲ್ಲದಿರುವುದರಿಂದ ಫಲಾನುಭವಿಗಳು ಕೂಲಿ ಕಾರ್ಮಿಕರು ಸಾಮಾಜಿಕ ಜಮಾಬಂದಿ ಗ್ರಾಮಸಭೆಗಳಲ್ಲಿ ಭಾಗವಹಿಸುವುದಿಲ್ಲ. ಆ ಕಾರಣದಿಂದ ಕಾಮಗಾರಿಗಳ ಅನುಷ್ಠಾನದಲ್ಲಿ ಹಣಕಾಸಿನ ಸೋರಿಕೆ ಕಂಡುಬರುತ್ತದೆ.[೧೩]

ಸಾಮಾಜಿಕ ಜಮಾಬಂದಿ ಪರಿಶೀಲನಾ ತಂಡದವರಿಗೆ ಉತ್ತಮ ತರಬೇತಿಯನ್ನು ನೀಡಬೇಕು. ಅವರಲ್ಲಿ ಪ್ರಾಮಾಣಿಕವಾಗಿ ಕೆಲಸ ಮಾಡುವ ಸಾಮರ್ಥ್ಯ ಇರಬೇಕು. ಅಂತಹವರನ್ನು ಸಾಮಾಜಿಕ ಜಮಾಬಂದಿ ಸಿಬ್ಬಂದಿಯಾಗಿ ನೇಮಕ ಮಾಡಬೇಕು.

ಕೆಲವು ಗ್ರಾಮಪಂಚಾಯಿತಿಗಳಲ್ಲಿ ತಂತ್ರಜ್ಞಾನ ಬಳಕೆಯಿಂದ ಸಾಮಾಜಿಕ ಜಮಾಬಂದಿ ಸಭೆಗೆ ಬೇಕಾದ ಸಿದ್ಧತೆಗಳನ್ನು ನಡೆಸಲಾಗುವುದಿಲ್ಲ. ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆಯಲ್ಲಿ ನಡೆಸುವಂತಹ ಸಾಮಾಜಿಕ ಜಮಾಬಂದಿ ಗ್ರಾಮಸಭೆಯಿಂದ ಗ್ರಾಮಪಂಚಾಯಿತಿಗಳ ಆಡಳಿತ ಸುಧಾರಣೆ ಹೊಂದಿದೆ. ಇತರೆ ಗ್ರಾಮೀಣ ಅಭಿವೃದ್ಧಿ ಮತ್ತು ನಗರಾಭಿವೃದ್ಧಿ ಹಾಗೂ ಸಾಮಾಜಿಕ ಭದ್ರತೆ ಕೆಲಸ ಮಾಡುವ ಯೋಜನೆಗಳು ತಮ್ಮದೇ ಆದ ಮಾದರಿಯಲ್ಲಿ ಸಾಮಾಜಿಕ ಲೆಕ್ಕ ಪರಿಶೋಧನೆಯನ್ನು ಸಿದ್ಧಪಡಿಸಿಕೊಂಡು ಪ್ರತಿ ವರ್ಷ ಸಾಮಾಜಿಕ ಜಮಾಬಂದಿ ಸಭೆ ನಡೆಸಿ ಫಲಾನುಭವಿಗಳಿಗೆ ಯೋಜನೆಯ ಉಪಯೋಗಗಳನ್ನು ಉಪಯುಕ್ತಗೊಳಿಸಲು ಮುಂದಾಗಿರುವುದನ್ನು ಗಮನಿಸಬಹುದಾಗಿದೆ.

೧೦. ಟಿ.ಆರ್.ಚಂದ್ರಶೇಖರ ಅವರ **ಜನರ ಯೋಜನೆ: ಕರ್ನಾಟಕ ಅನುಭವಗಳು** ಎಂಬ ಕೃತಿಯಲ್ಲಿ ಜನರ ಯೋಜನೆಯು ಗ್ರಾಮಪಂಚಾಯಿತಿಯ ಜನರ ಭಾಗವಹಿಸುವಿಕೆಯಿಂದ ಸಿದ್ಧವಾಗಬೇಕು ಎಂಬ ವಿವರಗಳಿವೆ. ಈ ಜನರ ಯೋಜನೆಯು ಕೆಳಗಿನಿಂದ ಮೇಲಕ್ಕೆ, ಅಂದರೆ ಗ್ರಾಮಮಟ್ಟದಿಂದ ತಾಲ್ಲೂಕುಮಟ್ಟಕ್ಕೆ, ತಾಲ್ಲೂಕಿನಿಂದ ಜಿಲ್ಲೆಗೆ, ಜಿಲ್ಲೆಯಿಂದ ರಾಜ್ಯಕ್ಕೆ, ರಾಜ್ಯದಿಂದ ಕೇಂದ್ರದವರೆಗೆ ಹರಿಯುವ ಯೋಜನಾ ಸ್ವರೂಪವೇ ಜನರ ಯೋಜನೆಯಾಗಿರುತ್ತದೆ. ಆದರೆ ಗ್ರಾಮೀಣ ಸ್ಥಳೀಯ ಸಂಸ್ಥೆಗಳಲ್ಲಿ ಅತ್ಯಂತ ಬುಡಮಟ್ಟದಲ್ಲಿರುವ ಗ್ರಾಮಪಂಚಾಯಿತಿಗಳು ಜನರ ಯೋಜನೆಗಳ ಸಿದ್ಧಪಡಿಸುವ ನಿಮಿತ್ತವಾಗಿ ಗ್ರಾಮಸಭೆಗಳನ್ನು ನಡೆಸುತ್ತಿರುವುದು ಕಂಡುಬಂದಿದೆ. ಗ್ರಾಮದ ಎಲ್ಲಾ ಸಮುದಾಯಗಳು ಜನರ ಸಹಭಾಗಿತ್ವ ಸಾಧಿಸುವ ದೃಷ್ಟಿಯಿಂದಾಗಲಿ, ಗ್ರಾಮದಲ್ಲಿ ಅನುಷ್ಠಾನಗೊಂಡ ಯೋಜನೆಗಳ ಉಪಯುಕ್ತತೆಯನ್ನು ಗುರುತಿಸಿ ಅವುಗಳ ಸಕ್ರಿಯ ಅನುಷ್ಠಾನಕ್ಕಾಗಲಿ ಎಲ್ಲಾ ಜನರ ಸಹಭಾಗಿತ್ವವನ್ನು ಸಾಧಿಸುವ ದೃಷ್ಟಿಯಿಂದ ಗ್ರಾಮಸಭೆಗಳು ನಡೆಯದಿರುವುದು ಕಂಡುಬರುತ್ತಿದೆ. ಕೇಂದ್ರ ಮತ್ತು ರಾಜ್ಯಮಟ್ಟದಲ್ಲಿ ಅಭಿವೃದ್ಧಿ ಯೋಜನೆಗಳನ್ನು ರೂಪಿಸಲು ಮತ್ತು ಸಿದ್ಧಪಡಿಸುವಲ್ಲಿ ಆಸಕ್ತಿ ತೋರದೇ ಇರುವುದು ಕಂಡುಬರುತ್ತಿದೆ. ಮೊದಲ ಮಾದರಿ

ಮೇಲಿನ ಹಂತದಿಂದ ಕೇಂದ್ರ ಯೋಜನಾ ಆಯೋಗದಿಂದ ರಾಜ್ಯ ಮತ್ತು ಜಿಲ್ಲಾ ಯೋಜನಾ ಸಮಿತಿಗಳ ಮೂಲಕ ಗ್ರಾಮಜನರಿಗೆ ಸಿದ್ಧಗೊಳ್ಳುತ್ತಿದ್ದು, ಈ ವಿಧಾನದಲ್ಲಿ ಪ್ರತಿಷ್ಠಿತ ವರ್ಗಗಳ ಪ್ರಭಾವ ಪ್ರಧಾನವಾಗಿರುತ್ತದೆ. ದ್ವಿತೀಯ ಪ್ರಭಾವ ರಾಜ್ಯಮಟ್ಟದಲ್ಲಿ ಮಧ್ಯಮ ವರ್ಗದವರ ಪ್ರಭಾವ ಅದೇ ರೀತಿಯಲ್ಲಿ ಜಿಲ್ಲಾ ಮತ್ತು ಗ್ರಾಮಮಟ್ಟದಲ್ಲಿ ಮಧ್ಯವರ್ತಿಗಳ ಪ್ರಭಾವ ಹೆಚ್ಚಾಗಿ ಕಂಡು ಬಂದಿದ್ದು ಯೋಜನೆ ಅನುಷ್ಠಾನ ಜನರ ಹತ್ತಿರ ಇದ್ದಂತೆ ಕಂಡರೂ ಪರೋಕ್ಷವಾಗಿ ಅಧಿಕಾರಿಗಳಲ್ಲಿ ಅಥವಾ ಮೇಲು ಹಂತದಲ್ಲಿರುವುದು ಕಂಡುಬಂದಿದೆ.[೧೪]

೧೧. ಎಂ.ಚಂದ್ರ ಪೂಜಾರಿ ಅವರ **ಜನಾಯೋಜನೆ ಹೈದರಾಬಾದ್ ಕರ್ನಾಟಕದ ಅನುಭವಗಳು** ಎಂಬ ಕೃತಿಯಲ್ಲಿ ಯರೆಹಂಚಿನಾಳ ಮತ್ತು ಕೃಷ್ಣನಗರ ಗ್ರಾಮಪಂಚಾಯಿತಿಗಳಲ್ಲಿ ಜನರ ಯೋಜನೆ ತಯಾರಿಸಲು ಆಯೋಜಿಸಿದ್ದ ಗ್ರಾಮಸಭೆಗಳ ಕುರಿತು ಕಂಡುಬಂದ ಸಮಸ್ಯೆಗಳ ಬಗ್ಗೆ ಚರ್ಚಿಸಿದ್ದಾರೆ. ಕೃಷ್ಣನಗರ ಪಂಚಾಯತ್‌ನ ಎರಡೂ ಹಳ್ಳಿಗಳಲ್ಲೂ ಆ ಹಳ್ಳಿಗಳ ಒಟ್ಟು ಗ್ರಾಮಸ್ಥರ ಶೇ. ೧೪ಕ್ಕಿಂತ ಹೆಚ್ಚು ಮಂದಿ ಮಹಿಳೆಯರು ಮಾತ್ರ ಭಾಗವಹಿಸಿದ್ದಾರೆ. ಯರೆಹಂಚಿನಾಳ ಗ್ರಾಮ ವಸತಿ ಸಭೆಗಳಲ್ಲಿ ಶೇ.೩೦ ಮಹಿಳೆಯರು ಭಾಗವಹಿಸಿದ್ದು ಈ ಗ್ರಾಮಪಂಚಾಯಿತಿಯಲ್ಲಿ ಪುರುಷರ ಗಿಂತ ಹೆಚ್ಚು ಭಾಗವಹಿಸುವಿಕೆ ಇದೆ. ಎರಡೂ ಗ್ರಾಮಪಂಚಾಯಿತಿಗಳಲ್ಲಿ ಸಮಸ್ಯೆಗಳ ವಿಶ್ಲೇಷಣೆಯಲ್ಲಿ ಭಾಗವಹಿಸಿದ ಗ್ರಾಮಸ್ಥರ ಸಂಖ್ಯೆ ಶೇ.೧೭ ಮತ್ತು ೧೪ ಮಂದಿ ಭಾಗವಹಿಸಿರುವುದು ಕಂಡು ಬಂದಿದ್ದು, ನೀರಿನ ಸಮಸ್ಯೆ ಪರಿಹಾರ ಸಭೆಯಲ್ಲಿ ಭಾಗವಹಿಸಲು ಗ್ರಾಮಸ್ಥರು ಮುಂದೆ ಬಂದಿಲ್ಲ. ಈ ರೀತಿಯಾಗಿ ಗ್ರಾಮದ ವಸತಿಸಭೆಗಳಲ್ಲಿ ಗ್ರಾಮಸ್ಥರು ಭಾಗವಹಿಸುವಿಕೆ ಕಡಿಮೆ ಭಾಗವಹಿಸಲು ಕಾರಣಗಳನ್ನು ವಿವರಿಸುತ್ತಾ ಪಂಚಾಯಿತಿ ಗ್ರಾಮಸಭೆಗಳ ಪೂರ್ವ ತಯಾರಿಯಲ್ಲಿ ಕೊರತೆ ಪಂಚಾಯಿತಿ ಮತ್ತು ಮೇಲುಸ್ತರದ ಅಧಿಕಾರ ಸಂಬಂಧ ಪಂಚಾಯಿತಿಗಳಲ್ಲೂ ಗ್ರಾಮಸ್ಥರನ್ನು ಸೇರಿಸಲು ವಿಶೇಷ ಪ್ರಯತ್ನ ಮಾಡದೇ ಇರುವುದು, ಡಂಗುರ ಸಾರದೇ ಇರುವುದು, ಇತರ ಮಾಧ್ಯಮಗಳನ್ನು ಬಳಸಿ ಗ್ರಾಮಸ್ಥರಲ್ಲಿ ತಿಳುವಳಿಕೆ ನೀಡುವುದು ಮಾಡಿಲ್ಲ. ಪಂಚಾಯಿತಿ ಸದಸ್ಯರು ಜನರಿಗೆ ಪೂರ್ವ ಸೂಚನೆ ನೀಡಲು ಕ್ರಮ ವಹಿಸದೇ ಇರುವುದು ಗ್ರಾಮಸಭೆಗಳಲ್ಲಿ ಜನರನ್ನು ದೂರವಿಡಲು ಪ್ರಯತ್ನಿಸುವುದು, ಗ್ರಾಮಸ್ಥರು ಇಲ್ಲದ ಸಮಯವನ್ನು ಗಮನದಲ್ಲಿಟ್ಟುಕೊಂಡು ಸಭೆಗಳನ್ನು ನಡೆಸಲಾಗಿದೆ. ಈ ಎರಡೂ ಗ್ರಾಮಗಳು ಶೇ.೯೦ರಷ್ಟು ಕೃಷಿಯನ್ನು ಆಧರಿಸಿದ ಗ್ರಾಮಗಳಾಗಿದ್ದು ಈ ರೀತಿ ಗ್ರಾಮಸಭೆಗಳು ಯಶಸ್ವಿಯಾಗದಿರಲು ಸರ್ಕಾರಿ ಯೋಜನಾ ವಿಧಾನವೊಂದೇ ಅಲ್ಲದೇ ಈ ಮೇಲೆ ವಿವರಿಸಲಾದ ಸಮಸ್ಯೆಗಳು ಪ್ರಮುಖವಾಗಿ ಪ್ರಭಾವವನ್ನು ಬೀರಿರುವುದು ಕಂಡುಬರುತ್ತವೆ. ಗ್ರಾಮಸಭೆಗಳನ್ನು ಯಶಸ್ವಿಗೊಳಿಸಲು ಈ ಸಮಸ್ಯೆಗಳನ್ನು ದೂರ ಮಾಡಿ ಗ್ರಾಮಸ್ಥರಲ್ಲಿ ಪಂಚಾಯಿತಿ ಕಚೇರಿಗಳಲ್ಲಿ ನಂಬಿಕೆ ಬರುವ ರೀತಿಯಲ್ಲಿ ನಡೆಸಬೇಕಾಗಿದೆ.

ಪ್ರತಿವರ್ಷ ಪಾರದರ್ಶಕವಾಗಿ ಪಂಚಾಯಿತಿ ಜಮಾಬಂದಿಯ ಸಭೆಯನ್ನು ನಡೆಸಿ ಗ್ರಾಮ ಪಂಚಾಯಿತಿಯ ಅಭಿವೃದ್ಧಿಯಲ್ಲಿ ಎಲ್ಲಾ ಸಾಮಾಜಿಕ ವರ್ಗಗಳು ಭಾಗವಹಿಸುವಂತೆ ನಂಬಿಕೆಯನ್ನು ಕಲ್ಪಿಸುವುದು ಪ್ರತಿಯೊಂದು ಗ್ರಾಮಪಂಚಾಯಿತಿಯ ಆದ್ಯ ಕರ್ತವ್ಯವಾಗಿರುತ್ತದೆ.[೧೫]

೧೨. ಎ.ಶ್ರೀಧರ ಅವರ **ವಿಕೇಂದ್ರೀಕರಣ ಮತ್ತು ಗ್ರಾಮಪಂಚಾಯತ್** ಎಂಬ ಕೃತಿಯಲ್ಲಿ ಹಿರೆಹಡ್ಲಿಗಿ ಗ್ರಾಮವನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಐದು ವರ್ಷಗಳಲ್ಲಿ ನಡೆದ ಎಂಟು ಗ್ರಾಮಸಭೆಗಳನ್ನು ಲೇಖಕರು ವಿವರಿಸುತ್ತಾರೆ. "ಗ್ರಾಮಸಭೆಗಳು ಕಾಯ್ದೆಯನುಸಾರ ನಡೆಯುವುದನ್ನು ದಾಖಲೆಗಳಲ್ಲಿ ನೋಡಬಹುದು. ಆದರೆ ವಾಸ್ತವವಾಗಿ ಗ್ರಾಮಸಭೆಗಳು ವರ್ಷಕ್ಕೆ ಎರಡು ಸಾರಿ ನಡೆದರೂ ಆರು ತಿಂಗಳ ಅಂತರವನ್ನು ಕಾಯ್ದುಕೊಳ್ಳುವುದಿಲ್ಲ. ಕಾರಣ ಗ್ರಾಮಸಭೆಗಳನ್ನು ಕಡ್ಡಾಯ ವಾಗಿ ನಡೆಸಲೇಬೇಕು ಎನ್ನುವ ನಿಯಮದಿಂದಾಗಿ ನಡೆಸಲಾಗುತ್ತದೆ. ಈಗಾಗಲೇ ನಡೆದಿರುವ ೮ ಗ್ರಾಮಸಭೆಗಳಲ್ಲಿ ೬ ಗ್ರಾಮಸಭೆಗಳು ಫಲಾನುಭವಿಗಳ ಆಯ್ಕೆ ಮಾಡುವ ಕೆಲಸ ಮಾಡಿದರೆ, ಉಳಿದೆರಡು ಗ್ರಾಮಸಭೆಗಳಲ್ಲಿ ಪಂಚಾಯಿತಿಯ ಕಾಮಗಾರಿಗಳ ಅನುಮೋದನೆಯನ್ನು ಪಡೆಯು ವುದಕ್ಕೆ ನಿರ್ಮಿತಗೊಳಿಸಲಾಗಿದೆ. ಈ ಗ್ರಾಮಸಭೆಗಳಲ್ಲಿ ಫಲಾನುಭವಿಗಳು ಆಯ್ಕೆ ಪಟ್ಟಿಯಲ್ಲಿ ಇರುವವರು ಸದಸ್ಯರು, ಗ್ರಾಮಪಂಚಾಯಿತಿಯ ಸಿಬ್ಬಂದಿಯವರು ಮಾತ್ರ ಭಾಗವಹಿಸುತ್ತಾರೆ. ಕಳೆದ ಗ್ರಾಮಸಭೆಯಲ್ಲಿ ಎತ್ತಿದ ಪ್ರಶ್ನೆಗಳಿಗೆ ಉತ್ತರಗಳನ್ನು ನೀಡುವುದಾಗಲಿ ಇತರೆ ಸಾರ್ವಜನಿಕ ಸಮಸ್ಯೆಗಳ ಚರ್ಚೆಗಳು ನಡೆಯದೇ ಫಲಾನುಭವಿಗಳ ಆಯ್ಕೆ ಗ್ರಾಮಸಭೆಯ ಪ್ರಧಾನ ಗುರಿಯಾಗಿದೆ. ಹಾಗಾಗಿ ಈ ರೀತಿಯಲ್ಲಿ ಆಗದೇ ಪಂಚಾಯಿತಿ ಜಮಾಬಂದಿಯ ಸಭೆಯಲ್ಲಿ ಪ್ರತಿವರ್ಷ ನಿರ್ವಹಿಸುವುದರಿಂದ ಗ್ರಾಮದ ಹಲವೂ ಸಮಸ್ಯೆಗಳಿಗೆ ಉತ್ತರ/ಪರಿಹಾರ ಸಿಗುವ ಸಾಧ್ಯತೆಗಳು ಹೆಚ್ಚಾಗಿವೆ.[೧೬]

೧೩. ಟಿ.ಆರ್.ಚಂದ್ರಶೇ.ಖರ್ ಅವರ **ಜನರನ್ನು ಒಳಗೊಳ್ಳುವ ಅಭಿವೃದ್ಧಿ ಹೈದರಾಬಾದ್ ಕರ್ನಾಟಕ ಪ್ರದೇಶ** ಎಂಬ ಕೃತಿಯಲ್ಲಿ ಅಭಿವೃದ್ಧಿಯು ಜನರನ್ನು ಸಮಾಜದ ಎಲ್ಲ ವರ್ಗಗಳನ್ನು ಎಲ್ಲ ಸಾಮಾಜಿಕ ಗುಂಪುಗಳನ್ನು, ಎಲ್ಲ ಲಿಂಗಗಳನ್ನು, ಎಲ್ಲ ವರ್ಗಗಳನ್ನು ಎಲ್ಲ ಪ್ರದೇಶಗಳನ್ನೂ ಒಳಗೊಳ್ಳುವ ರೀತಿಯಲ್ಲಿ ನಡೆಯುತ್ತಿಲ್ಲ ಎಂಬುದನ್ನು ಅಂಕಿ–ಅಂಶಗಳ ಸಹಿತ ವಿಶ್ಲೇಷಿಸಿದ್ದಾರೆ. ಅದರ ಬದಲಾಗಿ ಕೆಲವೇ ಸಾಮಾಜಿಕ ಗುಂಪುಗಳಲ್ಲಿ, ಪ್ರದೇಶಗಳಲ್ಲಿ ನೆಲೆ ನಿಂತುಬಿಡುವ ಪ್ರವೃತ್ತಿಯನ್ನು ಹೊಂದಿರುತ್ತದೆ ಎಂದು ವಿವರಿಸಿದ್ದಾರೆ. ಅಭಿವೃದ್ಧಿ ಬಹಳ ಮುಖ್ಯವಾಗಿ ಪರಿಶಿಷ್ಟರನ್ನು ಎಷ್ಟು ಪ್ರಮಾಣದಲ್ಲಿ ಒಳಗೊಳ್ಳಬೇಕೋ ಅಷ್ಟು ಪ್ರಮಾಣದಲ್ಲಿ ಒಳಗೊಳ್ಳುತ್ತಿಲ್ಲ. ಹೈದ್ರಾಬಾದ್ ಕರ್ನಾಟಕದಲ್ಲಿರುವ ಬಹುಪಾಲು ಪರಿಶಿಷ್ಟ ಜನರು ಕನಿಷ್ಠ ಜೀವನಮಟ್ಟ ಮತ್ತು ತಳಮಟ್ಟದ ಆದಾಯದ ಬದುಕನ್ನು ಸಾಗಿಸುತ್ತಿದ್ದಾರೆ. ಅದಕ್ಕೆ ಪ್ರಮುಖವಾಗಿ ಬೇಕಾಗಿರುವ ಸಾರ್ವಜನಿಕ

ಕನಿಷ್ಠ ಸೌಲಭ್ಯಗಳನ್ನು ಒದಗಿಸುವುದು ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಜೊತೆಯಲ್ಲಿ ಗ್ರಾಮಪಂಚಾಯಿತಿಗಳು ಪ್ರಧಾನ ಪಾತ್ರವನ್ನು ವಹಿಸುತ್ತವೆ. ಗ್ರಾಮೀಣ ಪ್ರದೇಶದ ಜನರಿಗೆ ಸರ್ಕಾರದ ಯೋಜನೆಗಳ ಬಗ್ಗೆ ಅರಿವಿಲ್ಲದೆ, ಗ್ರಾಮಪಂಚಾಯಿತಿಗಳಿಂದ ದೂರ ಉಳಿದು ದೂರದ ಊರುಗಳಿಗೆ ವಲಸೆ ಹೋಗಿ ಜೀವನ ಮಾಡುವುದು ಹೈದರಾಬಾದ್ ಕರ್ನಾಟಕದ ಜಿಲ್ಲೆಯ ಹೆಚ್ಚಾಗಿ ಕಂಡು ಬರುತ್ತದೆ. ಇದಕ್ಕೆ ಸ್ಥಳೀಯವಾಗಿ ಗ್ರಾಮಪಂಚಾಯಿತಿಯ ಸೌಲಭ್ಯಗಳನ್ನು ಪಡೆಯಲು ಜನರಲ್ಲಿ ಅರಿವಿನ ಕೊರತೆ ಮತ್ತು ಗ್ರಾಮಪಂಚಾಯಿತಿ ಕಛೇರಿ ಸಿಬ್ಬಂದಿಗಳ ಮೇಲಿನ ನಂಬಿಕೆ ಇಲ್ಲದಿರುವುದು ಕಾರಣವಾಗಿದೆ. ದೂರದ ಊರುಗಳಿಗೆ ವಲಸೆ ಹೋಗಿ ಜೀವನ ಸಾಗಿಸುವ ಸಾಮಾಜಿಕ ವ್ಯವಸ್ಥೆಯನ್ನು ಬದಲಾಯಿಸಲು ಗ್ರಾಮಪಂಚಾಯಿತಿಗಳು ಮುಂದಾಗಿ ತಮ್ಮ ಗ್ರಾಮಪಂಚಾಯಿತಿಯಲ್ಲಿ ಜಾರಿಯಿರುವ ಯೋಜನೆಗಳು, ಆಯ-ವ್ಯಯ ಮತ್ತು ಅವಕಾಶಗಳನ್ನು ಕುರಿತು ಪಂಚಾಯಿತಿ ಜಮಾಬಂದಿಯ ಸಭೆಗಳ ಮೂಲಕ, ಗ್ರಾಮಸಭೆಗಳ ಮೂಲಕ ಸಾರ್ವಜನಿಕರಿಗೆ ಅರಿವು ಮೂಡಿಸಿ ಪಂಚಾಯಿತಿಗಳು ಪಾರದರ್ಶಕವಾದ ಆಡಳಿತ ನೀಡುತ್ತದೆ ಎಂಬ ನಂಬಿಕೆಯನ್ನು ಗ್ರಾಮಪಂಚಾಯಿತಿಗಳು ಉಂಟುಮಾಡುವ ಅಗತ್ಯವಿದೆ.[೧೬]

೧೪. Pratusna Patnaik ಅವರ **Affirmative action and representation of weaker sections participation and accountability in orissais panchayats** ಲೇಖನದಲ್ಲಿ, ಸಾಮಾಜಿಕ ಜಮಾಬಂದಿಯನ್ನು ಅಥವಾ ಪಾರದರ್ಶಕತೆ ಆಡಳಿತವನ್ನು ಎರಡು ರೀತಿಯಾಗಿ ಗುರುತಿಸಿದ್ದಾರೆ. Ex-post Accountabitity ಎರಡನೆಯ Ex-enti Accountability ಎಂದು ಗುರುತಿಸಿ ಗ್ರಾಮಪಂಚಾಯಿತಿಗಳ ಹೊಣೆಗಾರಿಕೆಯನ್ನು Hosilanta ಮತ್ತು Ex-post call ಎಂದು ಗುರುತಿಸಿ ಉತತರಾದಾಯತ್ವದ ಕುರಿತು ವಿವಿರಿಸಿದ್ದು ಮೊದಲನೆಯದಾದ Ex-post Accountabitityಯಲ್ಲಿ ಸಾರ್ವಜನಿಕ ಸರ್ಕಾರಿ ಅಧಿಕಾರಿಗಳು, ಚುನಾವಣೆಗಳು ಕಾನೂನು ಮತ್ತು ಇತರೆ ನಿರ್ವಾಹಕ ಯಂತ್ರಗಳು ಹೊಂದಿರುವ ಜನಾಬ್ದಾರಿಯೇ Ex-post Accountabitity. ಎರಡನೆಯದು Ex-anti Accountabitity. ಇಲ್ಲಿ ಸಾರ್ವಜನಿಕ ಆಸಕ್ತಿಗಳ ಮೇರೆಗೆ ಯೋಜನೆಗಳನ್ನು ಸಿದ್ಧಗೊಳಿಸಿ ಸಾರ್ವಜನಿಕ ಸಂಪರ್ಕದಲ್ಲಿದ್ದು, ಅಭಿವೃದ್ಧಿ ಯೋಜನೆಗಳ ಕುರಿತು ಮಾಹಿತಿಗಳನ್ನು ನೀಡುತ್ತಾ ಸಾರ್ವಜನಿಕರಿಗೆ ಜವಾಬ್ದಾರಿಯಾಗಿ ವರ್ತಿಸುವುದಾಗಿದೆ. ಉತ್ತರದಾಯಿತ್ವಕ್ಕೆ, ಜವಾಬ್ದಾರಿಗಳಿಗೆ ಮೂರು ಲಕ್ಷಣಗಳನ್ನು lederman etal ಗುರುತಿಸಲಾಗಿದೆ. ಮೊದಲನೆಯದು ಸರ್ಕಾರ ಮತ್ತು ಅವುಗಳ ಪಾರದರ್ಶಕವಾದ ಆಡಳಿತ ವ್ಯವಸ್ಥೆಯನ್ನು ಲೆಕ್ಕಪರಿಶೋಧನೆ ನಿರ್ವಹಣೆಗಳನ್ನು ನೋಡುವುದು. ಎರಡನೆಯದು ಸರ್ಕಾರ ಅಧಿಕಾರಗಳನ್ನು ಅವುಗಳ ಕಾರ್ಯಗಳಿಂದ ಬೇರ್ಪಡಿಸಿ, ಸರ್ಕಾರದ ಕೆಲಸಗಳನ್ನು ಪರಿಶೋಧಿಸಿ ನೋಡುವುದು. ಸಾರ್ವಜನಿಕವಾಗಿ ಪಾರದರ್ಶಕ

ಹಕ್ಕುಗಳನ್ನು ಸಾರ್ವತ್ರಿಕಗೊಳಿಸುವುದು ಮತ್ತು ಸರ್ಕಾರ ತಪ್ಪು ಕೆಲಸಗಳ ಬಗ್ಗೆ ಸಾರ್ವಜನಿಕರಿಗೆ ಸರಾಗವಾಗಿ ಮಾಹಿತಿ ಸಿಗುವಂತೆ ವ್ಯವಸ್ಥೆ ಮಾಡಿ ಪಾರದರ್ಶಕವಾದ ಆಡಳಿತ ಸಾರ್ವಜನಿಕ ವಾಕ್‌ಸ್ವಾತಂತ್ರ್ಯ, ಮಾಧ್ಯಮಗಳ ಸ್ವಾತಂತ್ರ್ಯಗಳನ್ನು ಕಲ್ಪಿಸಿ ಭ್ರಷ್ಟಾಚಾರಮುಕ್ತವಾದ ಆಡಳಿತ ನೀಡುವುದು. Accountabitityಯ ಪ್ರಮುಖ ಮುಖ್ಯವಾದ ಮೂರು ಲಕ್ಷಣಗಳೆಂದು Ex-Ledermenetal ಗುರುತಿಸಿದ್ದಾರೆ.[೧೮]

೧೫. Samuel Paaaul ಅವರ **Public Spending out comen and Accountability citizen repost cord as a catalyst for public Action** ಲೇಖನವು ಬೆಂಗಳೂರು ನಾಗರಿಕರಿಗೆ ಬಿ.ಬಿ.ಎಂ.ಪಿ. ಮತ್ತು ಸರ್ಕಾರ ನೀಡಿರುವ ಸಾರ್ವಜನಿಕರ ಸವಲತ್ತುಗಳು, ಅವುಗಳ ಅನುಷ್ಠಾನ ಮತ್ತು ನಾಗರಿಕರಿಗೆ ಬಡತನ ರೇಖೆಗಿಂತ ಕೆಳಗಿರುವ, ಬಡತನದಿಂದ ಬಳಲುತ್ತಿರುವ ಜನರಿಗೆ ಈ ಸವಲತ್ತುಗಳು ಸಿಗುತ್ತಿವೆಯೇ? ಅವುಗಳಿಂದ ನಾಗರಿಕರಿಗೆ ಉಪಯೋಗವಿದೆಯೆ? ಜನರ ಪರವಾಗಿ ಜಿಲ್ಲಾ ಆಡಳಿತ ಎಷ್ಟರಮಟ್ಟಿಗೆ ಕೆಲಸ ಮಾಡುತ್ತಿದೆ ಎಂಬುದನ್ನು ನೋಡುವುದಕ್ಕೆ ಒಂದು ಅಧ್ಯಯನ ತಂಡವು ಬೆಂಗಳೂರಿನ ನಾಗರಿಕರಿಂದ Citizen Report Card ಸಿದ್ಧಪಡಿಸಿ ಅದರಲ್ಲಿ ಈ ಮೇಲಿನ ಉದ್ದೇಶಗಳನ್ನು ಈಡೇರಿಸುವಂತಹ ಪ್ರಶ್ನೆಗಳು ಅಥವಾ ಮಾಹಿತಿಯನ್ನು ಶೇ.ಖಕರಿಸಿದಾಗ, ಮೊದಲ ಬಾರಿಗೆ CRC ವರದಿಯನ್ನು ಗಮನಿಸಿದಾಗ ಜಿಲ್ಲಾ ಆಡಳಿತ ಯೋಜನಗಳು ಕಳಪೆ ಮಟ್ಟದಲ್ಲಿ ಕೂಡಿರುವುದು ಕಂಡುಬಂದಿದೆ. ಸಾಮಾನ್ಯ ಜನರಿಗೆ ಕುಡಿಯುವ ನೀರು ಕೊಡಿಸುವಲ್ಲಿ ಅಸಮರ್ಥವಾಗಿದೆ. ಶ್ರೀಮಂತರ ಪರ ಕೆಲಸ ಮಾಡುವುದರಲ್ಲಿ ಹೆಚ್ಚು ಆಸಕ್ತಿ ವಹಿಸುತ್ತಿದ್ದು ಕೊಳಚೆ ಮತ್ತು ಮಧ್ಯಮವರ್ಗದ ಜನರ ಸಮಸ್ಯೆಗಳಿಗೆ ಮೂರು ತಿಂಗಳಾದರೂ ಪರಿಹಾರ ಸಿಗುವುದಿಲ್ಲ ಎಂದು ವರದಿಯಾಯಿತು. ಈ ವರದಿಯನ್ನು ಆಧರಿಸಿ, ರಾಜ್ಯ ಸರ್ಕಾರದ ಅಧಿಕಾರಿಗಳು, ಜಿಲ್ಲಾಡಳಿತ ಮತ್ತು ಮಾಧ್ಯಮದವರು ಯೋಜನೆ ಅನುಷ್ಠಾನ ಅಧಿಕಾರಿಗಳು ಸಾರ್ವಜನಿಕರು ಸೇರಿದಂತೆ ಒಂದು ಸಾರ್ವಜನಿಕ ಕುಂದುಕೊರತೆ ಸಭೆಯನ್ನು ಏರ್ಪಡಿಸಲಾಯಿತು. ಆ ಸಭೆಯಲ್ಲಿ ವಾಸ್ತವ ಅಂಶಗಳನ್ನು ಚರ್ಚಿಸಿ ಸಮಸ್ಯೆಗಳನ್ನು ಪರಿಹರಿಸಲು ಸರ್ಕಾರ ಕ್ರಮ ವಹಿಸಿತು. ಅಧಿಕಾರಿಗಳು ಸಾರ್ವಜನಿಕರ ಪ್ರಶ್ನೆಗಳಿಗೆ ಉತ್ತರಿಸಲಾಗದೆ ಇದ್ದರೂ ಆಗ ಜಿಲ್ಲಾಡಳಿತ ಮತ್ತು ಸರ್ಕಾರ ಕ್ರಮ ವಹಿಸುವುದಾಗಿ ಸಾರ್ವಜನಿಕ ಸಭೆಯಲ್ಲಿ ಆದೇಶ ಹೊರಡಿಸಲಾಯಿತು. ಸಭೆಯ ನಂತರ ಕೆಲವು ದಿನಗಳಲ್ಲಿ ಮತ್ತೊಮ್ಮೆ ಲಿಖಿತ ವರದಿಯನ್ನು ತಯಾರಿಸಲು ಮುಂದಾಗಿ ಬೆಂಗಳೂರಿನ ನಾಗರಿಕ CRC ವರದಿಯನ್ನು ಸಿದ್ಧಪಡಿಸಿ ವರದಿಯನ್ನು ಗಮನಿಸಿದಾಗ ಶೇ. ೪೦ರಷ್ಟು ಉತ್ತಮ ಕೆಲಸಗಳು ಆಗಿದ್ದು ಹಲವಾರು ಯೋಜನೆಗಳು ಅನುಷ್ಠಾನಕ್ಕೆ ಬಂದಿರುವುದು ಕಂಡುಬಂದಿತ್ತು.[೧೯]

೧೬. Aruna Bagchee ಅವರ **Political And Administrative Redities of Employment Guarantee Scheme** ಎಂಬ ಲೇಖನದಲ್ಲಿ ಗ್ರಾಮಪಂಚಾಯಿತಿಗಳಲ್ಲಿ ಪಾರದರ್ಶಕತೆ ಮತ್ತು ಉತ್ತರದಾಯಿತ್ವ ಅಥವಾ ಜವಾಬ್ದಾರಿಗಳ ಪಾತ್ರಗಳನ್ನು ಕುರಿತು ಚರ್ಚಿಸುತ್ತಾ ಪಾರದರ್ಶಕತೆಯಿಂದ ಸಂಸ್ಥೆಗಳ ಲೆಕ್ಕಪತ್ರ ವ್ಯವಹಾರ ಸಕ್ರಿಯವಾಗಿರುತ್ತವೆ ಎಂದಿದ್ದು ಮೇಲು ಹಂತದಿಂದ ಬರುವ ಅಧಿಕಾರಿಗಳಿಗೆ ಸಂಸ್ಥೆಗಳಲ್ಲಿ ಯೋಜನೆಯ ಅನುಷ್ಠಾನದ ಕುರಿತು ಉತ್ತಮ ಮಾಹಿತಿ ಸಿಗುತ್ತದೆ. ಗ್ರಾಮಪಂಚಾಯಿತಿಗಳಿಂದ ಅನುಷ್ಠಾನಗೊಂಡಿರುವ ಯೋಜನೆಗಳಿಂದ ಗ್ರಾಮಸ್ಥರಿಗೆ ನೀಡಿದ ವೇತನ ಮತ್ತು ಕೆಲಸದ ಬಗ್ಗೆ ಸಕ್ರಿಯವಾದ ಮಾಹಿತಿ ನೀಡುವುದರ ಮೂಲಕ ಜನರಿಗೆ ಸರಿಯಾದ ವೇತನ ನೀಡಲು ಸಾಧ್ಯವಾಗುತ್ತದೆ. ಗ್ರಾಮಪಂಚಾಯಿತಿಯ ಸದಸ್ಯರು ಗ್ರಾಮಸಭೆಯಲ್ಲಿ ಭಾಗವಹಿಸುವುದು ಮತ್ತು ಗ್ರಾಮಪಂಚಾಯಿತಿಗಳಲ್ಲಿ ಸೇರಿ ಗ್ರಾಮದ ಸಮಸ್ಯೆಗಳನ್ನು ಚರ್ಚಿಸುವುದರಿಂದ ಗ್ರಾಮಸಭೆಗಳಲ್ಲಿ ಪಂಚಾಯಿತಿಯ ಸಿಬ್ಬಂದಿಯವರ ಮತ್ತು ಪಂಚಾಯಿತಿಗೆ ಆಯ್ಕೆಯಾದ ಸದಸ್ಯರ ಭಾಗವಹಿಸುವಿಕೆ ಸಾಧ್ಯವಾಗಿ ಸಮಸ್ಯೆಗಳಿಗೆ ಪರಿಹಾರ ಸಿಗುವುದರ ಜೊತೆಯಲ್ಲಿ ಗ್ರಾಮ ಕೂಲಿಕಾರ್ಮಿಕರಿಗೆ ಕೂಲಿ ಕೆಲಸ ಸಿಗುವುದು ಮತ್ತು ವೇತನ ಸರಿಯಾಗಿ ಜಾರಿಯಾಗುವುದು ಕಂಡುಬಂದಿದೆ. ಈ ರೀತಿಯಲ್ಲಿ ಗ್ರಾಮಪಂಚಾಯಿತಿಗಳು ಪಾರದರ್ಶಕತೆ ಕಾಯ್ದುಕೊಳ್ಳಲು ಸಾಮಾಜಿಕ ಜಮಾಬಂದಿಯ ಸಭೆಗಳನ್ನು ನಡೆಸುವುದು ಮತ್ತು ಜನರು ನೇರವಾಗಿ ಅಧಿಕಾರಿಗಳನ್ನು ಪ್ರಶ್ನಿಸಿ ಮೇಲು ಹಂತದಿಂದ ಬರಬಹುದಾದ ಹಣಕಾಸಿನ ನೇರವನ್ನು ಪಡೆಯುವುದು. ಗ್ರಾಮಪಂಚಾಯಿತಿಗಳ ಭ್ರಷ್ಟಾಚಾರಮುಕ್ತ ಆಡಳಿತವನ್ನು ಪಡೆಯಬಹುದೆಂದು ಲೇಖಕರು ಉಲ್ಲೇಖಿಸುತ್ತಾರೆ.[೨೦]

೧೭. ಎನ್. ಶಿವಣ್ಣ ಮತ್ತು ಎಂ. ದೇವೇಂದ್ರ ಬಾಬು ಅವರ **Panchayath jamabandhi in Karnataka A case study of Transparency and accountability in good governance** ಎಂಬ ಲೇಖನದಲ್ಲಿ ಕರ್ನಾಟಕದ ಬಿಜಾಪುರ ಜಿಲ್ಲೆಯ ಮುದ್ದೇಬಿಹಾಳ ತಾಲ್ಲೂಕಿನ ಮತ್ತು ಬೇರೋಜ್ಜಾ ಗ್ರಾಮಪಂಚಾಯಿತಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಪುತ್ತೂರು ತಾಲ್ಲೂಕಿನ ಶಿರಿಡಿ ಗ್ರಾಮಪಂಚಾಯಿತಿಗಳ ಸಾಮಾಜಿಕ ಜಮಾಬಂದಿ ಗ್ರಾಮಸಭೆಯು ಸಕ್ರಿಯವಾಗಿ ನಡೆಯದೆ ಇರುವುದನ್ನು ಗುರುತಿಸಿದ್ದಾರೆ. ಅದಕ್ಕೆ ಕಾರಣಗಳು ಈ ರೀತಿಯಾಗಿವೆ: ಈ ಎರಡು ಗ್ರಾಮ ಪಂಚಾಯಿತಿಗಳಲ್ಲಿ ಸಾಮಾಜಿಕ ಜಮಾಬಂದಿ ಸಭೆಯ ಕುರಿತು ಪ್ರಚಾರ ಮಾಡದೆ ಜಮಾಬಂದಿ ಗ್ರಾಮಸಭೆಯನ್ನು ನಡೆಸುತ್ತಾರೆ. ಸಾಮಾಜಿಕ ಜಮಾಬಂದಿ ನಡೆಯುವಂತಹ ಅಧಿಕಾರಗಳ ತಂಡಗಳಿಗೆ ಸಮಯಕ್ಕೆ ಸರಿಯಾಗಿ ತರಬೇತಿಯನ್ನು ನೀಡದಿರುವುದು ಕಂಡುಬಂದಿದೆ. ಗ್ರಾಮಪಂಚಾಯಿತಿಗಳಲ್ಲಿ ಕಾರ್ಯದರ್ಶಿಗಳು ಇಲ್ಲದಿರುವುದು ಹಾಗೂ ಇದ್ದರೂ ಇವರು ಒಬ್ಬ ಕಾರ್ಯದರ್ಶಿಯು ಎರಡರಿಂದ ಮೂರು ಗ್ರಾಮಪಂಚಾಯಿತಿಗಳಲ್ಲಿ ಕಾರ್ಯ ನಿರ್ವಹಿಸುವುದು ಕಂಡುಬಂದಿದ್ದು, ಇವರು ಒಂದು ಗ್ರಾಮಪಂಚಾಯಿತಿಯಲ್ಲಿ ಅರ್ಧ ದಿನ, ಇನ್ನೊಂದು ಗ್ರಾಮಪಂಚಾಯಿತಿಯಲ್ಲಿ ಅರ್ಧ

ದಿನ ಕಾರ್ಯ ನಿರ್ವಹಿಸುವುದರಿಂದಾಗಿ ಒಂದು ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯನ್ನು ಕಾಯ್ದೆಯ ನಿಯಮಾನುಸರವಾಗಿ ನಡೆಸದೆ ಇರುವುದು ಕಂಡುಬಂದಿದೆ. ಗ್ರಾಮಪಂಚಾಯಿತಿಯ ಸಿಬ್ಬಂದಿ ಮತ್ತು ಅಧಿಕಾರಿಗಳು ಜಮಾಬಂದಿ ಅಧಿಕಾರಿಗಳ ತಂಡದವರಿಗೆ ಯೋಜನೆಗಳ ಕಾಮಗಾರಿಗಳನ್ನು ಪರಿಶೀಲಿಸುವುದಕ್ಕೆ ಮುನ್ನ ಸಹಿ ಪಡೆದುಕೊಂಡು ಕೆಲವೇ ಕಾಮಗಾರಿಗಳನ್ನು ಪರಿಶೀಲಿಸುವಂತೆ ಮಾಡುತ್ತಾರೆ. ಅದರ ಜೊತೆಯಲ್ಲಿ ಜಿಲ್ಲಾಪಂಚಾಯಿತಿ ಮತ್ತು ತಾಲ್ಲೂಕು ಪಂಚಾಯಿತಿಗಳಿಂದ ಕಾಮಗಾರಿಗಳನ್ನು ಪರಿಶೀಲಿಸುವುದಕ್ಕೆ ಸೂಕ್ತ ಕಿಟ್‌ಗಳನ್ನು ನೀಡದಿರುವುದು ಕಂಡುಬಂದಿದೆ. ಗ್ರಾಮದ ಜನರಿಗೆ ಸಾಮಾಜಿಕ ಜಮಾಬಂದಿಯ ಬಗ್ಗೆ ಮಾಹಿತಿ ಇಲ್ಲದಿರುವುದನ್ನು ಗ್ರಾಮಸ್ಥರು ವ್ಯಕ್ತಪಡಿಸಿದ್ದಾರೆ. ಗ್ರಾಮಪಂಚಾಯಿತಿಯ ಅಧ್ಯಕ್ಷರು ಮತ್ತು ಸದಸ್ಯರಲ್ಲಿಯೂ ಸಾಮಾಜಿಕ ಜಮಾಬಂದಿಯ ಸೂಕ್ತ ಅರಿವು ಇಲ್ಲದಿರುವುದರಿಂದ ಜನರಿಗೆ ಮಾಹಿತಿ ನೀಡದಿರುವುದು ಸಭೆಯ ವಿಫಲತೆಗೆ ಕಾರಣವಾಗಿದೆ. ಸದಸ್ಯರೇ ಅಭಿವೃದ್ಧಿ ಕಾಮಗಾರಿಗಳನ್ನು ಮಾಡಿಸಿ ಗ್ರಾಮಸಭೆಯನ್ನು ಪಾರದರ್ಶಕವಾಗಿ ನಡೆಸದೆ ಕಾಮಗಾರಿಗಳ ಮಟ್ಟ ಕಳಪೆ ಇರುವುದು ಕಂಡುಬರುತ್ತದೆ.[೨೧]

೧೮. ಡಿ. ನಾರಾಯಣ ಅವರ **Local governance without capacity building ten years of panchayathi** ಎಂಬ ಲೇಖನದಲ್ಲಿ ಕೇರಳ ಮಧ್ಯಪ್ರದೇಶ ಮತ್ತು ತಮಿಳನಾಡುಗಳ ಗ್ರಾಮಪಂಚಾಯಿತಿ ಸದಸ್ಯರ ಸಾಮಾಜಿಕ ಆರ್ಥಿಕ ಸ್ಥಿತಿಗಳು ಹೇಗೆ ತಮ್ಮ ಆಡಳಿತ ನಿರ್ವಹಣೆಯ ಮೇಲೆ ಪ್ರಭಾವ ಬೀರಿವೆ ಎಂದು ವಿವರಿಸಿದ್ದಾರೆ. ಮಧ್ಯಪ್ರದೇಶದಲ್ಲಿ ಕಳೆದ ಹತ್ತು ವರ್ಷಗಳಿಂದ ಗ್ರಾಮಪಂಚಾಯಿತಿ ಅಧಿಕಾರ ಮತ್ತು ಆಡಳಿತವು ಸುಧಾರಣೆಯಾಗದಿರುವುದು ಕಂಡುಬಂದಿದೆ. ಕಾರಣ ಈ ರಾಜ್ಯದಲ್ಲಿ ಜಿಲ್ಲಾ ಹಂತದಲ್ಲಿ ಹೆಚ್ಚಿನ ಅಧಿಕಾರವಿದ್ದು ಅವು ಗ್ರಾಮಪಂಚಾಯಿತಿಗಳಿಗೆ ಹರಿದು ಬಂದಿರುವುದಿಲ್ಲ. ಹಾಗಾಗಿ ಈ ರಾಜ್ಯದಲ್ಲಿ ಗ್ರಾಮಮಟ್ಟದಲ್ಲಿ ಜನರ ಭಾಗವಹಿಸುವಿಕೆ ಕಡಿಮೆಯಿದೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳಲ್ಲಿ ಹೆಚ್ಚು ಶಿಕ್ಷಣ ಇಲ್ಲದಿರುವ ಕಂಡು ಬಂದಿದೆ. ಗ್ರಾಮ ಚುನಾವಣೆಗಳಲ್ಲಿ ಮಹಿಳೆಯರ ಭಾಗವಹಿಸುವಿಕೆ ಕಡಿಮೆಯಿದೆ. ತಮಿಳುನಾಡಿನಲ್ಲಿ ಸ್ಥಳೀಯ ಸರ್ಕಾರಗಳು ಅಧಿಕಾರವನ್ನು ತಮ್ಮಲ್ಲಿರಿಸಿಕೊಂಡಿದೆ. ಗ್ರಾಮಪಂಚಾಯಿತಿಗಳಿಗೆ ಹೆಚ್ಚಿನ ಅಧಿಕಾರ ವಿಕೇಂದ್ರೀಕರಣಗೊಳಿಸದೇ ರಾಜ್ಯ ಸರ್ಕಾರವೇ ನೇರವಾಗಿ ಗ್ರಾಮೀಣ ಅಭಿವೃದ್ಧಿ ಯೋಜನೆಗಳನ್ನು ರೂಪಿಸುವ ಕೆಲಸವನ್ನು ಮಾಡುತ್ತದೆ. ತಮಿಳುನಾಡು ರಾಜ್ಯದಲ್ಲಿ ಹೆಚ್ಚು ಮಹಿಳೆಯರ ಭಾಗವಹಿಸುವಿಕೆ ಕಂಡುಬರುತ್ತದೆ. ಹೆಚ್ಚು ಶಿಕ್ಷಣ ಹೊಂದಿದವರು ಸಂಘ ಸಂಸ್ಥೆಗಳ ಸದಸ್ಯತ್ವ ಹೊಂದಿದವರು ಗ್ರಾಮಪಂಚಾಯಿತಿ ಆಡಳಿತ ಮತ್ತು ಗ್ರಾಮಪಂಚಾಯಿತಿ ಚುನಾವಣೆಗಳಲ್ಲಿ ಸ್ಪರ್ಧಿಸಿರುವುದು ಕಂಡುಬಂದಿದೆ.

ಕೇರಳ ರಾಜ್ಯದಲ್ಲಿ ಗ್ರಾಮಪಂಚಾಯಿತಿಗಳಲ್ಲಿ ಹೆಚ್ಚಿನ ವಿಕೇಂದ್ರೀಕರಣ ವ್ಯವಸ್ಥೆಯನ್ನು ಗಮನಿಸಬಹುದು. ರಾಜ್ಯ ಸರ್ಕಾರಗಳ ೭೩ನೇ ತಿದ್ದುಪಡಿ ಅನುಷ್ಠಾನಕ್ಕೆ ಹೆಚ್ಚು ಒತ್ತು ನೀಡಿರುವುದು ಕಂಡುಬಂದಿದೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನಸಮುದಾಯಗಳು ಗ್ರಾಮ ಪಂಚಾಯಿತಿಯ ಚುನಾವಣೆಗಳಲ್ಲಿ ಹೆಚ್ಚಾಗಿ ಸ್ಪರ್ಧಿಸುತ್ತಾರೆ. ಮಹಿಳೆಯರು ಹೆಚ್ಚು ಗ್ರಾಮಸಭೆಗಳಲ್ಲಿ ಭಾಗವಹಿಸುತ್ತಾರೆ ಮತ್ತು ಚುನಾವಣೆಗಳಲ್ಲಿ ಸ್ಪರ್ಧಿಸುತ್ತಾರೆ. ಇದಕ್ಕೆ ಪ್ರಧಾನ ಕಾರಣ ಈ ರಾಜ್ಯದಲ್ಲಿ ಮಹಿಳೆಯರು ಹೆಚ್ಚು ಶಿಕ್ಷಣವನ್ನು ಪಡೆದಿರುವುದಾಗಿದೆ. ರಾಜ್ಯವು ಹೆಚ್ಚು ಸಾಕ್ಷರತೆಯನ್ನು ಹೊಂದಿದ್ದು ಜನರು ಸರ್ಕಾರಿ ಯೋಜನೆಗಳ ಬಗ್ಗೆ ಅರಿವು ಹೊಂದಿರುವುದು ಕಂಡುಬಂದಿದೆ. ಗ್ರಾಮ ಪಂಚಾಯಿತಿಯ ಆಡಳಿತದ ಅರಿವು ಇರುವುದು ಕಂಡುಬರುತ್ತದೆ.[೨೨]

ಈ ಲೇಖನದಲ್ಲಿ ಗ್ರಾಮೀಣಾಭಿವೃದ್ಧಿಯು ಗ್ರಾಮಪಂಚಾಯಿತಿಗಳಿಗೆ ಬರಬೇಕಾದ ಅಧಿಕಾರ ಮತ್ತು ಹಣಕಾಸಿನ ವಿಕೇಂದ್ರೀಕರಣಗಳನ್ನು ಆಧರಿಸಿರುತ್ತದೆ. ಹಾಗೆಯೇ ರಾಜ್ಯದ ಸಾಕ್ಷರತೆಯನ್ನು ಮಹಿಳೆಯರ ಸಾಕ್ಷರತೆಯನ್ನು ಆಧರಿಸಿರುತ್ತದೆ. ಯಾವ ರಾಜ್ಯದಲ್ಲಿ ಮಹಿಳೆಯರು ಶಿಕ್ಷಣ ಹೊಂದಿದ್ದಾರೆಯೋ ಆ ರಾಜ್ಯದಲ್ಲಿ ಗ್ರಾಮಪಂಚಾಯಿತಿಗಳಲ್ಲಿ ಮಹಿಳೆಯರ ಭಾಗವಹಿಸುವಿಕೆ ಹೆಚ್ಚಾಗಿರುತ್ತದೆ.

೧೯. M.R.Raghuram murthy ಅವರ **Role of panchayath Raj institution in Rrural Development with special reference Ananthpur district** ಎಂಬ ಮಹಾಪ್ರಬಂಧವು ಗ್ರಾಮೀಣಾಭಿವೃದ್ಧಿಯಲ್ಲಿ ಪಂಚಾಯಿತಿ ಸಂಸ್ಥೆಗಳ ಪಾತ್ರವನ್ನು ಕುರಿತು ವಿಶ್ಲೇಷಿಸಿದೆ. ಮೊದಲಿಗೆ ಆಂಧ್ರಪ್ರದೇಶದಲ್ಲಿ ಪಂಚಾಯತ್ ವ್ಯವಸ್ಥೆಯು ಮೂರು ಮಾದರಿಯಲ್ಲಿ ಮೇಲು ಹಂತದಲ್ಲಿ ಜಿಲ್ಲಾ ಪರಿಷತ್‌ಗಳು, ತಾಲ್ಲೂಕು ಮಟ್ಟದಲ್ಲಿ ಮಂಡಲ್ ಪಂಚಾಯಿತಿಗಳು, ತಳ ಮಟ್ಟದಲ್ಲಿ ಗ್ರಾಮಪಂಚಾಯಿತಿಗಳು ಕಾರ್ಯ ನಿರ್ವಹಿಸುತ್ತಿವೆ. ಈ ಗ್ರಾಮಪಂಚಾಯಿತಿ ಮಟ್ಟದಲ್ಲಿ ಹೆಚ್ಚು ಅಧಿಕಾರ ವಿಕೇಂದ್ರೀಕರಣವಾಗಿದೆ. ವರ್ಷಕ್ಕೆ ನಾಲ್ಕು ಗ್ರಾಮಸಭೆಗಳನ್ನು ನಡೆಸಲಾಗುತ್ತದೆ. ಈ ಗ್ರಾಮಸಭೆಗಳನ್ನು ರಾಷ್ಟ್ರೀಯ ದಿನಾಚರಣೆಗಳಿದ್ದ ಸಮಯದಲ್ಲಿ ನಡೆಸುವುದು ಹೆಚ್ಚು ಸೂಕ್ತ ಎನ್ನಲಾಗಿದೆ. ಗ್ರಾಮದ ಜನರು ಒಂದು ಕಡೆ ಸೇರುವ ಅವಕಾಶಗಳು ಹೆಚ್ಚಾಗಿರುತ್ತವೆ. ಈ ಗ್ರಾಮಸಭೆಯಲ್ಲಿ ಮೊದಲು ಕಳೆದ ವರ್ಷದ ಅಡಿಟ್ ವರದಿಯನ್ನು ಗ್ರಾಮಸ್ಥರ ಸಮ್ಮುಖದಲ್ಲಿ ಓದುವುದು, ವಿವಿಧ ಯೋಜನೆಗಳ ಬಗ್ಗೆ ಜನರಿಗೆ ಅರಿವು ನೀಡುವುದು, ನಂತರ ಫಲಾನುಭವಿಗಳ ಕುರಿತು ಚರ್ಚೆಯನ್ನು ಮಾಡುವುದು, ಕಾರ್ಮಿಕ ಸಮುದಾಯಗಳಿಗೆ ಬಾಕಿ ಇರುವ ಧನಸಹಾಯ ಕುರಿತು ಜನರಿಗೆ ಮಾಹಿತಿ ನೀಡಿ ಧನಸಹಾಯವನ್ನು ಗ್ರಾಮಪಂಚಾಯಿತಿಯ ಕಾರ್ಮಿಕರಿಗೆ ಪಾವತಿಸುವುದು ಈ ಮೂರು ಮುಖ್ಯ ಕಾರ್ಯಗಳನ್ನು ಅನಂತಪುರ ಜಿಲ್ಲೆಯ ಗ್ರಾಮಸಭೆಗಳಲ್ಲಿ

ಮಾಡಲಾಗುತ್ತದೆ. ಗ್ರಾಮಸಭೆಗಳು ರಾಷ್ಟ್ರೀಯ ದಿನಾಚರಣೆ ಸಮಯದಲ್ಲಿ ನಡೆಸುವುದರಿಂದ ಗ್ರಾಮಸ್ಥರು ಸಾಮಾಜಿಕವಾಗಿ ಸಭೆ ಸೇರುತ್ತಾರೆ. ಆರ್ಥಿಕ ವಿಷಯಗಳನ್ನು ಚರ್ಚಿಸುವುದರ ಮೂಲಕ ಹಣಕಾಸಿನ ವಿಷಯಗಳಲ್ಲಿ ಜನರು ಭಾಗವಹಿಸುತ್ತಾರೆ. ಗ್ರಾಮಪಂಚಾಯಿತಿಗಳಲ್ಲಿ ಜನರು ಹೆಚ್ಚು ಭಾಗವಹಿಸಿ ಮತ ಚಲಾಯಿಸುವುದರ ಮೂಲಕ ಗ್ರಾಮಪಂಚಾಯಿತಿ ಗ್ರಾಮಸ್ಥರು ವಿವಿಧ ರೀತಿಯಲ್ಲಿ ಭಾಗವಹಿಸುವಿಕೆ ಸಾಧ್ಯವಾಗುತ್ತದೆ. ಗ್ರಾಮೀಣ ಅಭಿವೃದ್ಧಿ ಯೋಜನೆಗಳಿಂದ ತಮ್ಮ ಮೂಲಭೂತ ಅವಶ್ಯಕತೆಗಳನ್ನು ಪಡೆಯಲಾಗಿದೆ ಎಂದು ವಿವರಿಸಿದ್ದಾರೆ.[೨೩]

೨೦. Timmneeni Nataraj Gowda ಅವರ **Implementation and impact of NREGP: A case study of Orvakonda mandalam** ಎಂಬ ಪಿಎಚ್.ಡಿ. ಅಧ್ಯಯನದಲ್ಲಿ ಎನ್.ಆರ್.ಇ.ಜಿ.ಪಿ. ಯೋಜನೆ ಪರಿಣಾಮಗಳ ಕುರಿತು ಅನಂತಪುರ ಜಿಲ್ಲೆಯ ಉರವಕೊಂಡ ಮಂಡಲದಲ್ಲಿರುವ ಅವಿದ್ಯಲಾ, ಕೌಕೂಂಟ್ಲಾ ಗ್ರಾಮಪಂಚಾಯಿತಿಗಳ ಕುರಿತು ಅಧ್ಯಯನ ಮಾಡಲಾಗಿದೆ. ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯು ಅನಂತಪುರ ಜಿಲ್ಲೆಯ ಒಂದು ಮಂಡಲದ ವ್ಯಾಪ್ತಿಯಲ್ಲಿ ಅನುಷ್ಠಾನಗೊಂಡಿದ್ದು, ಸ್ಥಳೀಯವಾಗಿ ವಲಸೆ ಹೋಗುವವರ ಸಂಖ್ಯೆ ಕಡಿಮೆ ಮಾಡಿತ್ತು ಎಂದು ಹೇಳಲಾಗಿದೆ. ಇದು ಬಯಲು ಪ್ರದೇಶವಾಗಿರುವುದರಿಂದ ಆ ಮಂಡಲದಲ್ಲಿ ಕೃಷಿ ಮಾಡಲಾಗುವುದಿಲ್ಲ. ಕೃಷಿ ಕೂಲಿ ಸಿಕ್ಕರೂ ಕಡಿಮೆ ಕೂಲಿ ಸಿಗುತ್ತಿತ್ತು. ಎನ್.ಆರ್.ಇ.ಜಿ.ಪಿ. ಯೋಜನೆ ಜಾರಿಗೊಂಡ ನಂತರ ಕೃಷಿ ಕೂಲಿಗಿಂತ ಹೆಚ್ಚು ಕೂಲಿಗೆ ಕಾರ್ಮಿಕರಿಗೆ ಸಿಕ್ಕಿತ್ತು. ಕೃಷಿ ಕೂಲಿ ಹೋಗುವವರ ಸಂಖ್ಯೆ ಕಡಿಮೆಯಾದರಿಂದ ಕೃಷಿ ಕೂಲಿಯನ್ನು ಹೆಚ್ಚಿಸಲಾಯಿತು. ವರ್ಷದಲ್ಲಿ ೧೦೦ ದಿನಗಳ ಕೂಲಿ ಸಿಗುವುದರಿಂದ ಗ್ರಾಮಸ್ಥರು ನಗರಗಳಿಗೆ ಹೋಗದೆ ಗ್ರಾಮಗಳಲ್ಲಿ ಉಳಿದರು. ಅವರ ಆದಾಯ ಹೆಚ್ಚಿ ವಲಸೆ ಹೋಗದೆ ಮಕ್ಕಳನ್ನು ಶಾಲೆ ಕಳುಹಿಸಲು ಅನುಕೂಲವಾಯಿತು. ಇತರೆ ಕೂಲಿ ಕೆಲಸಗಳ ಕೂಲಿಯೂ ಹೆಚ್ಚಾಯಿತು ಎಂದು ಹೇಳಲಾಗಿದೆ. ಈ ರೀತಿ ಈ ಯೋಜನೆಯು ಪರೋಕ್ಷವಾಗಿ ಕೂಲಿ ಕಾರ್ಮಿಕರಿಗೆ ಉಪಯುಕ್ತವಾಗಿರುವುದು ಕಂಡುಬಂದಿದೆ. ಕಾರಣ ಕಾಲಕಾಲಕ್ಕೆ ಈ ಯೋಜನೆಯಲ್ಲಿ ಹಲವು ಸುಧಾರಣೆಗಳನ್ನು ಜಾರಿಗೆ ತರುವುದರ ಮೂಲಕ ಆಗಿದೆ ಎನ್ನಲಾಗಿದೆ. ಕೂಲಿ ವೇತನ ಹೆಚ್ಚುಗೊಳಿಸಿದ್ದು ಸಾಮಾಜಿಕ ಜಮಾಬಂದಿಯ ಮೂಲಕ ಕಾರ್ಮಿಕರಿಗೆ ಕೆಲಸ ಕೊಡಿಸುವುದು, ನಿರುದ್ಯೋಗಿಗಳಿಗೆ ಭತ್ಯೆ ನೀಡುವುದು ಮತ್ತು ಓಂಬಡ್ಸ್‌ಮೆನ್‌ಗಳ ನೇಮಕ ಸೇರಿದಂತೆ ಜಾರಿಗೆ ತಂದ ಸುಧಾರಣೆಗಳಿಂದಾಗಿ ಈ ಯೋಜನೆಯ ಫಲವು ಗ್ರಾಮೀಣ ಜನರಿಗೆ ಸಿಕ್ಕಿರುವುದು ಕಂಡುಬರುತ್ತದೆ.[೨೪]

೨೧. M.Obalishu ಅವರ **Administrition of rural development programme: A case study of MNREGP in Ananthpur District of Andhra Pradesh** ಮಹಾ

ಪ್ರಬಂಧದಲ್ಲಿ ಅನಂತಪುರ ಜಿಲ್ಲೆಯ ನಾರಯಣಪುರಂ, ಅವಿಡಿಗುಂಡಿ, ಕಲ್ಲುಮುರಿ, ತಲಪುರು, ಪಂಪನೂರು ದೊಡ್ಡಘಟ್ಟ, ವಡ್ಡಿಪಲ್ಲಿ, ಗ್ರಾಮಪಂಚಾಯಿತಿಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ಅಧ್ಯಯನವು ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯಲ್ಲಿ ಗ್ರಾಮೀಣ ಸಮಾಜದ ವಿವಿಧ ಸಾಮಾಜಿಕ ವರ್ಗಗಳು ಎಷ್ಟು ಭಾಗವಹಿಸಿವೆ ಮತ್ತು ವಿವಿಧ ಮಾದರಿಯ ಜನರು ಈ ಯೋಜನೆಯ ಫಲವನ್ನು ಪಡೆಯುವಲ್ಲಿ ಸಾಧ್ಯವಾಗಿದೆ ಎಂದು ವಿವರಿಸಲಾಗಿದೆ. ಶೇ.೧೦೦ರಲ್ಲಿ ಪುರುಷರು ೫೬.೯೪ರಷ್ಟು ಎಂ.ಎನ್.ಆರ್.ಇ.ಜಿ.ಪಿ ಯೋಜನೆಯ ಫಲವನ್ನು ಪಡೆಯಲಾಗಿದೆ. ಮಹಿಳೆಯರು ಶೇ.೪೩ರಷ್ಟು ಜನರು ಫಲವನ್ನು ಪಡೆದಿದ್ದಾರೆ. ಈ ಯೋಜನೆಯಲ್ಲಿ ಭಾಗವಹಿಸಿದವರಲ್ಲಿ ಯುವಕರ ಸಂಖ್ಯೆ ಹೆಚ್ಚಿದೆ. ಶೇ.೫೪ರಷ್ಟು ಯುವಕರು ೨೫ರಿಂದ ೪೦ ವರ್ಷದವರಾಗಿದ್ದು ನಿರುದ್ಯೋಗಿಗಳ ಭಾಗವಹಿಸುವಿಕೆ ಉತ್ತಮವಾಗಿರುವುದು ಕಂಡುಬಂದಿದೆ. ಶೇ.೭೫ರಷ್ಟು ಅವಿವಾಹಿತರು ಹೆಚ್ಚು ಭಾಗವಹಿಸಿದ್ದಾರೆ. ಶೇ.೧೯ರಷ್ಟು ವಿವಾಹಿತರು ಭಾಗವಹಿಸಿದ್ದಾರೆ. ಹಾಗೂ ಅನಕ್ಷಸ್ಥರು ಹೆಚ್ಚು ಸಂಖ್ಯೆಯಲ್ಲಿ ಈ ಯೋಜನೆಯಲ್ಲಿ ಭಾಗವಹಿಸಿದ್ದಾರೆ. ವಿದ್ಯಾವಂತರು ಶೇ.೨೮ರಷ್ಟು ಮಾತ್ರ ಭಾಗವಹಿಸಿದ್ದಾರೆ. ಹಿಂದು ಧರ್ಮದವರು ಈ ಯೋಜನೆಯಲ್ಲಿ ಹೆಚ್ಚು ಭಾಗವಹಿಸಿದ್ದು ಇತರೆ ಧರ್ಮದವರು ಹೆಚ್ಚು ಭಾಗವಹಿಸಿಲ್ಲದಿರುವುದು ಕಂಡುಬಂದಿದೆ. ಈ ಯೋಜನೆಯ ಕಾರ್ಡನ್ನು ಪರಿಶಿಷ್ಟ ಜಾತಿಯ ಶೇ.೪೧ರಷ್ಟು ಜನರು ಹೊಂದಿದ್ದಾರೆ. ಹಾಗೆಯೇ ಹಿಂದುಳಿದ ವರ್ಗದ ಶೇ.೪೩ರಷ್ಟು ಜನರು ಈ ಯೋಜನೆಯ ಫಲವನ್ನು ಪಡೆಯುವಲ್ಲಿ ನಿರತರಾಗಿದ್ದಾರೆ. ಈ ಯೋಜನೆಯಲ್ಲಿ ಕೃಷಿ ಮಾಡುವವರು ಹೆಚ್ಚು ದುಡಿಯುತ್ತಿದ್ದು ಶೇ.೬೨ ರಷ್ಟು ಪಾಲು ಪಡೆದಿದ್ದಾರೆ. ವ್ಯವಸಾಯೇತರ ಕಾರ್ಮಿಕರು ಈ ಗ್ರಾಮಗಳಲ್ಲಿ ಶೇ.೩.೩ರಷ್ಟಿದ್ದು, ಈ ಯೋಜನೆಯ ಫಲವನ್ನು ಪಡೆಯುತ್ತಿರುವುದು ಕಂಡುಬಂದಿದೆ. ಒಟ್ಟಾರೆಯಾಗಿ ಪ್ರತಿ ಸಾಮಾಜಿಕ ಗುಂಪುನಲ್ಲಿ ಶೇ.೧೦೦ರಷ್ಟು ಈ ಯೋಜನೆಯ ಫಲಾನುಭವಿಗಳಾಗುವ ಅರ್ಹತೆಯನ್ನು ಹೊಂದಿದ್ದು ಸರಾಸರಿ ಶೇ.೩೬ರಷ್ಟು ಸಾಮಾಜಿಕ ಗುಂಪುಗಳಿಗೆ ಈ ಯೋಜನೆಯು ಸಿಗುತ್ತಿದೆ. ಪರಿಶಿಷ್ಟ ಜಾತಿಯ ಸಮುದಾಯಗಳು ಶೇ.೫೯ರಷ್ಟು ಜನರು ಈ ಯೋಜನೆಯಿಂದ ದೂರ ಉಳಿದಿರುವುದು ಕಂಡುಬಂದಿದೆ.[೨೫]

೨೨. **Dr.Babita agrawal** ಅವರ **Urbanisation of rural aria** ಎಂಬ ಲೇಖನದಲ್ಲಿ ನಗರಪ್ರದೇಶಗಳಿಗೆ ಹೊಂದಿಕೊಂಡಿರುವ ಗ್ರಾಮಾಭಿವೃದ್ಧಿ ಕುರಿತು ಚರ್ಚಿಸಿದ್ದಾರೆ. ನಗರದ ಪಕ್ಕದಲ್ಲಿರುವ ಗ್ರಾಮೀಣ ಪ್ರದೇಶಗಳಲ್ಲಿ ನಗರ ಪ್ರಭಾವ ಕಂಡುಬರುತ್ತದೆ. ನಗರಗಳಿಗೆ ಹತ್ತಿರದಲ್ಲಿರುವ ಗ್ರಾಮಗಳ ಆರ್ಥಿಕ ಸ್ಥಿತಿಯು ಸುಧಾರಿಸಿರುತ್ತದೆ. ನಗರದ ಪ್ರದೇಶಗಳಿಗೆ ಹೋಗಿ ಕೂಲಿ ಕೆಲಸಕ್ಕೆ ದುಡಿಮೆಯನ್ನು ಪಡೆಯುತ್ತಾರೆ. ಇಂತಹ ಗ್ರಾಮಗಳು ಅರೆ ಗ್ರಾಮೀಣ ವ್ಯವಸ್ಥೆ ಮತ್ತು ಅರೆ ನಗರವ್ಯವಸ್ಥೆಯನ್ನು

ಹೊಂದಿವೆ. ಇಂತಹ ಗ್ರಾಮಗಳಲ್ಲಿ ಎಲ್ಲರಿಗೂ ಕೆಲಸ ಸಿಗದೇ ಇರಬಹುದು. ಕೃಷಿ ಕೂಲಿ ಜನರಿಗೆ ಗ್ರಾಮಪಂಚಾಯಿತಿಯ ಮೂಲಕ ಅಭಿವೃದ್ಧಿ ಹೊಂದುವುದು ಕಂಡುಬಂದರೆ, ಉತ್ತಮ ಆರ್ಥಿಕ ಸ್ಥಿತಿ ಹೊಂದಿರುವ ಕುಟುಂಬಗಳು ಗ್ರಾಮಪಂಚಾಯಿತಿಯನ್ನು ಆಧಾರ ಪಡದಿರುವುದು ಕಂಡು ಬರುತ್ತದೆ. ಇವರ ಗ್ರಾಮಸಭೆಗಳಲ್ಲಿ ಭಾಗವಹಿಸುವಿಕೆ ಕಡಿಮೆಯಿದೆ. ಅನಕ್ಷರಸ್ಥ ಕುಟುಂಬಗಳು ಗ್ರಾಮಪಂಚಾಯಿತಿಗಳಲ್ಲಿ ಭಾಗವಹಿಸುವುದು ಮತ್ತು ಗ್ರಾಮಪಂಚಾಯಿತಿಗೆ ಆಯ್ಕೆಯಾಗುವುದರಿಂದ ಆಡಳಿತದಲ್ಲಿ ಹೆಚ್ಚು ಬದಲಾವಣೆಗಳನ್ನು ಕಾಣಲಾಗುವುದಿಲ್ಲ. ಇಂತಹ ಗ್ರಾಮಗಳಲ್ಲಿ ಅನ್ ಬ್ಯಾಲೆನ್ಸ್ಡ್ ಡೆವಲಪ್‌ಮೆಂಟ್ ಇರುತ್ತದೆ. Economical social infrastructreಗಳು ಆಗದೇ ಇರುವುದು ಕಂಡುಬರುತ್ತದೆ. ಅಭಿವೃದ್ಧಿ ಯೋಜನೆಗಳ ಅರಿವು ಕಡಿಮೆ ಇರುವುದು ಕಂಡುಬರುತ್ತದೆ. ಗ್ರಾಮಸಭೆಗಳಲ್ಲಿ ಗ್ರಾಮಸ್ಥರ ಸಕ್ರಿಯ ಭಾಗವಹಿಸುವಿಕೆ ಕಡಿಮೆ ಇರುವಂತಹ ಸ್ಥಿತಿಯು ಇಂತಹ ಗ್ರಾಮಪಂಚಾಯಿತಿಗಳಲ್ಲಿ ಕಂಡುಬರುತ್ತದೆ.[೨೬]

೨೩. ಜಗದೀಶ ಚ.ನಾಯಕ ಅವರ **ಪಂಚಾಯಿತ್ ವ್ಯವಸ್ಥೆಯಲ್ಲಿ ಬೇಡ ಬುಡಕಟ್ಟಿನ ಪಾಲ್ಗೊಳ್ಳುವಿಕೆ** ಎಂಬ ಮಹಾಪ್ರಬಂಧದಲ್ಲಿ ಬೇಡ ನಾಯಕರ ರಾಜಕೀಯ ಪಾಲ್ಗೊಳುವಿಕೆಯನ್ನು ಕುರಿತು ವಿವರಿಸಿದ್ದಾರೆ. ಒಂದು ಸಮುದಾಯದ ಸಕ್ರಿಯ ರಾಜಕೀಯ ಪಾಲ್ಗೊಳ್ಳುವಿಕೆಯಿಂದ ಆ ಸಮುದಾಯಗಳ ಸಮಸ್ಯೆಗಳೂ ಸಮಾಜೀಕರಣಗೊಂಡು ಸ್ಥಳೀಯ ಸರ್ಕಾರಗಳಿಂದ ಪರಿಹಾರ ಸಿಗುವಂತಹ ಅವಕಾಶಗಳು ಇರುತ್ತವೆ. ಬೇಡ ಸಮುದಾಯಗಳಲ್ಲಿ ಮಹಿಳೆಯರು ಹೆಚ್ಚು ರಾಜಕೀಯದಲ್ಲಿ ಭಾಗವಹಿಸದೇ ಇರುವುದರಿಂದ ಸಾಮಾಜಿಕ ಸಮಸ್ಯೆಗಳಿಂದ ಮುಕ್ತವಾಗಿಲ್ಲ. ಇದಕ್ಕೆ ಪ್ರಧಾನವಾಗಿ ಆ ಬುಡಕಟ್ಟು ಸಮುದಾಯಗಳಲ್ಲಿನ ಶೈಕ್ಷಣಿಕ ಅಥವಾ ಸಾಕ್ಷರತೆ ಕೊರತೆ ಕಾರಣವಾದರೆ, ಇನ್ನೊಂದು ಕಡೆಯಲ್ಲಿ ಆ ಸಮುದಾಯಗಳಲ್ಲಿರುವ ಆರ್ಥಿಕ, ಅಸಮಾನತೆಗಳು ಸಾಮಾಜಿಕ ಸ್ಥಾನಮಾನಗಳ ಕೊರತೆಯಿಂದ ಮತ್ತು ತಮ್ಮ ಸಮುದಾಯಗಳಲ್ಲಿ ಮಹಿಳೆಯರಿಗೆ ರಾಜಕೀಯ, ಆರ್ಥಿಕ, ಸಾಮಾಜಿಕ ಸ್ಥಾನಮಾನಗಳು ಮತ್ತು ಅವಕಾಶಗಳು ಮುಕ್ತವಾಗಿ ಇಲ್ಲದಿರುವುದು ಬೇಡ ಬುಡಕಟ್ಟಿನ ಮಹಿಳೆಯರ ರಾಜಕೀಯ ಭಾಗವಹಿಸುವಿಕೆಯಿಂದ ದೂರ ಉಳಿದಿರುವುದಕ್ಕೆ ಕಾರಣಗಳಾಗಿವೆ.[೨೭]

೨೪. G.L.Goel ಅವರ **Rural development administration in the 21st Century A multi dimensional study in India** ಎಂಬ ಲೇಖನದಲ್ಲಿ 'ಅಭಿವೃದ್ಧಿಯು ಯಂತ್ರವಲ್ಲ' ಅದೂ ಮಾನವನ ನಿರಂತರ ಪ್ರಯತ್ನವಾಗಿರುತ್ತದೆ. ಅದಕ್ಕೆ ಜನರಲ್ಲಿ ಇಚ್ಛಾಶಕ್ತಿ ಇರಬೇಕು. ಪ್ರಾಮಾಣಿಕ ಪ್ರಯತ್ನಗಳು ನಡೆಯಬೇಕು. ರಾಜಕೀಯ ಅಧಿಕಾರಗಳ ಪ್ರಯತ್ನ ಮತ್ತು ಸಾರ್ವಜನಿಕರ ಪ್ರಾಮಾಣಿಕ ಪ್ರಯತ್ನದಿಂದ ಅಭಿವೃದ್ಧಿ ಸಾಧ್ಯವಾಗುತ್ತದೆ. ಭಾರತದಲ್ಲಿ ೧/೩ ಜನರು ಬಡತನದಲ್ಲಿರು ವುದು ಕಂಡುಬರುತ್ತದೆ. ಬಡತನಕ್ಕೆ ಜನರ ರಾಜಕೀಯ ಭಾಗವಹಿಸುವಿಕೆ ಮತ್ತು ಆರ್ಥಿಕ ಸಂಪನ್ಮೂಲ

ಗಳ ಅಸಮಾನ ಹಂಚಿಕೆಗಳ ಜೊತೆಗೆ ಇತರೆ ಕಾರಣಗಳನ್ನು' ವಿವಸಿದ್ದಾರೆ. Physical misery bat also weakens the sufferes emotionally and psychologically and even dehumanizes them. ಎಂದು ಬಡತನಕ್ಕೆ ಮತ್ತು ಜನರ ಭಾವನೆಗಳು ಸಂಬಂಧಿಸಿದ್ದಾಗಿದ್ದು, ಈ ಸ್ಥಿತಿಯು ಅಭಿವೃದ್ಧಿಯ ಮೇಲೆ ಯಾವ ರೀತಿಯ ಪ್ರಭಾವ ಬೀರುತ್ತದೆ ಎಂದು ಹೇಳುವುದು ಕಷ್ಟ ಸಾಧ್ಯವಾಗಿದೆ.[೨೫]

೨೫. Smitha kumar A. ಅವರ **Impact of indhira awasa yojana on rural housing** ಎಂಬ ಲೇಖನದಲ್ಲಿ ಇಂದಿರಾ ಆವಾಸ್ ಯೋಜನೆಯ ಅನುಷ್ಠಾನ ಕುರಿತು ವಿವರಿಸಿದ್ದಾರೆ. ಇದು ೨೦೦೯ರಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಸಮುದಾಯಗಳಿಗೆ ಮನೆ ನೀಡುವ ಯೋಜನೆಯಾಗಿದೆ. ಈ ಯೋಜನೆಯು ಕೇರಳ ರಾಜ್ಯದಲ್ಲಿ ಉತ್ತಮವಾದ ಗುರಿಯನ್ನು ಸಾಧಿಸಿದೆ. ಇದಕ್ಕೆ ರಾಜ್ಯದಲ್ಲಿನ ಸಾಕ್ಷರತೆ ಪ್ರಮಾಣ ಪ್ರಮುಖ ಕಾರಣವಾದರೆ ಮತ್ತೊಂದು ಪ್ರಮುಖ ಅಂಶವೆಂದರೆ ಗ್ರಾಮಪಂಚಾಯಿತಿಗಳಲ್ಲಿ ಜನರ ಅರಿವು ಮತ್ತು ಭಾಗವಹಿಸುವಿಕೆ ಪ್ರಧಾನವಾಗಿವೆ. ರಾಜ್ಯ ಸರ್ಕಾರದಿಂದ ಸಕಾಲಕ್ಕೆ ಯೋಜನೆಯ ಧನಸಹಾಯ ಸಿಗುವುದರಿಂದ ಯೋಜನೆಗಳು ವಿಫಲಗೊಳ್ಳುತ್ತವೆ. ಕೇರಳದಲ್ಲಿ ಬಹುಪಾಲು ಯೋಜನೆಗಳು ಸಕ್ರಿಯವಾಗಿ ಜಾರಿ ಗೊಳ್ಳುವುದು ಕಂಡುಬರುತ್ತದೆ ಎಂದು ಲೇಖಕರು ಅಭಿಪ್ರಾಯಪಟ್ಟಿದ್ದಾರೆ.[೨೬]

೨೬. S.K. Therat, R.S. Deshpande ಅವರ **Caste System and Economic Inequality Economic Theory and Eviedence Ghanshyam Shah**, ಎಂಬ ಲೇಖನದಲ್ಲಿ ಎಂಪಿರಿಕಲ್ ಅಧ್ಯಯನದಿಂದ ಕಂಡುಕೊಂಡ ಅಂಶಗಳನ್ನು ಚರ್ಚಿಸಿದ್ದಾರೆ. ಸಾಮಾನ್ಯವಾಗಿ ಜಾತಿಯು ಭಾರತೀಯ ಸಮಾಜದಲ್ಲಿ ಜೀವನದ ಎಲ್ಲಾ ರಂಗಗಳಲ್ಲಿಯೂ ಪ್ರಭಾವ ಬೀರುತ್ತದೆ. ಗ್ರಾಮೀಣ ಸಮಾಜ ಮಾತ್ರವಲ್ಲದೆ ನಗರ ಸಮಾಜದಲ್ಲಿಯೂ ಇದರ ಪ್ರಭಾವ ಇರುವುದು ಕಂಡುಬರುತ್ತದೆ. ಜಾತಿಯು ವ್ಯಕ್ತಿಯ ಸಮಾನತೆ ಗೌರವ ಮತ್ತು ಜೀವನ ಮಟ್ಟವನ್ನು ನಿರ್ಧರಿಸುತ್ತದೆ. ಇದಕ್ಕೆ ಕಾರಣವೆಂದರೆ ಅಸ್ಪೃಶ್ಯರನ್ನು ಸಮಾಜದ ಮೇಲ್ಜಾತಿಯವರು ನಿರ್ವಹಿಸುವ ಕೆಲಸದಿಂದ ದೂರವಿಡುವ ಪ್ರಯತ್ನಗಳು ನಡೆಯುತ್ತವೆ. ಸಮಾಜದಲ್ಲಿ ಅಸ್ಪೃಶ್ಯರಿಗೆ ಸವರ್ಣೀಯರ ಸಮಾನವಾದ ಉದ್ಯೋಗಗಳು ಸಿಗುವುದಿಲ್ಲ. ಇವರ ಜೊತೆಯಲ್ಲಿ ವ್ಯವಹಾರಗಳನ್ನು ತಳಸಮುದಾಯಗಳು ಮಾತ್ರ ಮಾಡುವುದರಿಂದ ಹೆಚ್ಚಿನ ಹಣ ಸಿಗುವ ಸಾಧ್ಯತೆಗಳು ಕಡಿಮೆ. ಇವರು ದಲಿತರು ಎಂಬ ಕಾರಣಕ್ಕೆ ಊರಿನಲ್ಲಿ ಪ್ರತ್ಯೇಕವಾದ ಬೀದಿಯಲ್ಲಿ ಜೀವನ ಮಾಡಬೇಕಾಗಿದೆ. ಈ ರೀತಿಯಾಗಿ ಸಮಾಜದ ಬಹುಪಾಲು ಮೇಲು ಹಂತದ ಸ್ಥಾನಗಳು ಅಧಿಕಾರಗಳು ಮತ್ತು ಆರ್ಥಿಕ ಸಂಪನ್ಮೂಲಗಳು ಕೆಲವೇ ಜಾತಿಯವರ ಕೈಯಲ್ಲಿ ಅಥವಾ ಕೆಲವೇ ಸಮುದಾಯಗಳ

ಕೈಯಲ್ಲಿವೆ. ಸಾಮಾಜಿಕ ಸ್ಥಾನಮಾನಗಳನ್ನು ಹೊಂದಿರದ ಜಾತಿ-ಸಮುದಾಯಗಳು ಅಧಿಕಾರಗಳಿಂದ ಮತ್ತು ಆರ್ಥಿಕ ಸಂಪನ್ಮೂಲಗಳಿಂದ ದೂರವಿದ್ದು ಇಂದಿಗೂ ಸಾಮಾಜಿಕ ಸಭೆಗಳಲ್ಲಿ ಭಾಗವಹಿಸದೇ ಸಂಘ-ಸಂಸ್ಥೆಗಳಲ್ಲಿ ಸದಸ್ಯತ್ವಗಳಿಲ್ಲದೇ ಸಾಮಾಜಿಕವಾಗಿ ಆರ್ಥಿಕವಾಗಿ ಹಿಂದುಳಿದಿರುವುದು ಗ್ರಾಮೀಣ ಸಮಾಜಗಳಲ್ಲಿ ಕಂಡುಬರುತ್ತದೆ. ಈ ರೀತಿಯ ಸಾಮಾಜಿಕ ಸಮಸ್ಯೆಗಳ ಜಾತಿ ಅಥವಾ ಕೆಳಸಮುದಾಯಗಳು ಅಭಿವೃದ್ಧಿ ಹೊಂದದೆ ದೂರ ಉಳಿಯುವ ಸಾಧ್ಯತೆ ಇರುತ್ತವೆ ಎಂದು ಈ ಅಧ್ಯಯನವು ವಿವರಿಸುತ್ತದೆ.[೩೦]

೨೭. Krishan Chand, Ramotra ಅವರ Development Process and Scheduled Caste, Rawat Publication, Jaipur, ೨೦೦೮ ಎಂಬ ಗ್ರಂಥದಲ್ಲಿ ಮಹಾರಾಷ್ಟ್ರದ ಐದು ಜಿಲ್ಲೆಗಳ ಹದಿನೈದು ಗ್ರಾಮಗಳನ್ನು ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಅಧ್ಯಯನವು ಗ್ರಾಮೀಣ ಭಾಗದಲ್ಲಿರುವ ಪರಿಶಿಷ್ಟ ಜಾತಿ ಸಮುದಾಯಗಳ ಭೂ ಒಡೆತನ ಮತ್ತು ಅವರ ಆರ್ಥಿಕ ಹಿಂದುಳಿರುವುದಕ್ಕೆ ಕಾರಣವಾದ ಅಂಶಗಳ ಕುರಿತು ಚರ್ಚಿಸಲಾಗಿದೆ. ಮಹಾರಾಷ್ಟ್ರದ ಗ್ರಾಮೀಣ ಸಮಾಜಗಳಲ್ಲಿ ಪರಿಶಿಷ್ಟ ಜಾತಿ ಸಮುದಾಯಗಳು ಹೆಚ್ಚು ವಾಸವಾಗಿವೆ. ಶೇ.೪೬ಕ್ಕೂ ಅಧಿಕ ಜನಸಂಖ್ಯೆಯನ್ನು ಈ ಸಮುದಾಯಗಳು ಹೊಂದಿದ್ದರು. ಇವರಲ್ಲಿ ಭೂ ಒಡೆತನ ಕೇವಲ ಶೇ.೧೩ರಷ್ಟು ಮಾತ್ರವಿದೆ. ಅದರಲ್ಲಿ ಶೇ.೭೬ಕ್ಕೂ ಅಧಿಕ ಸಣ್ಣ ಮತ್ತು ಅತಿಸಣ್ಣ ಭೂಮಾಲೀಕರು ಇದ್ದಾರೆ. ಇವರಲ್ಲಿ ಬಹುಪಾಲು ಕೃಷಿ ಕೂಲಿ ಕೆಲಸವನ್ನು ಆಧರಿಸಿ ಜೀವನ ವನ್ನು ಮಾಡುತ್ತಾರೆ. ಸಣ್ಣ ಮತ್ತು ಅತಿ ಸಣ್ಣ ರೈತರು ವ್ಯವಸಾಯದಿಂದ ಜೀವನ ನಡೆಸಲು ಸಾಧ್ಯವಾಗದೆ ದೊಡ್ಡ ಭೂಮಾಲೀಕರಿಗೆ ಭೂಮಿ ನೀಡಿ ಕೂಲಿ ಕೆಲಸಕ್ಕೆ ಹೋಗುವುದು ಕಂಡುಬರುತ್ತದೆ. ಈ ಹದಿನೈದು ಗ್ರಾಮಗಳಲ್ಲಿ ಇರುವ ಮಧ್ಯಮ ವರ್ಗದ ಶೇ.೨೬ರಷ್ಟು ಒ.ಬಿ.ಸಿ ಜಾತಿ ಸಮುದಾಯಗಳಲ್ಲಿ ಶೇ..೭೦ಕ್ಕೂ ಭೂ ಒಡೆತನ ಇರುವುದು ಕಂಡುಬರುತ್ತಿದೆ. ಇವರು ಗ್ರಾಮದ ಬಹುಪಾಲು ಭೂ ಒಡೆತನ ಹೊಂದಿದ್ದು ಇವರ ಕೈಯಲ್ಲಿ ಸ್ಥಳೀಯ ಸರ್ಕಾರಗಳು ಇವೆ. ಇವರ ಕೈಯಲ್ಲಿ ವ್ಯಾಪಾರ ಉದ್ಯಮಗಳು ಇರುವುದರಿಂದ ಬಹುಸಂಖ್ಯಾತ ರಾದರೂ ಭೂ ಒಡೆತನ ಮತ್ತು ಆರ್ಥಿಕ ಸಂಪನ್ಮೂಲಗಳಿಂದ ವಂಚಿತವಾದ ಈ ಪರಿಶಿಷ್ಟ ಜಾತಿಗಳು ನೇರವಾಗಿ ಸರ್ಕಾರಿ ಯೋಜನೆಗಳನ್ನು ಪಡೆದುಕೊಂಡು ಅಭಿವೃದ್ಧಿ ಹೊಂದಲು ಸಾಧ್ಯವಾಗದ ಸ್ಥಿತಿ ಇಂದಿಗೂ ಈ ಗ್ರಾಮಗಳಲ್ಲಿ ಕಂಡುಬರುತ್ತಿದೆ. ಪರಿಶಿಷ್ಟ ಜಾತಿ ಸಮುದಾಯ ಗಳಿಗೆ ಬೇರೆ ಆದಾಯದ ಮೂಲ ವ್ಯಾಪಾರ ಮಾಡುವ ಅವಕಾಶದ ಕೊರತೆ ಇಲ್ಲದಿರುವುದರಿಂದ ತಳಸಮುದಾಯಗಳು ಹೆಚ್ಚು ಹಿಂದುಳಿದಿವೆ. ಇವು ಸಾಮಾಜಿಕ ಸಮಸ್ಯೆಗಳಿಂದ ಇಂದಿಗೂ

ಬಳಲುತ್ತಿವೆ. ಗ್ರಾಮೀಣ ಸಮಾಜದ ಎಲ್ಲಾ ಸಮುದಾಯಗಳಿಗೂ ಆರ್ಥಿಕ ಸಮಾನ ಅವಕಾಶಗಳು ದೊರೆತರೆ ಅಭಿವೃದ್ಧಿ ಹೊಂದಲು ಸಾಧ್ಯತೆಗಳಿವೆ ಎಂದು ಲೇಖಕರು ವಿವರಿಸುತ್ತಾರೆ.[೩೦]

೨೮. Dvid N. Gellner , Krishan Hachhethu ಅವರ **Local Democacy the South Srilank Experience** ಎಂಬ ಲೇಖನದಲ್ಲಿ ಶ್ರೀಲಂಕಾ ಸ್ಥಳೀಯ ಸರ್ಕಾರಗಳ ಅಧಿಕಾರ ನಿರ್ವಹಣೆ ಮತ್ತು ಹಣಕಾಸಿನ ನಿರ್ವಹಣೆ ಕುರಿತು ಚರ್ಚಿಸಿದ್ದಾರೆ. ಗ್ರಾಮೀಣ ಮಟ್ಟದಲ್ಲಿ ಪ್ರಾದೇಶಿಕ ಸಭಾಗಳು ಗ್ರಾಮಪಂಚಾಯಿತಿಗಳ ಕಾರ್ಯವನ್ನು ನಿರ್ವಹಿಸುತ್ತವೆ. ಈ ಪ್ರಾದೇಶಿಕ ಸಭಾಗಳ ಸದಸ್ಯರನ್ನು ರಾಷ್ಟ್ರಮಟ್ಟದ ರಾಜಕೀಯ ನಾಯಕರು ಚುನಾಯಿಸುತ್ತಾರೆ. ಸ್ಥಳೀಯ ಜನತೆಯು ತಮ್ಮ ಮತದಾನದ ಮೂಲಕ ಸದಸ್ಯರನ್ನು ಚುನಾಯಿಸುವುದಿಲ್ಲ. ಹೀಗೆ ಆಯ್ಕೆಯಾದ ಸದಸ್ಯರು ಸ್ಥಳೀಯವಾಗಿ ಯಾವುದೇ ರಾಜಕೀಯ ಅಧಿಕಾರಗಳನ್ನು ಹೊಂದಿರು ವುದಿಲ್ಲ. ಇವರು ನಾಮ ಮಾತ್ರ ಪ್ರಾದೇಶಿಕ ಸಭಾ ಸದಸ್ಯರಾಗಿರುತ್ತಾರೆ. ಇವರು ತಮ್ಮ ಪ್ರದೇಶದಲ್ಲಿ ಕಂಡುಬರುವ ಸಾಮಾಜಿಕ ಸಮಸ್ಯೆಗಳು ಕುರಿತು ತಿಳಿದುಕೊಂಡು ಅ ಸಮಸ್ಯೆಗಳನ್ನು ರಾಷ್ಟ್ರಮಟ್ಟದ ರಾಜಕೀಯ ನಾಯಕರು ಭೇಟಿ ನೀಡಿದ ಸಮಯಗಳಲ್ಲಿ ಆ ಸಮಸ್ಯೆಗಳನ್ನು ಕುರಿತು ಇವರ ಗಮನಕ್ಕೆ ತರುವುದು ಈ ಪ್ರಾದೇಶಿಕ ಸಭಾ ಸದಸ್ಯರ ಕೆಲಸವಾಗಿರುತ್ತದೆ. ಈ ಪ್ರಾದೇಶಿಕ ಸಭಾಗಳಿಗೆ ಕಟ್ಟಡ ರೂಪದ ಕಛೇರಿಗಳಿರುವುದಿಲ್ಲ. ಈ ಸದಸ್ಯರು ರಾಷ್ಟ್ರಮಟ್ಟದ ರಾಜಕೀಯ ನಾಯಕರ ಪರವಾಗಿ ಕೆಲಸ ಮಾಡಬೇಕು. ಇವರಿಗೆ ಕೇಂದ್ರ ಸರ್ಕಾರದಿಂದ ಯಾವುದೇ ಅನುದಾನ ಬರುವುದಿಲ್ಲ. ಗ್ರಾಮೀಣ ಸೇವೆಗಳಿಗೆ ಒಬ್ಬ ಪೋಸ್ಟ್ ಮಾಸ್ಟರ್ ಮತ್ತು ಒಬ್ಬ ಕಿರಿಯ ವೈದ್ಯ ಸಹಾಯಕರನ್ನು ನೇಮಿಸಿರುತ್ತಾರೆ. ಇವರು ಸ್ಥಳೀಯ ಮಟ್ಟದ ಸರ್ಕಾರಿ ನೌಕರರಾಗಿರುತ್ತಾರೆ. ದೇಶದಲ್ಲಿ ಗ್ರಾಮೀಣ ಅಭಿವೃದ್ಧಿ ಕಾರ್ಯಗಳು ನೇರವಾಗಿ ಕೇಂದ್ರ ಸರ್ಕಾರದಿಂದ ಜಾರಿಯಾಗಿರುತ್ತವೆ. ಸ್ಥಳೀಯ ಮಟ್ಟದಲ್ಲಿ ಯಾವುದೇ ಅಧಿಕಾರಗಳು ವಿಕೇಂದ್ರೀಕರಣಗೊಳ್ಳುವುದಿಲ್ಲ. ಪ್ರಾದೇಶಿಕ ಸಭಾ ಸದಸ್ಯರು ತಮ್ಮ ದಿನಕೆಲಸಗಳಲ್ಲಿ ನಿರತರಾಗಿರುತ್ತಾರೆ. ಇವರು ಈ ಸಭಾ ಸದಸ್ಯತ್ವ ಉಪ ಕೆಲಸ ಅಥವಾ ಉಚಿತವಾದ ಸಾಮಾಜಿಕ ಕೆಲಸದಂತೆ ಬಿಡುವಿದ್ದಾಗ ಮಾಡುವ ಅರೆಕಾಲಿಕ ಕೆಲಸದಂತೆ ನಿರ್ವಹಿಸಲಾಗುತ್ತದೆ. ಸ್ಥಳೀಯ ಹಂತದಲ್ಲಿ ಯಾವುದೇ ಸರ್ಕಾರ ವ್ಯವಸ್ಥೆಗಳು ಕಂಡುಬರುವುದಿಲ್ಲ. ರಾಜಕೀಯ ಅಧಿಕಾರಗಳು ಆಡಳಿತಾತ್ಮಕ ಮತ್ತು ಹಣಕಾಸಿನ ಅಧಿಕಾರಗಳು ಕೇಂದ್ರ ಸರ್ಕಾರದಲ್ಲಿ ಇರುತ್ತವೆ. ಇದರಿಂದ ಅಡಳಿತ ಹೆಚ್ಚು ಭದ್ರತೆಯಿಂದ ಕೂಡಿರುತ್ತದೆ ಎಂದು ಶ್ರೀಲಂಕಾ ಸರ್ಕಾರವು ಪರಿಭಾವಿಸಿಕೊಂಡಿದೆ. ಇಲ್ಲಿಯ ಜನರಿಗೆ ಪ್ರಜಾಪ್ರಭುತ್ವ ಹಕ್ಕುಗಳ ಮತ್ತು ಮೂಲಭೂತ ಸೌಕರ್ಯಗಳ ಕೊರತೆ ಹೆಚ್ಚು ಕಂಡುಬರುತ್ತದೆ.[೩೧]

೨೯. Darin Khongsatjaviwat Jayant, K Routray ಅವರ **Local Government for Rural Development in Thailand** ಎಂಬ ಲೇಖನವು ಥಾಯ್‌ಲ್ಯಾಂಡ್ ಸ್ಥಳೀಯ ಸರ್ಕಾರಗಳ ಅಧಿಕಾರ ವಿಕೇಂದ್ರೀಕರಣ ಮತ್ತು ಸ್ಥಳೀಯ ಸರ್ಕಾರ ಹಣಕಾಸು ನಿರ್ವಹಣೆ ಕುರಿತು ಚರ್ಚಿಸಲಾಗಿದೆ. ಥಾಯ್‌ಲ್ಯಾಂಡ್ ಸಂವಿಧಾನ ೨೦೦೭ರ ೧೪ನೇ ಅಧ್ಯಾಯದಲ್ಲಿ ಸೆಕ್ಷನ್ ೨೮೧-೨೯೦ರ ಪ್ರಕಾರ ಸ್ಥಳೀಯ ಸರ್ಕಾರಗಳಿಗೆ ಅಟೋನಾಮ್ಸ್ ಅಧಿಕಾರ ಅಥವಾ ಸ್ವಾಯತ್ತ ಅಧಿಕಾರವನ್ನು ನೀಡಿದೆ. ಗ್ರಾಮೀಣ ಮಟ್ಟದಲ್ಲಿ ಸ್ಥಳೀಯ ಸರ್ಕಾರಗಳೇ ಪಾರ್ಲಿಮೆಂಟ್ ಗಳಾಗಿ ಕೆಲಸ ನಿರ್ವಹಿಸುವಂತಹ ರಾಜಕೀಯ ಅಧಿಕಾರವನ್ನು, ಆಡಳಿತಾತ್ಮಕ ಅಧಿಕಾರಗಳನ್ನು ಮತ್ತು ಹಣಕಾಸಿನ ಅಧಿಕಾರಗಳನ್ನು ಸ್ಥಳೀಯ ಸರ್ಕಾರಗಳಿಗೆ ನೀಡಲಾಗಿದೆ. ಪ್ರಜಾಪ್ರಭುತ್ವ ವ್ಯವಸ್ಥೆಯೂ ಉತ್ತಮವಾಗಿ ಜಾರಿಗೊಳ್ಳುವಂತಹ ವ್ಯವಸ್ಥೆ ಈ ದೇಶದ ಗ್ರಾಮಮಟ್ಟದಲ್ಲಿ ಕಂಡು ಬರುತ್ತದೆ. ಥಾಯ್‌ಲ್ಯಾಂಡ್ ಸರ್ಕಾರ ವ್ಯವಸ್ಥೆಯು ಉತ್ತಮವಾದ ವಿಕೇಂದ್ರೀಕರಣ ವ್ಯವಸ್ಥೆಯನ್ನು ಹೊಂದಿದೆ. ಈ ದೇಶದಲ್ಲಿ ಮೂರು ಮಾದರಿಯಲ್ಲಿ ಸರ್ಕಾರಗಳು ಕೆಲಸ ನಿರ್ವಹಿಸುತ್ತವೆ. ಒಂದು ಕೇಂದ್ರ ಸರ್ಕಾರ, ಇನ್ನೊಂದು ಪ್ರಾದೇಶಿಕ ಸರ್ಕಾರ, ಕೊನೆಯ ಹಂತದಲ್ಲಿ ಸ್ಥಳೀಯ ಸರ್ಕಾರಗಳು ಹೀಗೆ ಒಟ್ಟು ೭,೮೫೩ ಗ್ರಾಮೀಣ ಸ್ಥಳೀಯ ಸರ್ಕಾರಗಳು ಕಾರ್ಯ ನಿರ್ವಹಿಸುತ್ತಿವೆ. ಸ್ಥಳೀಯ ಸರ್ಕಾರಗಳಲ್ಲಿ ಐದು ವಿಭಾಗಗಳನ್ನು ನೋಡಬಹುದು. ಒಂದನೆಯದಾಗಿ ಬಿ.ಎಮ್.ಎ. ಬ್ಯಾಂಕಾಕ್ ಮೆಟ್ರೋಪಾಲಿಟನ್ ಅಡ್ಮಿನಿಸ್ಟ್ರೇಷನ್ ನಂತರ ಥಾಯ್‌ಲ್ಯಾಂಡ್ ಪಟ್ಟಾಯ್ ಸಿಟಿ, ಮುನಿಸಿಪಾಲಿಟಿಗಳು, ಪಿ.ಎ.ಓ. ಪ್ರಾವಿಷನ್ ಅಡ್ಮಿನಿಸ್ಟ್ರೇಷನ್ ಗ್ರಾಮಮಟ್ಟದಲ್ಲಿ ಥಾಯ್‌ಲ್ಯಾಂಡ್ ಅಡ್ಮಿನಿಸ್ಟ್ರೇಷನ್ ಅರ್ಗನೈಜೇಷನ್ ಈ ಸಂಸ್ಥೆಗಳು ಒಂದು ಸಂಘದಂತೆ ಕಾರ್ಯ ನಿರ್ವಹಿಸುತ್ತವೆ. ಈ ಸಂಸ್ಥೆಯ ಸದಸ್ಯರನ್ನು ಸ್ಥಳೀಯ ನಾಗರಿಕರು ಚುನಾವಣೆಯ ಮೂಲಕ ಆಯ್ಕೆ ಮಾಡುತ್ತಾರೆ. ಜನರು ಗ್ರಾಮೀಣ ಚುನಾಯಿತ ಸದಸ್ಯರ ಹಿಂದಿನ ಆಡಳಿತ ಮತ್ತು ಅವರ ರಾಜಕೀಯ ಚರಿತ್ರೆಯನ್ನು ಆಧಾರವಾಗಿಟ್ಟುಕೊಂಡು ಆಯ್ಕೆ ಮಾಡುತ್ತಾರೆ. ಒಂದು ವೇಳೆ ಚುನಾಯಿತ ಸದಸ್ಯರು ಜನರ ಕೆಲಸಗಳನ್ನು ಮಾಡದಿದ್ದಲ್ಲಿ ಇವರನ್ನು ತಕ್ಷಣ ಹಿಂದಕ್ಕೆ ಕರೆಸಿಕೊಳ್ಳುವ ಅಧಿಕಾರ ಸ್ಥಳೀಯ ಮತದಾರರಿಗೆ ಇದೆ. ಇಲ್ಲಿ ನೇರ ಮತದಾನ ವ್ಯವಸ್ಥೆಯನ್ನು ಕಾಣಬಹುದಾಗಿದೆ. ಈ ಗ್ರಾಮೀಣ ಸಂಸ್ಥೆಗಳು ಜನರ ಒಳಗೊಳ್ಳುವಿಕೆಯಿಂದ ಎಲ್ಲಾ ಕೆಲಸಕಾರ್ಯಗಳನ್ನು ಮತ್ತು ಕಾಯ್ದೆಗಳನ್ನು ಜಾರಿಗೆ ತರುತ್ತವೆ. ಈ ಸಂಸ್ಥೆಗಳು ತಮ್ಮ ಆಡಳಿತಕ್ಕೆ ಅವಶ್ಯಕವಾದ ಯಾವುದೇ ಕಾಯ್ದೆಯನ್ನು ರಚಿಸಿ ಜಾರಿಗೆ ತರುವಂತಹ ಅಧಿಕಾರವನ್ನು ಹೊಂದಿರುತ್ತವೆ. ಈ ಸಂಸ್ಥೆಗಳಲ್ಲಿ ಜನರು ನೇರವಾಗಿ ಭಾಗವಹಿಸಿ ಸ್ಥಳೀಯ ಸಮಸ್ಯೆಗಳ ಕುರಿತು ಮತ್ತು ಬೇಕಾದ ಸೌಲಭ್ಯಗಳ ಕುರಿತು ಸಭೆಯಲ್ಲಿ ಚರ್ಚಿಸಿ ತೀರ್ಮಾನಕ್ಕೆ ಬರುತ್ತಾರೆ. ಸ್ಥಳೀಯ ಅಭಿವೃದ್ಧಿಗೆ ಬೇಕಾದ

ಯೋಜನೆಗಳನ್ನು ಜನರು ಸಭೆ ಸೇರಿ ಸಿದ್ಧಪಡಿಸುತ್ತಾರೆ. ಅದಕ್ಕೆ ಮಾಸ್ಟರ್ ಪ್ಲಾನ್ ಎಂದು ಕರೆದು ತಕ್ಷಣಕ್ಕೆ ಯೋಜನೆಯನ್ನು ಜಾರಿಗೆ ತರುತ್ತಾರೆ. ನಾಗರಿಕರು ಸ್ಥಳೀಯ ಸರ್ಕಾರಗಳಿಗೆ ಬೇಕಾದ ಎಲ್ಲಾ ಸಹಾಯವನ್ನು ನೀಡುತ್ತಾರೆ. ಈ ಸಂಸ್ಥೆಗಳು ಕೇಂದ್ರ ಸರ್ಕಾರದಿಂದ ಪ್ರತಿ ವರ್ಷ ಶೇ.೯೦ರಷ್ಟು ಆರ್ಥಿಕ ನೆರವು ಪಡೆಯುತ್ತವೆ. ಥಾಯ್‌ಲ್ಯಾಂಡ್ ಅಡ್ಮಿನಿಸ್ಟ್ರೇಷನ್ ಅರ್ಗನೈಜೇಷನ್ ಸ್ಥಳೀಯ ತೆರಿಗೆ ವಸೂಲಿ ಅಧಿಕಾರ, ಭೂಕಂದಾಯ, ವಾಹನ ತೆರಿಗೆ, ಮಾರಾಟ ತೆರಿಗೆ, ರಿಜಿಸ್ಟ್ರೇಷನ್ ತೆರಿಗೆ, ವ್ಯಾಟ್ ಹೀಗೆ ಸ್ಥಳೀಯ ಎಲ್ಲಾ ತೆರಿಗೆಗಳನ್ನು ವಿಧಿಸುವ ಮತ್ತು ತೆರಿಗೆ ಹಣವನ್ನು ಖರ್ಚು ಮಾಡುವಂತಹ ಹಣಕಾಸಿನ ಸ್ವಾತಂತ್ರ್ಯವನ್ನು ಹೊಂದಿವೆ. ಹಾಗಾಗಿ ಇಲ್ಲಿಯ ಗ್ರಾಮೀಣ ಜನರು ನಗರಪ್ರದೇಶಗಳಿಗಿಂತ ಉತ್ತಮ ಸವಲತ್ತುಗಳನ್ನು ಪಡೆದು ಶೇ.೧೦೦ರಷ್ಟು ಜನರ ಭಾಗವಹಿಸುವಿಕೆಯಿಂದ ಹೆಚ್ಚು ಗ್ರಾಮೀಣ ಅಭಿವೃದ್ಧಿಯನ್ನು ಸಾಧಿಸಿವೆ.[೩೨]

೩೦. Praveen, K Jadhav ಅವರ **Scheduled Caste in Rural India** ಎಂಬ ಗ್ರಂಥದಲ್ಲಿ ಮಹಾರಾಷ್ಟ್ರದ ಕೊಲ್ಲಾಪುರ ಜಿಲ್ಲೆಯ ನಾಲ್ಕು ಗ್ರಾಮಗಳಲ್ಲಿರುವ ಪರಿಶಿಷ್ಟ ಜಾತಿಗೆ ಸೇರಿದ ಮೂರು ಜಾತಿಗಳ ಸಾಮಾಜಿಕ, ಆರ್ಥಿಕ ಸ್ಥಿತಿಗತಿಗಳು ಮತ್ತು ಅವುಗಳಿಗೆ ಕಾರಣಗಳ ಕುರಿತು ಚರ್ಚಿಸಿದ್ದಾರೆ. ರಾಜ್ಯದ ಒಟ್ಟು ಜನಸಂಖ್ಯೆಯಲ್ಲಿ ಶೇ.೧೩.೫ರಷ್ಟು ಪರಿಶಿಷ್ಟ ಜಾತಿಯ ಜನರು ಇದ್ದಾರೆ. ಅದರಲ್ಲಿ ಮಹರ್, ಮಾಂಗ್ ಮತ್ತು ಚಂಬರ್ ಜಾತಿಗಳು ಹೆಚ್ಚಿನ ಸಂಖ್ಯೆ ಯಲ್ಲಿ ನೆಲೆಸಿದ್ದಾರೆ. ಈ ಮೂರು ಜಾತಿಗಳು ಸಾಮಾಜಿಕ ಮತ್ತು ಆರ್ಥಿಕ ಸ್ಥಾನಮಾನಗಳಲ್ಲಿ ಹೆಚ್ಚು ಭಿನ್ನತೆಯಿಂದ ಕೂಡಿವೆ. ಮಹರ್ ಜಾತಿಯ ಜನರು ಹೆಚ್ಚು ರಾಜ್ಯ ರಾಜಕೀಯದಲ್ಲಿ ಗುರುತಿಸಿಕೊಂಡಿದ್ದಾರೆ. ಇವರಲ್ಲಿ ಹೆಚ್ಚಿನ ಆರ್ಥಿಕ ಸಂಪನ್ಮೂಲಗಳ ಒಡೆತನವಿದೆ. ಈ ಜಾತಿಯವರು ಹೆಚ್ಚು ಸಾಮಾಜಿಕ ಸಂಘಟನೆಗಳಲ್ಲಿ ತೊಡಗಿಸಿಕೊಂಡಿದ್ದಾರೆ. ಸ್ಥಳೀಯ ಸರ್ಕಾರಗಳಲ್ಲಿ ಅಧಿಕಾರವನ್ನು ಪಡೆಯುವಲ್ಲಿ ಉಳಿದ ಎರಡು ಜಾತಿಗಳಿಗಿಂತ ಮಹರ್ ಹೆಚ್ಚು ಕ್ರಿಯಾಶೀಲವಾಗಿದೆ. ಮಹರ್ ಜಾತಿಯವರು ಸಂಘ ಸಂಸ್ಥೆಗಳನ್ನು ಕಟ್ಟಿಕೊಂಡಿದ್ದಾರೆ. ಸಂಘ ಸಂಸ್ಥೆಗಳಲ್ಲಿ ಸದಸ್ಯತ್ವವನ್ನು ಹೊಂದಿದ್ದಾರೆ. ಹೀಗೆ ಈ ಮಹರ್ ಜಾತಿಯವರು ತಮ್ಮ ಸಕ್ರಿಯ ಭಾಗವಹಿಸುವಿಕೆಯಿಂದ ತಮ್ಮ ಸಾಮಾಜಿಕ ಆರ್ಥಿಕ ಸ್ಥಾನಮಾನಗಳನ್ನು ಉನ್ನತೀಕರಿಸಿಕೊಂಡಿದ್ದಾರೆ. ಇತರೆ ಉಳಿದ ಮಾಂಗ್ ಮತ್ತು ಚಂಬರ್ ಜಾತಿಯವರು ಮಹರ್ ಜಾತಿ ಜನರಂತೆ ಸಮಾನವಾಗಿ ರಾಜ್ಯ ರಾಜಕೀಯದಲ್ಲಿ ಮತ್ತು ಸ್ಥಳೀಯ ಸರ್ಕಾರಗಳಲ್ಲಿ ಗುರುತಿಸಿಕೊಳ್ಳಲು ಸಾಧ್ಯವಾಗಿಲ್ಲ. ಇವರು ಹೆಚ್ಚು ಆದಾಯ ತರುವಂಥ ಆರ್ಥಿಕ ಸಂಪನ್ಮೂಲಗಳನ್ನು ಪಡೆಯಲಾಗಲಿಲ್ಲ. ಸಾಮಾಜಿಕ ಕಾರ್ಯಗಳಲ್ಲಿ ಭಾಗವಹಿಸಿ ಹೆಚ್ಚು ಸಮಾಜೀಕರಣಗೊಂಡು ತಮ್ಮ ಸ್ಥಾನಮಾನಗಳನ್ನು ಉನ್ನತೀಕರಿಸಿಕೊಳ್ಳಲಾಗಲಿಲ್ಲ. ಇದಕ್ಕೆ ಮಹರ್ ಜಾತಿ ಜನರಲ್ಲಿರುವ ಸಾಮರ್ಥ್ಯ ಪ್ರಧಾನವಾಗಿರದೇ

ಜನಸಂಖ್ಯೆಯ ಬಲದಿಂದ ಇತರೆ ಜಾತಿಯವರನ್ನು ದೂರವಿಟ್ಟು ತಮ್ಮ ಅಸ್ತಿತ್ವವನ್ನು ಸ್ಥಾಪಿಸುವ ಡಾಮಿನೆಂಟ್ ಲಕ್ಷಣವು ಮಹರ್ ಜಾತಿಯವರಲ್ಲಿರುವುದೇ ಆಗಿದೆ. ಈ ಜಾತಿಯ ಪ್ರಭಾವ, ಇವರ ಬಲಪ್ರಯೋಗಗಳನ್ನು ಮತ್ತೊಂದು ಜಾತಿಯವರ ಅಭಿವೃದ್ಧಿ ಮತ್ತು ಹೆಚ್ಚು ಆರ್ಥಿಕ ಒಡೆತನ ಪಡೆಯುವುದಕ್ಕೆ ಅಡ್ಡಿ ಉಂಟುಮಾಡುವ ಸ್ಥಿತಿಯನ್ನು ಈ ಅಧ್ಯಯನದಲ್ಲಿ ಗುರುತಿಸಿದ್ದಾರೆ. ಇದೇ ರೀತಿಯಲ್ಲಿ ಒಂದು ಗ್ರಾಮೀಣ ಪ್ರದೇಶದ ಅಭಿವೃದ್ಧಿಯು ಸ್ಥಳೀಯ ಪ್ರಬಲವಾದ ಜಾತಿ ಅಥವಾ ಜನಾಂಗಗಳ ಪ್ರಾಬಲ್ಯಕ್ಕೆ ಒಳಗಾಗಿ ಇತರೆ ಜಾತಿ ಮತ್ತು ಪರಿಶಿಷ್ಟ ಜಾತಿಗಳು ಹಿಂದುಳಿದಿರುವುದಕ್ಕೆ ಕಾರಣವಾಗುವ ಸಾಧ್ಯತೆಗಳಿವೆ. ಇಂತಹ ಸ್ಥಿತಿಯಿಂದ ಹೊರಬಂದು ಗ್ರಾಮದ ಎಲ್ಲಾ ಸಮುದಾಯಗಳ ಅಭಿವೃದ್ಧಿಗೆ ದುಡಿಯುವುದು ಗ್ರಾಮಪಂಚಾಯಿತಿಗಳ ಕೆಲಸ ವಾಗಿರುತ್ತದೆ.[೩೪]

೩೧. Snehalatha pande ಅವರ **Indian Politics A study of People's Involvement, Archives** ಎಂಬ ಲೇಖನದಲ್ಲಿ ಮಹಿಳೆಯರ ರಾಜಕೀಯ ಭಾಗವಹಿಸುವಿಕೆ ಮತ್ತು ಶಿಕ್ಷಣದ ಪ್ರಭಾವದ ಕುರಿತು ಚರ್ಚಿಸಲಾಗಿದೆ. ಸಾಮಾನ್ಯವಾಗಿ ಮಹಿಳೆಯರು ಶಿಕ್ಷಣ ಪಡೆಯದಿರುವುದರಿಂದ ಎಲ್ಲಾ ರಂಗಗಳಲ್ಲಿ ಪುರುಷರಿಗೆ ಸಮಾನರಾಗಿ ಇಲ್ಲದಿರುವುದು ಕಂಡು ಬಂದಿದೆ. ಮಹಿಳೆಯರ ಶಿಕ್ಷಣದ ಕೊರತೆ ಮತ್ತು ಸಾಮಾಜಿಕ ಸ್ಥಿತಿಯು ಅವರ ಆರ್ಥಿಕ ಮತ್ತು ರಾಜಕೀಯ ಸ್ಥಿತಿಗಳ ಮೇಲೆ ಪ್ರಭಾವ ಉಂಟುಮಾಡುತ್ತದೆ. ಅನಕ್ಷರಸ್ಥ ಮಹಿಳೆಯರು ಹೆಚ್ಚು ಸಾಮಾಜಿಕ ಭಾಗಹಿಸುವಿಕೆಯಲ್ಲಿ ದೂರ ಉಳಿದಿರುತ್ತಾರೆ. ಇದಕ್ಕೆ ಕುಟುಂಬದ ಪುರುಷರು ಒಂದು ಕಾರಣವಾದರೆ, ಅನಕ್ಷರತೆ ಒಂದು ಪ್ರಮುಖ ಕಾರಣವಾಗಿರುತ್ತದೆ. ಶಿಕ್ಷಣದಿಂದ ಸಾಮಾಜಿಕ ಅರಿವು, ಸಮಾನತೆ, ಸ್ವಾತಂತ್ರ್ಯಗಳ ಬಗ್ಗೆ ಅರಿವು ಉಂಟಾಗುತ್ತದೆ. ಪುರುಷ ಸಮಾನವಾದ ಮಾನಸಿಕ ಬೌದ್ಧಿಕ ಸಾಮರ್ಥ್ಯಗಳ ಬೆಳವಣಿಗೆ ಹೊಂದಿ ಸಕ್ರಿಯವಾಗಿ ರಾಜಕೀಯ ದಲ್ಲಿ ಭಾಗವಹಿಸುವಿಕೆಯಿಂದ ರಾಜಕೀಯ ಅಧಿಕಾರಗಳನ್ನು ಪಡೆಯಲು ಮತ್ತು ರಾಜಕೀಯ ತೀರ್ಮಾನಗಳನ್ನು ಕೈಗೊಳ್ಳಲು, ಸಬಲತೆಯನ್ನು ಹೊಂದಲು ಶಿಕ್ಷಣ ಸಹಕಾರಿಯಾಗುತ್ತದೆ. ರಾಜಕೀಯದಲ್ಲಿ ಭಾಗವಹಿಸುವುದರಿಂದ ಮಹಿಳೆಯರ ರಾಜಕೀಯ ಅರಿವು ಮತ್ತು ರಾಜಕೀಯ ತೀರ್ಮಾನಗಳಲ್ಲಿ ಮಹಿಳೆಯರ ಪಾತ್ರ ಹೆಚ್ಚು ಕಂಡುಬರಲು ಸಾಧ್ಯವಾಗುತ್ತದೆ.[೩೫]

೩೨. Panna wignarja, Akmal Hussuin, Harsh sethi, Ganeshan wignaraja Participatory Development Learning form south Asia ಎಂಬ ಲೇಖನವು ದಲಿತರ ಸಾಮಾಜಿಕ ಸ್ಥಿತಿಗತಿ ಬದಲಾವಣೆ ಮತ್ತು ಇವರ ಆರ್ಥಿಕ ಸಬಲೀಕರಣದಲ್ಲಿ ಸಾರಿಗೆ ಮತ್ತು ತಂತ್ರಜ್ಞಾನದ ಪಾತ್ರದ ಕುರಿತು ಚರ್ಚಿಸಿದೆ. ಸುಮಾರು ದಶಕಗಳಿಂದ ಭಾರತದಲ್ಲಿ ಗ್ರಾಮೀಣ

ಸಮಾಜಗಳು ಬದಲಾವಣೆಯನ್ನು ಕಾಣದೆ ಇದ್ದವು. ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣಗಳು ದಲಿತರ ಜೀವನಮಟ್ಟ ಸುಧಾರಿಸುವಲ್ಲಿ ಪ್ರಧಾನವಾದ ಭೂಮಿಕೆಯನ್ನು ನಿರ್ವಹಿಸಿವೆ ಎಂದು ಹೇಳಬಹುದು. ಪೂರ್ವದಲ್ಲಿ ಗ್ರಾಮೀಣ ಪ್ರದೇಶಗಳಿಗೆ ಸಾರಿಗೆ ವ್ಯವಸ್ಥೆ ಇಲ್ಲದ ಹಲವು ಗ್ರಾಮಗಳು ಇದ್ದವು. ಜಾಗತೀಕರಣದ ಪ್ರಭಾವದಿಂದ ಸಾರಿಗೆ ವ್ಯವಸ್ಥೆಯು ಗ್ರಾಮೀಣ ಭಾಗದ ಎಲ್ಲಾ ಜಾತಿ ಸಮುದಾಯಗಳಿಗೆ ಮುಕ್ತವಾಗಿ ತೆರೆದುಕೊಂಡವು. ಈ ಸಾರಿಗೆ ವ್ಯವಸ್ಥೆಯಿಂದ ಗ್ರಾಮೀಣ ವ್ಯವಸಾಯಗಳಲ್ಲಿ ನೂತನ ತಂತ್ರಜ್ಞಾನವನ್ನು ಬಳಸಲಾಯಿತು. ಹೆಚ್ಚು ಇಳುವರಿಯನ್ನು ಪಡೆಯಲು ಅವಕಾಶಗಳು ಸಿಕ್ಕವು ಹಾಗೂ ಗ್ರಾಮೀಣ ಮಾರುಕಟ್ಟೆಗಳಿಂತ ನಗರ ಮಾರುಕಟ್ಟೆಗಳು ತಳಸಮುದಾಯಗಳಿಗೆ ಹೆಚ್ಚಿನ ಬೆಲೆಯಲ್ಲಿ ಮಾರಾಟ ಮಾಡುವ ಸ್ವಾತಂತ್ರ್ಯವನ್ನು ಒದಗಿಸಿದವು. ಹಳೆ ಸಾಮಾಜಿಕ ಸ್ಥಿತಿಯಿಂದ ಆರ್ಥಿಕ ನಷ್ಟ ಅನುಭವಿಸುತ್ತಿದ್ದ ತಳಜಾತಿ ಸಮುದಾಯಗಳಿಗೆ ಸಾರಿಗೆ, ತಂತ್ರಜ್ಞಾನ, ಹೊಸ ಮಾರುಕಟ್ಟೆ ಅವಕಾಶಗಳು ಸವರ್ಣೀಯರಂತೆ ಆರ್ಥಿಕ ಸಬಲೀಕರಣ ಹೊಂದಲು ನೆರವಾದವು. ಉತ್ತಮ ಶಿಕ್ಷಣ, ಆಹಾರ ಮತ್ತು ಉತ್ತಮ ಜೀವನವನ್ನು ಸಾಗಿಸಲು ಜಾಗತೀಕರಣ, ಉದಾರೀಕರಣಗಳು ಪರೋಕ್ಷವಾಗಿ ವರದಾನಗಳಾಗಿ ದಲಿತರ ಅಭಿವೃದ್ಧಿಗೆ ಸಹಕಾರಿಯಾದವು ಎಂದು ಲೇಖಕರು ವಿವರಿಸಿದ್ದಾರೆ.[೩೬]

೩೩. G. Palanithurai ಅವರ **Participation in the Development Process Grass root Experience** ಎಂಬ ಲೇಖನದಲ್ಲಿ ಯೋಜನೆಗಳ ಅನುಷ್ಠಾನವನ್ನು ಕುರಿತು ಚರ್ಚಿಸಿದ್ದಾರೆ. ಅಭಿವೃದ್ಧಿ ಯೋಜನೆಗಳ ಅನುಷ್ಠಾನ, ಅವುಗಳ ಗುರಿ ಮತ್ತು ಯೋಜನೆಗಳ ಗಾತ್ರವನ್ನು ಆಧರಿಸಿರುತ್ತದೆ. ದೊಡ್ಡ ಮೊತ್ತದ ಹಣ ಹೂಡಿಕೆಯನ್ನು ಹೊಂದಿರುವ ಯೋಜನೆಗಳು ಮತ್ತು ದೀರ್ಘಕಾಲ ಅಂದರೆ ಕನಿಷ್ಠ ಐದು ವರ್ಷಗಳು, ಅದಕ್ಕೂ ಹೆಚ್ಚು ಕಾಲ ಮುಂದುವರಿಯುವ ಯೋಜನೆಗಳಲ್ಲಿ ಜನರು ಭಾಗವಹಿಸುವಿಕೆ ಹೆಚ್ಚಾಗಿರುತ್ತದೆ. ಆದ ಕಾರಣ ಫಲಾನುಭವಿಯಾಗುವ ಸಾಧ್ಯತೆಗಳು ಹೆಚ್ಚಾಗಿರುವುದರಿಂದ ಜನರಿಗೆ ಯೋಜನೆಗಳ ಮೇಲೆ ಆಸಕ್ತಿ ಮೂಡುತ್ತದೆ. ಅಲ್ಪಾವಧಿಯ ಮತ್ತು ಸಣ್ಣ ಮೊತ್ತದ ಹಣವನ್ನು ಹೊಂದಿರುವ ಗ್ರಾಮೀಣಾಭಿವೃದ್ಧಿ ಯೋಜನೆಗಳು ಗ್ರಾಮಪಂಚಾಯಿತಿಗಳಲ್ಲಿ ಅನುಷ್ಠಾನಕ್ಕೆ ತರುವ ಸಮಯಕ್ಕೆ ಯೋಜನೆಗಳ ಅನುದಾನಗಳು ಗ್ರಾಮಪಂಚಾಯಿತಿಗಳಿಗೆ ಸೇರುವುದಿಲ್ಲ. ಪಂಚಾಯಿತಿಗಳಲ್ಲಿ ಫಲಾನುಭವಿಗಳ ಆಯ್ಕೆಯ ಸಮಯಕ್ಕೆ ಯೋಜನೆಯು ಮುಕ್ತಾಯವಾಗುವಂತಹ ಸ್ಥಿತಿ ಇರುವುದರಿಂದ ಯೋಜನೆಗಳು ಬಹುಸಂಖ್ಯಾತರನ್ನು ಉದ್ದೇಶವಾಗಿಟ್ಟುಕೊಂಡು ದೀರ್ಘ ಕಾಲಾವಧಿಯ ಯೋಜನೆಗಳನ್ನು ರೂಪಿಸುವುದರ ಮೂಲಕ ಗ್ರಾಮೀಣಾಭಿವೃದ್ಧಿಯನ್ನು ಸಾಧಿಸಲಾಗುತ್ತದೆ ಎಂದು ಲೇಖಕರು ಅಭಿಪ್ರಾಯಪಡುತ್ತಾರೆ.[೩೭]

೩೪. Katar Singh ಅವರ **Rural Development Principle's Policies Management** ಎಂಬ ಗ್ರಂಥದಲ್ಲಿ ಗ್ರಾಮೀಣಾಭಿವೃದ್ಧಿ ಯೋಜನೆಗಳ ಅನುಷ್ಠಾನದ ಸಫಲತೆ ಮತ್ತು ವಿಫಲತೆಗೆ ಕಾರಣವಾಗುವ ಅಂಶಗಳನ್ನು ಚರ್ಚಿಸಿದ್ದಾರೆ. ಅಭಿವೃದ್ಧಿ ಯೋಜನೆಗಳನ್ನು ಗ್ರಾಮೀಣ ಮಟ್ಟದಲ್ಲಿ ಸಕ್ರಿಯವಾಗಿ ಜಾರಿಗೊಳಿಸಲು ಪ್ರಥಮವಾಗಿ ಯೋಜನೆ ನಿರ್ವಹಣೆ ಮತ್ತು ವಿಶ್ಲೇಷಿಸುವ ಸಾಮರ್ಥ್ಯಗಳು ಯೋಜನೆಯನ್ನು ಅನುಷ್ಠಾನಗೊಳಿಸುವ ಸಂಸ್ಥೆಯ ಸಿಬ್ಬಂದಿಗೆ ಇರಬೇಕು. ಯೋಜನೆಗಳನ್ನು ಅನುಷ್ಠಾನಗೊಳಿಸುವ ಅನುಭವಿ ಅಧಿಕಾರಿಗಳ ತಂಡ ಮತ್ತು ಸಿಬ್ಬಂದಿ ಇರಬೇಕು. ಯೋಜನೆಯನ್ನು ಸುವ್ಯವಸ್ಥಿತವಾಗಿ ಜಾರಿಗೊಳಿಸಲು ಸರಳೀಕರಿಸುವ ಸಾಮರ್ಥ್ಯವು ಇರಬೇಕು. ಈ ಎಲ್ಲಾ ಆಂಶಗಳನ್ನು ಒಳಗೊಂಡಿರುವಂತಹ ಗ್ರಾಮಪಂಚಾಯಿತಿಯ ಸಿಬ್ಬಂದಿಯು ಯೋಜನೆ ಅನುಷ್ಠಾನದಲ್ಲಿ ಪ್ರಮುಖವಾಗಿರುತ್ತಾರೆ. ಹಾಗಾಗಿ ಯೋಜನೆ ಅನುಷ್ಠಾನಕ್ಕೆ ಬೇಕಾದ ತರಬೇತಿ ಮತ್ತು ಸಾಮರ್ಥ್ಯಗಳನ್ನು ಬೆಳೆಸುವುದು ಯೋಜನೆಗಳ ಗುರಿ ಸಾಧಿಸಲು ಪ್ರಧಾನವಾಗಿ ಕೆಲಸ ಮಾಡುತ್ತವೆ.[೩೮]

೩೫. B.S. Boviskar ಅವರ **Including the exceloded: Empowering the power less through Panchayath Raj Maharashtra**ದ **Chalisgaoh** ತಾಲೂಕಿನಲ್ಲಿ (Mandurne) ಮಂಡೂರೆನ್, ಗ್ರಾಮಪಂಚಾಯಿತಿಯ ಅಧ್ಯಕ್ಷರ ಕಾರ್ಯನಿರ್ವಹಣೆ, ಅಲವಡಿ ಗ್ರಾಮಪಂಚಾಯಿತಿ ಮತ್ತು ಪಿಲ್‌ಕೊಡ್ ಗ್ರಾಮಪಂಚಾಯಿತಿಗಳ ಅಧ್ಯಕ್ಷರ ಕಾರ್ಯನಿರ್ವಹಣೆ ಕುರಿತು ಚರ್ಚಿಸಿದ್ದಾರೆ. ಮಂಡೂರೆನ್ ಗ್ರಾಮಪಂಚಾಯಿತಿಯಲ್ಲಿ ಒಬಿಸಿ ಜಾತಿಯ ಮಹಿಳೆಯು ಅಧ್ಯಕ್ಷರಾಗಿದ್ದಾರೆ. ಅಲವಡಿ ಗ್ರಾಮಪಂಚಾಯಿತಿಯಲ್ಲಿ ಪರಿಶಿಷ್ಟ ಜಾತಿಯವರು ಅಧ್ಯಕ್ಷರಾಗಿದ್ದಾರೆ. ಪಿಲ್‌ಕೊಡ್ ಗ್ರಾಮಪಂಚಾಯಿತಿಯಲ್ಲಿ ಒಬಿಸಿ ಜಾತಿಯ ಪುರುಷ ಅಧ್ಯಕ್ಷರಾಗಿದ್ದಾರೆ. ಗ್ರಾಮಪಂಚಾಯಿತಿಯ ಅಧ್ಯಕ್ಷರ ಕೆಲಸ ನಿರ್ವಹಣೆಯು ಉಳಿದ ಗ್ರಾಮಪಂಚಾಯಿತಿ ಸದಸ್ಯರ ಅಭಿಪ್ರಾಯಗಳನ್ನು ಆಧರಿಸಿಕೊಂಡಿರುತ್ತವೆ. ಲಿಂಗ ಅಸಮಾನತೆಯು ಗ್ರಾಮಪಂಚಾಯಿತಿ ಅಧ್ಯಕ್ಷರ ಅಧಿಕಾರ ನಿರ್ವಹಣೆಯ ಸಂದರ್ಭಗಳಲ್ಲಿ ಪ್ರಧಾನ ಸಾಮಾಜಿಕ ಸಮಸ್ಯೆಯಾಗುತ್ತದೆ. ಮಹಿಳಾ ಅಧ್ಯಕ್ಷರು ಮತ್ತು ದಲಿತ ಜಾತಿಯ ಜನರು ಗ್ರಾಮಪಂಚಾಯಿತಿ ಆಡಳಿತದ ನಿರ್ವಹಣೆಯ ಸಂದರ್ಭಗಳಲ್ಲಿ ಹಲವು ಅಡೆತಡೆಗಳನ್ನು ಎದುರಿಸಬೇಕಾಗುತ್ತದೆ. ಸಂವಿಧಾನ ತಿದ್ದುಪಡಿಯಿಂದ ಗ್ರಾಮಪಂಚಾಯಿತಿಯಲ್ಲಿ ಮೀಸಲಾತಿ ಸಿಗುತ್ತದೆ ಹೊರತು ಗ್ರಾಮಗಳಲ್ಲಿ ಮಹಿಳೆಯರು ಮತ್ತು ದಲಿತರು ಸಾಮಾಜಿಕ ಸ್ಥಾನಮಾನಗಳಿಂದ ಏಕಾಏಕಿ ಬದಲಾವಣೆ ಹೊಂದುವುದಿಲ್ಲ ಎಂದು ಲೇಖಕರು ವಿವರಿಸಿದ್ದಾರೆ. ಮಂಡೂರೆನ್ ಮತ್ತು ಅಲವಡಿ ಗ್ರಾಮಪಂಚಾಯಿತಿ ಸದಸ್ಯರಿಗೆ ಒಂದು ಗ್ರಾಮಸಭೆಯ ಭತ್ಯೆ ೧೦ ರೂಪಾಯಿಗಳು. ಅವರು ಬಡತನ ರೇಖೆಗಿಂತ ಕೆಳಗಿರುವ ಕುಟುಂಬದವರಾಗಿದ್ದು ಅವರು ೫೦ ರೂಪಾಯಿಗಳ ದಿನಗೂಲಿ ಪಡೆದರೆ ಆ ಸದಸ್ಯರ

ಕುಟುಂಬ ನಿರ್ವಹಣೆಯು ಸಾಧ್ಯವಾಗುತ್ತದೆ. ಹಾಗಾಗಿ ಗ್ರಾಮಸಭೆಗೆ ಹಾಜರಾಗದೇ ದಿನಗೂಲಿಗೆ ಹೋಗಿ ಬರುವುದರಿಂದ ಗ್ರಾಮಸಭೆಗಳಿಗೆ ಹಾಜರಾಗದೇ ಇರುವುದನ್ನು ತಮ್ಮ ಅಧ್ಯಯನದಲ್ಲಿ ಕಂಡುಕೊಂಡಿದ್ದಾರೆ. ದಲಿತರ ಮತ್ತು ಮಹಿಳೆಯರ ಸಾಮಾಜಿಕ ಸ್ಥಿತಿಗತಿ, ಆರ್ಥಿಕ ಸಂಪನ್ಮೂಲಗಳ ಹಿಂದುಳಿದಿರುವಿಕೆಯಿಂದ ರಾಜಕೀಯವಾಗಿ ಸಬಲೀಕರಣಗೊಳ್ಳಲು ಸಾಧ್ಯವಾಗುತ್ತಿಲ್ಲ ಎಂದು ಲೇಖಕರು ಉಲ್ಲೇಖಿಸಿದ್ದಾರೆ.[೩೯]

೩೬. Leelamma, Devasia, V.V. Devasia ಅವರ **Women Participatory Research and Development, Dattsons, Women's Participation for safe drinking water** ಈ ಲೇಖನದಲ್ಲಿ ಮಹಿಳಾ ಗ್ರಾಮಪಂಚಾಯಿತಿ ಸದಸ್ಯರು ರಾಜಕೀಯ ಅಧಿಕಾರ, ಹಕ್ಕು ಮತ್ತು ಕರ್ತವ್ಯಗಳನ್ನು ನಿರ್ವಹಿಸುವಲ್ಲಿ ಹಿಂದುಳಿದಿದ್ದಾರೆ. ಅದಕ್ಕೆ ಗ್ರಾಮಪಂಚಾಯಿತಿಗೆ ಆಯ್ಕೆಯಾದ ಮಹಿಳೆಯರ ಸಂಖ್ಯೆ ಕಡಿಮೆ ಇದ್ದಾಗ ಮಹಿಳಾ ಸದಸ್ಯರ ಅಭಿಪ್ರಾಯಗಳನ್ನು ಗ್ರಾಮಸಭೆಯಲ್ಲಿ ಪರಿಗಣಿಸದೇ ಪುರುಷ ಸದಸ್ಯರ ನಿರ್ಧಾರಗಳು ಪ್ರಧಾನವಾಗಿರುವುದು ಕಂಡುಬಂದಿದೆ ಎಂದು ಉಲ್ಲೇಖಿಸುತ್ತಾರೆ. ಮಹಿಳಾ ಗ್ರಾಮಪಂಚಾಯಿತಿ ಸದಸ್ಯರು ಆರ್ಥಿಕ ಸಬಲತೆ ಹೊಂದದೆ ಇರುವುದರಿಂದ ಮತ್ತು ಮಹಿಳೆಯರನ್ನು ಮನೆಯಲ್ಲಿ ದ್ವಿತೀಯ ದರ್ಜೆಯ ಸ್ಥಾನದಲ್ಲಿಟ್ಟು ನೋಡುವುದರಿಂದ ಮಹಿಳಾ ಸದಸ್ಯರು ಪುರುಷರೊಂದಿಗೆ ಸರಿಸಮಾನವಾಗಿ ಗ್ರಾಮಸಭೆಯಲ್ಲಿ ಗ್ರಾಮದ ಅಭಿವೃದ್ಧಿಗೆ ಬೇಕಾದ ನಿರ್ಧಾರಗಳನ್ನು ಕೈಗೊಳ್ಳಲು ಆಗದೇ ಇರುವುದನ್ನು ತಮ್ಮ ಅಧ್ಯಯನದಲ್ಲಿ ಗುರುತಿಸಿದ್ದಾರೆ.[೪೦]

೩೭. P.C. Shashi Jain and Sudha Bhatnagar ಅವರ **Scheduled Caste Women** ಗ್ರಂಥದಲ್ಲಿ ಸ್ವಾತಂತ್ರ್ಯ ಕಾಲಮಾನದಿಂದ ದೇಶದಲ್ಲಿ ಹಲವು ಸಾಮಾಜಿಕ ಜೀವನ, ಸಾಮಾಜಿಕ ಅಂಶಗಳು ಬದಲಾವಣೆ ಹೊಂದುತ್ತಾ ಬಂದಿವೆ. ಆದರೆ ಮಹಿಳೆಯರ ಸಾಮಾಜಿಕ ಬದುಕು ಹೆಚ್ಚು ಬದಲಾವಣೆ ಆಗದೆ ಇರುವುದನ್ನು ಈ ಅಧ್ಯಯನದಲ್ಲಿ ತಿಳಿಸಿದ್ದಾರೆ. ಕುಟುಂಬದಲ್ಲಿ ಸಾಮಾನ್ಯ ಮಹಿಳೆಯರ ಸ್ಥಾನಮಾನಗಳು ಹೆಚ್ಚು ಬದಲಾವಣೆ ಹೊಂದದೆ ಇರುವುದು ಕಂಡುಬಂದಿದೆ. ಪರಿಶಿಷ್ಟ ಜಾತಿಯ ಮಹಿಳೆಯರು ತೀರಾ ಹಿಂದುಳಿದಿದ್ದು, ಸಾಮಾಜಿಕ ಬದಲಾವಣೆ ಬಗ್ಗೆ ಯಾವ ರೀತಿ ಸಂಬಂಧವಿಲ್ಲದಂತೆ ಬದುಕು ಸಾಗಿಸುತ್ತಿದ್ದಾರೆ. ಪುರುಷರು ಕುಟುಂಬ ಯಜಮಾನಿಕೆ ಹೊಂದಿದ್ದು ಸಾಮಾಜಿಕವಾದ ಯಾವ ವಿಷಯಗಳಲ್ಲೂ ಮಹಿಳೆಯರನ್ನು ಹೆಚ್ಚು ಪರಿಗಣಿಸದೆ ಇರುವುದು ಕಂಡುಬಂದಿದೆ ಎಂದು ಲೇಖಕರು ಉಲ್ಲೇಖಿಸಿದ್ದಾರೆ.[೪೧]

೩೮. ವಿನೋದ್ ಕೆ. ಜೆರಾಥ್ ಮತ್ತು ಶ್ರೀನಿವಾಸ ಸಜ್ಜಾ, **ನಿಗೋಷಿಎಕ್ಷನಂಗ್ ವಿತ್ ಎಂಪವರ್‌ಮೆಂಟ್ ಪಂಚಾಯಿತ್‌ರಾಜ್ ಇನ್ ಆಂಧ್ರಪ್ರದೇಶ** ಲೇಖನದಲ್ಲಿ ಗ್ರಾಮಪಂಚಾಯಿತಿಯಲ್ಲಿ

ಅಭಿವೃದ್ಧಿಯಿಂದ ಜನರು ದೂರ ಉಳಿದಿರುವುದಕ್ಕೆ ಪ್ರಮುಖವಾಗಿ ಎರಡು ಕಾರಣಗಳನ್ನು ಗುರುತಿಸಿದ್ದಾರೆ. ಒಂದು: ಈ ಗ್ರಾಮಪಂಚಾಯಿತಿ ವ್ಯಾಪ್ತಿಯಲ್ಲಿ ರೆಡ್ಡಿ ಜಾತಿಯು Dominent ಯಜಮಾನಿಕೆಯನ್ನು ಮಾಡಿಕೊಂಡು ಬಂದಿದ್ದು, ಬೆಂಬಲಿಗರು ಗ್ರಾಮಪಂಚಾಯಿತಿ ಸ್ಪರ್ಧೆಯಲ್ಲಿ/ ಚುನಾವಣೆಯಲ್ಲಿ ಗೆಲ್ಲುತ್ತಾರೆ. ರೆಡ್ಡಿ ಜಾತಿ ಅವರ ಹೊರತು ಇತರೆ ಜಾತಿಯವರು ಚುನಾವಣೆಗೆ ಸ್ಪರ್ಧಿಸುವುದು ತೀರಾ ಕಡಿಮೆ ಎಂದು ಲೇಖನದಲ್ಲಿ ವಿವರಿಸಿದ್ದಾರೆ. ಈ ಗ್ರಾಮಪಂಚಾಯಿತಿಯ ವ್ಯಾಪ್ತಿಯಲ್ಲಿರುವ ಜನರಿಗೆ ಪಂಚಾಯಿತಿ ಕುರಿತು ಹೆಚ್ಚಿನ ಅರಿವು ಇಲ್ಲದಿರುವುದು ಕಂಡುಬಂದಿದೆ. ಚುನಾವಣೆಯಲ್ಲಿ ಆಶ್ವಾಸನೆಗಳು ಹೆಚ್ಚು ಪ್ರಚಾರಕ್ಕೆ ಬರುತ್ತವೆ ಹೊರತು ಅಭಿವೃದ್ಧಿ ಯೋಜನೆಗಳ ಕುರಿತು ಮತ್ತು ಗ್ರಾಮಪಂಚಾಯಿತಿ ಆಡಳಿತ ಕುರಿತು ಜನರಿಗೆ ಅರಿವನ್ನು ಪ್ರಚಾರಪಡಿಸುವ ಸ್ಥಿತಿ ಈ ಗ್ರಾಮಪಂಚಾಯಿತಿಗಳಲ್ಲಿ ಕಂಡುಬಂದಿಲ್ಲ ಎಂದು ಲೇಖಕರು ವಿವರಿಸಿದ್ದಾರೆ.

ಈ ಅಧ್ಯಯನವನ್ನು ಮೆಹಬೂಬ್‌ನಗರ ಜಿಲ್ಲೆಯ ಅಮರಿಗಲ್ ಮಂಡಲದ ಅಕತೋಟಪಲ್ಲೆ, ಮಂಗಲಪಲ್ಲೆ ಮತ್ತು ಚೆರಿಕೊಂಡ ಗ್ರಾಮಪಂಚಾಯಿತಿಗಳ ವ್ಯಾಪ್ತಿಯಲ್ಲಿ ಕ್ಷೇತ್ರಕಾರ್ಯವನ್ನು ಆಧರಿಸಿ ಮಾಡಲಾಗಿದೆ.[೮೨]

೩೯. ಮನಸೇಂದ್ ಕುಂದೂ, **ಪಂಚಾಯಿತ್‌ರಾಜ್ ಆರ್ ಪಾಪಿಣರಾಜ್ ಅಂಡರ್ ಸ್ಟ್ಯಾಂಡಿಂಗ್ ದಿ ನೇಚುರಲ್ ಆಫ್ ಲೋಕಲ್ ಗೌರ್ನಮೆಂಟ್ ಇನ್ ವೆಸ್ಟ್ ಬೆಂಗಾಲ್** ಎಂಬ ಲೇಖನವು ವೆಸ್ಟ್ ಬಂಗಾಲ ಮಲಯಪುರ-೨, ಹರಿನಕೋಲ್-೧, ಹರಿನಕೋಲ್ ಗ್ರಾಮ ಪಂಚಾಯಿತಿಗಳ ಗ್ರಾಮಸಂಸದ ಸಭೆಗಳು ಮತ್ತು ಜನರ ಗ್ರಾಮಸಭೆಯಲ್ಲಿ ಜನರ ಭಾಗವಹಿಸುವಿಕೆ ಕುರಿತು ೨೦೦೨ರಲ್ಲಿ ಮೂರು ಗ್ರಾಮಪಂಚಾಯಿತಿಗಳಲ್ಲಿ ಕೇಸ್ ಸ್ಟಡಿಯನ್ನು ಮಾಡಲಾಗಿದೆ. ಹರಿನೂರು ಗ್ರಾಮಪಂಚಾಯಿತಿಯಲ್ಲಿ ಎರಡು ಗ್ರಾಮಸಭೆಗಳನ್ನು ಆಯೋಜಿಸಿದರೂ ಈ ಗ್ರಾಮಸಭೆ ಪ್ರಚಾರವನ್ನು ಕರಪತ್ರಗಳು ಹಂಚಿ ಒಂದು ವಾರದ ಮುಂಚಿತವಾಗಿ ಪ್ರಚಾರ ಮಾಡಲಾಗಿತ್ತು. ಈ ಗ್ರಾಮಪಂಚಾಯಿತಿಯ ವ್ಯಾಪ್ತಿಯಲ್ಲಿ ೧೩೦೦ ಮತದಾರರು ವಾಸವಿದ್ದು, ಗ್ರಾಮಸಭೆಯಲ್ಲಿ ೪೦ ಜನರು ಮಾತ್ರ ಭಾಗವಹಿಸಿದ್ದಾರೆ. ನಲವತ್ತು ಜನರಲ್ಲಿ ನಾಲ್ಕು ಜನ ಮಹಿಳೆಯರು ಮಾತ್ರ ಭಾಗವಹಿಸಿದ್ದರು ಎಂದು ಲೇಖಕರು ವಿವರಿಸಿದ್ದಾರೆ. ಮಲಯಪುರ ಗ್ರಾಮಪಂಚಾಯಿತಿ ಸಂಸದ ಸಭೆಯಲ್ಲಿ ಎರಡುನೂರು ಜನ ಪುರುಷರು, ಮೂರು ಮಹಿಳೆಯರು ಗ್ರಾಮಸಭೆಯಲ್ಲಿ ಭಾಗವಹಿಸಿದರೂ ಎರಡುನೂರು ಜನರಲ್ಲಿ ಕೇವಲ ಹತ್ತು ಜನ ಗ್ರಾಮಸ್ಥರು ಗ್ರಾಮಕ್ಕೆ ಬೇಕಾದ ರಸ್ತೆ ರಿಪೇರಿ, ಚರಂಡಿ, ಕುಡಿಯುವ ನೀರಿನ ಬೇಡಿಕೆಗಳನ್ನು ಗ್ರಾಮಸಭೆಯಲ್ಲಿ ಪ್ರಸ್ತಾಪಿಸಿದರೂ ಮಹಿಳೆಯರು ಅದಕ್ಕೆ ಒಪ್ಪಿಗೆಯೆಂಬಂತೆ ಸುಮ್ಮನಿದ್ದರು. ಆದರೆ ಗ್ರಾಮಸಭೆ ರಿಜಿಸ್ಟರ್‌ನಲ್ಲಿ ಸುಮಾರು ಐವತ್ತು ಮಹಿಳೆಯರು ಭಾಗವಹಿಸಿದಂತೆ ಸಹಿ ಮಾಡಿ ಮನೆಗೆ

ಹೋದರೆ ಭಾಗವಹಿಸಿದ್ದು ಮೂರು ಮಹಿಳೆಯರು ಮಾತ್ರ, ಹರಿನಕೋಲ್-೨ ಗ್ರಾಮ ಪಂಚಾಯಿತಿಯಲ್ಲಿ ಮೂರು ಗ್ರಾಮಸಭೆಯಲ್ಲಿ ಗ್ರಾಮಸ್ಥರ ಭಾಗವಹಿಸುವಿಕೆ ತೀರಾ ಕಡಿಮೆ ಇದೆ. ಈ ಮೂರು ಗ್ರಾಮಪಂಚಾಯಿತಿಗಳ ಗ್ರಾಮಸಭೆಗಳ ಅಧ್ಯಯನದಿಂದ ಲೇಖಕರು ೭೩ನೇ ತಿದ್ದುಪಡಿಯಿಂದ ಮಹಿಳೆಯರು ಮತ್ತು ದಲಿತರು ಪಂಚಾಯಿತಿ ಸದಸ್ಯರಾಗಿದ್ದರು. ಸಕ್ರಿಯ ರಾಜಕೀಯ ಆಡಳಿತಗಾರರಾಗಲಿಲ್ಲ. ಗ್ರಾಮಸಭೆಗಳಲ್ಲಿ ಮಹಿಳೆಯರ ಭಾಗವಹಿಸುವಿಕೆಯೂ ಹೆಚ್ಚಾಗಲಿಲ್ಲ. ರಾಜಕೀಯ ಅಧಿಕಾರ ಹೊಂದಿರುವ ಸದಸ್ಯರು ಡಾಮಿನೆಂಟ್ ಮೇಲ್ಜಾತಿಯ ಸೇವೆ ಮಾಡುತ್ತಿರುವುದು ಈಗಲೂ ಕಂಡುಬರುತ್ತದೆ. ಸ್ಥಳೀಯ ಗ್ರಾಮಸ್ಥರು ಗ್ರಾಮಸಭೆ ಸೇರಿ ತಮಗೆ ಬೇಕಾದ ಸವಲತ್ತುಗಳನ್ನು ಪಡೆಯುವುದೇ ಸ್ಥಳೀಯ ಸರ್ಕಾರ ಎಂದು ಲೇಖಕರು ಲೇಖನದಲ್ಲಿ ವಿವರಿಸಿದ್ದಾರೆ.[೪೩]

೪೦. ಟಿ.ಜಿ. ಸುರೇಶ್, **ಅಂಡರ್‌ಸ್ಟ್ಯಾಂಡಿಂಗ್ ಗ್ರಾಸ್‌ರೂಟ್ ಪವರ್ ಆ್ಯಂಡ್ ಎಕ್ಸ್‌ಕ್ಲೋಡೆಡ್ ಕಮ್ಯುನಿಟೀಸ್ ಇನ್ ಕೇರಳ** ಎಂಬ ಲೇಖನವು ಕೇರಳ ವಯನಾಡ್ ಗ್ರಾಮಪಂಚಾಯಿತಿ, ಮನಂತವಡಿ, ತೀರುನೆಲ್ಲಿ, ವೆಲ್ಲಮೂಂಡ ಗ್ರಾಮಪಂಚಾಯಿತಿಗಳಲ್ಲಿ ಮಹಿಳೆಯರ ರಾಜಕೀಯ ಭಾಗವಹಿಸುವಿಕೆ ಮತ್ತು ಮಹಿಳಾ ಗ್ರಾಮಪಂಚಾಯಿತಿ ಸದಸ್ಯರ ಕರ್ತವ್ಯ ನಿರ್ವಹಣೆಯಲ್ಲಿ ಮಹಿಳೆಯರು ಅನುಭವಕ್ಕೆ ಬಂದಿರುವ ಅಂಶಗಳನ್ನು ಈ ಲೇಖನದಲ್ಲಿ ಚರ್ಚಿಸಿದ್ದಾರೆ. ಕೇರಳ ಪಂಚಾಯತ್‌ರಾಜ್ ಕಾಯ್ದೆ ೧೯೯೪ ತಿದ್ದುಪಡಿಯಿಂದ ಗ್ರಾಮಪಂಚಾಯಿತಿಯಲ್ಲಿ ಮಹಿಳಾ ಮೀಸಲಾತಿಯಿಂದಾಗಿ ಗ್ರಾಮೀಣ ಆಡಳಿತದಲ್ಲಿ ಮಹಿಳಾ ಸದಸ್ಯರು ಕಂಡುಬರುತ್ತಿದ್ದಾರೆ. ಅದೇ ರೀತಿ ಬುಡಕಟ್ಟಿನ ಜನರು ಗ್ರಾಮಸಭೆಗಳಲ್ಲಿ ಭಾಗವಹಿಸಿ ತಮ್ಮ ಸಮಸ್ಯೆಗಳ ಕುರಿತು ಚರ್ಚಿಸಿ ಸೌಲಭ್ಯಗಳನ್ನು ಪಡೆಯುವಲ್ಲಿ ಮುಂದಾಗಿರುವುದು ಕಂಡುಬರುತ್ತದೆ ಎಂದು ಲೇಖಕರು ವಿವರಿಸಿದ್ದಾರೆ. ಗ್ರಾಮಸಭೆಯಲ್ಲಿ ಜನರು ಭಾಗವಹಿಸಲು ವಿದ್ಯಾರ್ಹತೆ, ರಾಜಕೀಯ ಅರಿವು ಇಲ್ಲದಿದ್ದರೂ, ಸಾಮಾನ್ಯ ಜ್ಞಾನ ಇದ್ದು ತಮ್ಮ ಗ್ರಾಮದಲ್ಲಿ ನಡೆಯುವ ಸಾರ್ವಜನಿಕ ಸಭೆಯಲ್ಲಿ ಭಾಗವಹಿಸಿ ವಿಷಯವನ್ನು ಕೇಳಿ ತಿಳಿಯುವುದರ ಮೂಲಕ ಗ್ರಾಮದಲ್ಲಿರುವ ಅನಕ್ಷರಸ್ಥರು ಗ್ರಾಮಸಭೆಯನ್ನು ಸೌಲಭ್ಯಗಳನ್ನು ಪಡೆಯಲು ಸಾಧ್ಯವಾಗುತ್ತದೆ ಎಂದು ಈ ಲೇಖನದಿಂದ ಅರಿತುಕೊಳ್ಳಲಾಗಿದೆ.[೪೪]

೪೧. ಎಲ್. ತಾರಾಬಾಯಿ, **ಜೆಂಡರ್, ಕ್ಯಾಸ್ಟ್ ಆ್ಯಂಡ್ ಪಾಲಿಟಿಕ್ಸ್ ಇನ್ ರೂರಲ್ ತಮಿಳ್‌ನಾಡು** ಎಂಬ ಲೇಖನದಲ್ಲಿ ತಮಿಳುನಾಡಿನ ಮಧುರೈ ಜಿಲ್ಲೆಯ ಅಧ್ಯಯನಕ್ಕೆ ಆಯ್ಕೆ ಮಾಡಿಕೊಳ್ಳಲಾಗಿದೆ. ಈ ಜಿಲ್ಲೆ ಅಭಿವೃದ್ಧಿಯಾಗಿರುವ ಜಿಲ್ಲೆಯಾಗಿದೆ. ಹಾಗೆಯೇ ಅಭಿವೃದ್ಧಿಯಿಂದ ಹಿಂದುಳಿದ ತಾಲೂಕು ಭಾಗಗಳನ್ನು ಹೊಂದಿದ್ದು ಚೆಲ್ಲಮ್‌ಪಟ್ಟಿ ಪಂಚಾಯಿತಿ ಒಕ್ಕೂಟದಲ್ಲಿ

ಬರುವ ಪೆನ್ನಿಯನ್ ವಿಕ್ರಮಂಗಲಮ್ ಮತ್ತು ನಟ್ಟಿಮಂಗಲಮ್ ಗ್ರಾಮಗಳಲ್ಲಿನ ಗ್ರಾಮಸಭೆಗಳಲ್ಲಿ ಡಾಮಿನೆಂಟ್ ಜಾತಿಯ ಭಾಗವಹಿಸುವಿಕೆ, ಅದರ ಅಧಿಕಾರ ಮತ್ತು ಸಾಮಾಜಿಕ ಹಿಡಿತವನ್ನು ಕುರಿತು ವಿವರಿಸಿದ್ದಾರೆ. ಹಾಗೆಯೇ ತಳಜಾತಿಯ ಜನರು ಗ್ರಾಮಸಭೆಯಲ್ಲಿ ಭಾಗವಹಿಸುವ ಅವಕಾಶ ವಂಚಿತರಾಗಿರುವುದರ ಕುರಿತು ಚರ್ಚಿಸಿದ್ದಾರೆ.[೪೪]

೪೩. ಬಿ.ಆರ್. ಅಣ್ಣಸಾಗರ್ ಅವರ **ಅಭಿವೃದ್ಧಿಯ ಹೊಸ ಆಯಾಮಗಳು** ಗ್ರಂಥದಲ್ಲಿ ಅಭಿವೃದ್ಧಿಯು ಒಂದು ಆಯಾಮವನ್ನು ಹೊಂದಿರುವುದಿಲ್ಲ. 'ಅಭಿವೃದ್ಧಿಯಲ್ಲಿ ಪರೋಕ್ಷ ಅಂಶಗಳು ಮತ್ತು ಪ್ರತ್ಯಕ್ಷ ಅವಶ್ಯಕತೆಗಳ ಪಾತ್ರವು ಪ್ರಮುಖವಾಗಿರುತ್ತದೆ. ಒಂದು ಪ್ರದೇಶದ ಅಭಿವೃದ್ಧಿಗೆ ಅಲ್ಲಿನ ಭೌಗೋಳಿಕ ಅಂಶಗಳು, ನೀರು, ಆಹಾರ ಲಭ್ಯತೆ, ಕೃಷಿ, ಕೃಷಿಗೆ ಬೇಕಾದ ಮಾರುಕಟ್ಟೆಗಳು ಬ್ಯಾಂಕ್ ಸೇವೆಗಳು, ಕೈಗಾರಿಕೆಗಳ ನಿರ್ಮಾಣ ಮತ್ತು ಉತ್ಪಾದನಾ ಸಾಮರ್ಥ್ಯಗಳು ಒಂದು ಪ್ರದೇಶದ ಅಭಿವೃದ್ಧಿಗೆ ಪೂರಕವಾಗುತ್ತದೆ. ಪ್ರಸ್ತುತ ದಿನಗಳಲ್ಲಿ ಮಾರುಕಟ್ಟೆ, ಬೇಡಿಕೆ ಮತ್ತು ತಂತ್ರಜ್ಞಾನಗಳ ಬಳಕೆಯೂ ಅಭಿವೃದ್ಧಿಗೆ ಪೂರಕವಾಗಿ ಕಂಡುಬರುತ್ತದೆ. ಗ್ರಾಮಗಳ ಅಭಿವೃದ್ಧಿಯಲ್ಲಿ ಶಿಕ್ಷಣ ಮತ್ತು ಆರೋಗ್ಯ ಸೇವೆಗಳ ಜೊತೆಯಲ್ಲಿ ಸರಕು ಸೇವೆಗಳು ಪಂಚಾಯಿತಿಯ ಸಾರ್ವಜನಿಕ ಸೇವೆಗಳು ಗ್ರಾಮಗಳ ಅಭಿವೃದ್ಧಿಗೆ ಪ್ರಮುಖ ಕೆಲಸ ಮಾಡುತ್ತವೆ' ಎಂದು ವಿವರಿಸಿದ್ದಾರೆ.[೪೫]

೪೪. ಒಡೆಯರ್ ಡಿ. ಹೆಗ್ಗಡೆ, ಎನ್. ಅನ್ನಪೂರ್ಣೇಶ್ವರಿ ಅವರ **ಮಹಿಳಾ ಹಕ್ಕುಗಳು** ಎಂಬ ಗ್ರಂಥದಲ್ಲಿ ಅಭಿವೃದ್ಧಿ ಪರಿಕಲ್ಪನೆಯು ಹೊಸ ಹೊಸ ಆಯಾಮಗಳನ್ನು ಹೊಂದುತ್ತಿದೆ. ಲಿಂಗ ಸಂವೇದಿತ ಅಭಿವೃದ್ಧಿ ಮಹಿಳೆಯರನ್ನು ಅಭಿವೃದ್ಧಿ ಪ್ರಕ್ರಿಯೆಯಿಂದ ಹೊರತುಪಡಿಸಲಾಗಿದೆ. ಮಹಿಳೆಯರನ್ನು ಒಳಗೊಂಡಂತೆ ಅಭಿವೃದ್ಧಿ ಪ್ರಕ್ರಿಯೆಯಲ್ಲಿ ಮಹಿಳೆಯರು ಪಾಲ್ಗೊಳ್ಳುವಂಥ ಯೋಜನೆಗಳನ್ನು ಸಿದ್ಧಗೊಳಿಸಬೇಕು. ಮಹಿಳೆಯರ ಮತ್ತು ಎಲ್ಲಾ ಜನರ ಪಾಲ್ಗೊಳ್ಳುವಿಕೆ ಅಭಿವೃದ್ಧಿಯ ಮತ್ತೊಂದು ಆಯಾಮವಾಗಿದೆ. ಮಹಿಳೆಯರನ್ನು ಹೊರತುಪಡಿಸಿ ಅಭಿವೃದ್ಧಿಯನ್ನು ಗುರುತಿಸಲು ಸಾಧ್ಯವಾಗುವುದಿಲ್ಲ ಎಂದು ವಿವರಿಸಿದ್ದಾರೆ. ಮಹಿಳೆಯರ ಆರ್ಥಿಕ ಸ್ಥಾನಮಾನಗಳು ಮಹಿಳೆಯ ದುಡಿಮೆ ಮತ್ತು ಮಹಿಳೆಯ ಸಾಮಾಜಿಕ ಸಂಬಂಧಗಳು, ಸಾರ್ವಜನಿಕವಾಗಿ ಭಾಗವಹಿಸುವಿಕೆಗಳು ಅಂಶಗಳು ಮಹಿಳೆಯರ ಶಿಕ್ಷಣ, ಆರೋಗ್ಯ ಸೇರಿದಂತೆ ಅಂಶಗಳು ಅಭಿವೃದ್ಧಿ ಪ್ರಧಾನವಾಗಿರುತ್ತವೆ.[೪೬]

೪೫. Ponna wignaraja, Akmal Hussain, Harsh sethi, Ganeshan wignaraja ಅವರ **Participatory development learning from south Asia** ಗ್ರಂಥದಲ್ಲಿ ಭಾಗವಹಿಸುವಿಕೆ ಅಥವಾ ಪಾಲ್ಗೊಳ್ಳುವಿಕೆ ಅಭಿವೃದ್ಧಿ ಕುರಿತು ಚರ್ಚಿಸಿದ್ದಾರೆ. ದಕ್ಷಿಣ ಏಷಿಯಾ ರಾಷ್ಟ್ರದಲ್ಲಿ

ಬಹುಸಂಖ್ಯಾತರಲ್ಲಿನ ಬಡತನ ಮತ್ತು ಪರಿಸರಗಳು ಕೆಳಮಟ್ಟದಲ್ಲಿರುವುದರಿಂದ ಕಡಿಮೆ ಅಧಿಕಾರಗಳು ಹಕ್ಕು ಈ ರಾಷ್ಟ್ರದ ಜನರಲ್ಲಿ ಕಂಡುಬರುತ್ತದೆ. ಕೆಲವು ಹಿತಾಸಕ್ತಿ ಗುಂಪುಗಳ ಹೋರಾಟ ದಂಗೆಗಳು, ಸಂಸ್ಥೆಗಳಲ್ಲಿನ ಜನರನ್ನು ಕೆಲಸಗಾರರನ್ನು ತನ್ನದೇ ಹೋರಾಟದಲ್ಲಿ ತೊಡಗಿಸಿಕೊಳ್ಳುವುದರಿಂದ ಸಂಸ್ಥೆಯ ನೌಕರರಲ್ಲಿ ಹೊಸ ಹೊಸ ಸಿದ್ಧಾಂತ ಚಿಂತನೆಗಳು ಮಾಡುತ್ತವೆ. ಈ ಸಾಮಾಜಿಕ ಚಳುವಳಿಗಳು ಸಮಾಜದ ಬಹುಪಾಲು ಜನರನ್ನು ಒಳಗೊಳ್ಳುವುದಿಲ್ಲ. ಅದಕ್ಕೆ ಕೆಳಮಟ್ಟದ ಸಾರ್ವಜನಿಕ ಜೀವನ ಮತ್ತು ಪ್ರಸ್ತುತ ಕಾಲಮಾನದಲ್ಲಿ ಇರುವ ರಾಜಕೀಯ, ಆರ್ಥಿಕ ಸ್ಥಿತಿಗಳನ್ನು ಅರ್ಥ ಮಾಡಿಕೊಳ್ಳದೇ ಇರುವುದಾಗಿದೆ.[೪೮]

೪೭. ಒಡೆಯರ್ ಡಿ. ಹೆಗ್ಗಡೆ, ಬಿ.ಟಿ. ಬಾಣೇಗೌಡ ಅವರ **ಮಾನವಾಭಿವೃದ್ಧಿ ಮತ್ತು ಪ್ರಜಾಪ್ರಭುತ್ವ** ಗ್ರಂಥದಲ್ಲಿ ಮಾನವಾಭಿವೃದ್ಧಿಯು ರಾಜಕೀಯ, ಆರ್ಥಿಕ, ಸಾಮಾಜಿಕ ಮತ್ತು ಸಾಂಸ್ಕೃತಿಕ ನೆಲೆಗಳನ್ನು ಹಾಗೂ ಆಯಾಮಗಳನ್ನು ಹೊಂದಿದೆ. ಪ್ರಜಾಪ್ರಭುತ್ವವು ರಾಜಕೀಯ ಸ್ವಾತಂತ್ರ್ಯವನ್ನು ವಿಸ್ತರಿಸುತ್ತದೆ. ಪ್ರಜಾಪ್ರಭುತ್ವದಲ್ಲಿ ಜನರಿಗೆ ಅಭಿವ್ಯಕ್ತಿ ಸ್ವಾತಂತ್ರ್ಯವಿದೆ. ಮಾಹಿತಿ ಸ್ವಾತಂತ್ರ್ಯ, ಮಾಧ್ಯಮ ಸ್ವಾತಂತ್ರ್ಯ ಮತ್ತು ಮುಕ್ತ ರಾಜಕೀಯ ಚರ್ಚೆಯ ಮೂಲಕ ಅಭಿವ್ಯಕ್ತಿಯಾಗುತ್ತದೆ. ಈ ಮೂಲಕ ಜನರ ಅಭಿಪ್ರಾಯಗಳನ್ನು ಸಾರ್ವಜನಿಕ ನೀತಿ ನಿರೂಪಕರು ಪರಿಗಣಿಸಲೇಬೇಕಾಗುವುದು. ಬಡಜನರ ಸಾಮರ್ಥ್ಯಗಳನ್ನು ಹೆಚ್ಚಿಸಲು ಪ್ರಜಾಸತ್ತಾತ್ಮಕ ಸ್ವಾತಂತ್ರ್ಯ ಮತ್ತು ನಾಗರಿಕ ಹಕ್ಕುಗಳು ಅವಶ್ಯಕವಾಗಿರುತ್ತವೆ ಎಂದು ಉಲ್ಲೇಖಿಸುತ್ತಾರೆ. ವಾಸ್ತವ ಗ್ರಾಮಸಭೆಗಳು ಗ್ರಾಮದ ಬಡತನ ರೇಖೆಗಿಂತ ಕೆಳಗಿನ ಜನರಿಗೆ, ಅಭಿವೃದ್ಧಿಯಿಂದ ಹೊರಗೆ ಉಳಿದಿರುವ ಜನರಿಗೆ ಸರ್ಕಾರ ಮತ್ತು ಸಂವಿಧಾನವು ಕಲ್ಪಿಸಿಕೊಟ್ಟಿವೆ. ವಾಸ್ತವವಾಗಿ ಗ್ರಾಮಸಭೆಗಳಲ್ಲಿ ಸಾಮಾನ್ಯ ಬಡಕುಟುಂಬದವರು ಈ ಹಕ್ಕುಗಳನ್ನು ಪಡೆಯಲು ಸಾಧ್ಯವಾಗಿದೆಯೆಂದು ನೋಡಬೇಕಾಗಿದೆ.[೪೯]

೪೮. ಟಿ.ಆರ್.ಚಂದ್ರಶೇಖರ ಅವರ **ಕರ್ನಾಟಕ ಅಭಿವೃದ್ಧಿಯ ಆಕೃತಿ** ಗ್ರಂಥದಲ್ಲಿ 'ಗ್ರಾಮ ಪಂಚಾಯಿತಿ ಅಧಿಕಾರ ವಿಕೇಂದ್ರೀಕರಣವು ನಾಮಮಾತ್ರವಾಗಿದೆ. ವಾಸ್ತವ ವಿಕೇಂದ್ರೀಕರಣ ಹೊಂದಿಲ್ಲ. ಜನರನ್ನು ಒಳಗೊಳ್ಳುವ ರೀತಿಯ ಆಡಳಿತ ಪರಿಪಾಲನೆ ನಡೆಸುವ ಕ್ರಮವಿಲ್ಲ' ಎಂದು ವಿವರಿಸುತ್ತಾರೆ. 'ಸ್ಥಳೀಯ ಮಟ್ಟದಿಂದ ಜನರ ಯೋಜನೆ ಸಿದ್ಧವಾಗಬೇಕು. ಆದರೆ ಇದುವರೆಗೆ ಜನರ ಯೋಜನೆಯನ್ನು ತಳಮಟ್ಟದಿಂದ ಜನರ ಸಹಭಾಗಿತ್ವದಲ್ಲಿ ರೂಪಿಸುವ ಕೆಲಸವನ್ನು ಮಾಡಿವೆಯೆಂದು ವಿವರಿಸುತ್ತಾರೆ. ಬಹುಪಾಲು ಗ್ರಾಮಪಂಚಾಯಿತಿಗಳು ಈ 'ಜನರ ಯೋಜನೆ' ಕುರಿತು ಜನರಿಗೆ ತಿಳಿಯದೇ ಇರುವುದು ಕಂಡುಬರುತ್ತದೆ. ಪಂಚಾಯಿತಿ ಸದಸ್ಯರಿಗೂ ಈ 'ಜನರ ಯೋಜನೆ' ಕುರಿತು ಸಂಪೂರ್ಣ ಮಾಹಿತಿ ಇಲ್ಲದಿರುವುದರಿಂದಲೂ ಜನರ ಯೋಜನೆ ಸಿದ್ಧವಾಗದಿರಲು ಕಾರಣವಾಗಿರುತ್ತದೆ ಎಂದು ಅಭಿಪ್ರಾಯ ಮೂಡುತ್ತದೆ.[೫೦]

೪೯. ಟಿ.ಆರ್. ಚಂದ್ರಶೇಖರ ಅವರ **ಕರ್ನಾಟಕ ಅಭಿವೃದ್ಧಿಯ ಸಾಮಾಜಿಕ ಸ್ಥಿತಿಗಳು** ಗ್ರಂಥದಲ್ಲಿ ಅಭಿವೃದ್ಧಿ ನೆಲೆಗಳು ಅಥವಾ ಆಯಾಮಗಳನ್ನು ಸಮಾಜದ ವಿವಿಧ ವರ್ಗಗಳನ್ನು, ಜಾತಿ, ವಿವಿಧ ಪ್ರದೇಶಗಳ ಮತ್ತು ಲಿಂಗಾನುಸಾರವಾಗಿ ಅಭಿವೃದ್ಧಿ ಒಳಗೊಳ್ಳುವಿಕೆ ಮತ್ತು ಹೊರಗೆ ಉಳಿದಿರುವಿಕೆಯನ್ನು ಗುರುತಿಸಿದ್ದಾರೆ. ಜಾತಿ, ಸ್ಥಾನಮಾನಕ್ಕೆ ಅನುಗುಣವಾಗಿ ಸಾಮಾಜಿಕ, ಆರ್ಥಿಕ ಸ್ಥಾನಮಾನಗಳು, ರಾಜಕೀಯ ಅಧಿಕಾರ ಪ್ರಾಪ್ತವಾಗುವ ಸ್ಥಿತಿಯಿದೆ. ಅಭಿವೃದ್ಧಿಯ ಮೇಲೆ ಸಾಮಾಜಿಕ ಗುಂಪುಗಳು ಪಡೆದಿರುವ ಹಕ್ಕುದಾರಿಕೆಯನ್ನು ರಾಜಕೀಯ ಆರ್ಥಿಕತೆಯಿಂದ ಪರಿಶೀಲಿಸಿದ್ದಾರೆ. ರಾಜಕೀಯ ಹಕ್ಕು ಅಧಿಕಾರಗಳು ಭಾರತೀಯ ಸಮಾಜದಲ್ಲಿ ಲಿಂಗ ತಾರತಮ್ಯತೆಯಿಂದ ಕೂಡಿವೆ. ಪುರುಷ ಸಮಾನವಾದ ಸಾಮಾಜಿಕ ಸ್ಥಾನಮಾನಗಳಿಂದ ಮಹಿಳೆಯರು ಮತ್ತು ದ್ವಿತೀಯ ಲಿಂಗಗಳು ಹೊರಗೆ ಉಳಿದಿರುವುದನ್ನು ಗಮನಿಸಬಹುದಾಗಿದೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಜನರು ಸವರ್ಣೀಯರ ಸಮಾನವಾಗಿ ರಾಜಕೀಯ, ಆರ್ಥಿಕ ಹಕ್ಕು, ಅಧಿಕಾರಗಳನ್ನು ಹೊಂದಲು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಸಾಮಾಜಿಕ ಸ್ಥಾನಮಾನಗಳು ಅಡ್ಡಿಯಾಗುತ್ತವೆ. ಆದ್ದರಿಂದ ಸಮಾಜದ ತಳಸಮುದಾಯಗಳು ಅಭಿವೃದ್ಧಿಯಿಂದ ಹೊರಗಿರುವುದು ಕಂಡುಬರುತ್ತದೆ.[೫೦]



೫೦. ಟಿ.ಆರ್.ಚಂದ್ರಶೇಖರ ಅವರ **ಕರ್ನಾಟಕ ಜಿಲ್ಲಾ ಅಭಿವೃದ್ಧಿ ಅಧ್ಯಯನ ಮಾಲೆ-೨: ಗದಗ ಜಿಲ್ಲೆ** ಗ್ರಂಥದಲ್ಲಿ ಗದಗ ಜಿಲ್ಲೆಯ ಅಭಿವೃದ್ಧಿಯ ವಿವಿಧ ಆಯಾಮಗಳನ್ನು ಗುರುತಿಸಿದ್ದಾರೆ. "ಸಮಾಜದ ವಿವಿಧ ಬಗೆಯ ಅಸಮಾನತೆ-ತಾರತಮ್ಯಗಳು ಸಮಾಜದ ಮೂಲದಲ್ಲಿರುವ ಸಾಮಾಜಿಕ ಮತ್ತು ಆರ್ಥಿಕ ಶಕ್ತಿಗಳ ಅಸೌಷ್ಟವತೆಯ ಅಭಿವ್ಯಕ್ತಿಯಾಗಿರುತ್ತದೆ. ಜನರ ಬದುಕು ಉತ್ತಮಗೊಳ್ಳುವ ವಿಧಾನವೇ ಅಭಿವೃದ್ಧಿ. ಬದುಕನ್ನು ಉತ್ತಮಪಡಿಸಿಕೊಳ್ಳಲು ಲಭ್ಯವಿರುವ ಅವಕಾಶಗಳನ್ನು ತನ್ನದಾಗಿಸಿಕೊಳ್ಳುವ ಸಾಮರ್ಥ್ಯ ಹಾಗೂ ಲಭ್ಯವಿರುವ ಅವಕಾಶಗಳನ್ನು 'ಧಾರಣಶಕ್ತಿ' ಎಂದಿದ್ದಾರೆ. ಈ ಧಾರಣಶಕ್ತಿ ಸಂವರ್ಧನೆಯೇ ಅಭಿವೃದ್ಧಿ ಎಂದಿದ್ದಾರೆ". ಗ್ರಾಮಪಂಚಾಯಿತಿಗಳು ಗ್ರಾಮಸ್ಥರಿಗೆ, ಸಾರ್ವಜನಿಕವಾದ ಅವಕಾಶಗಳನ್ನು ಒದಗಿಸಬೇಕು. ಆ ಮೂಲಕ ಗ್ರಾಮಸಭೆಗಳಲ್ಲಿ ಜನರು ತಮ್ಮ ಅವಶ್ಯಕತೆಗಳು ಪಡೆಯಲು ಬೇಡಿಕೆಯನ್ನು ನೀಡುವುದು ಅವರಲ್ಲಿ ಧಾರಣಶಕ್ತಿ ಹೆಚ್ಚಾಗಿ ಗ್ರಾಮ ಅಭಿವೃದ್ಧಿ ಸಾಧ್ಯವಾಗುತ್ತದೆ.[೫೧]

೫೧. ಎಂ. ಚಂದ್ರ ಪೂಜಾರಿ ಅವರು **ದೇಶೀಯತೆಯ ನೆರಳಲ್ಲಿ ವಿಕೇಂದ್ರೀಕರಣ** ಗ್ರಂಥದಲ್ಲಿ ಪಾಪಿನಾಯಕನಹಳ್ಳಿಯ ರಾಜಕೀಯ ಯಜಮಾನಿಕೆಗೆ ಮೇಲ್ಜಾತಿಯವರಲ್ಲಿ ಅಥವಾ ಶ್ರೀಮಂತ ಕುಟುಂಬಗಳಲ್ಲಿರುವ ಸಾಂಸ್ಕೃತಿಕ ಯಜಮಾನಿಕೆ ಮತ್ತು ಆರ್ಥಿಕ ಯಜಮಾನಿಕೆಗಳು ಕಾರಣಗಳಾಗಿವೆ ಎಂದು ವಿವರಿಸಿದ್ದಾರೆ. ಗ್ರಾಮಪಂಚಾಯಿತಿಗಳ ವಿಕೇಂದ್ರೀಕರಣವು ಗ್ರಾಮಸ್ಥರ ಸಶಕ್ತೀಕರಣ ಮತ್ತು ಕೆಳಜಾತಿ ವರ್ಗಗಳಲ್ಲಿನ ಗ್ರಾಮಸಭೆ ಯೋಜನೆಗಳ ಅರಿವು, ಭಾಗವಹಿಸುವಿಕೆ,

ಆರೋಗ್ಯ, ಶಿಕ್ಷಣ ವಸತಿ ಮತ್ತು ಮೂಲಭೂತ ಸೌಲಭ್ಯಗಳನ್ನು ಹೊಂದುವಿಕೆಯನ್ನು ಸಶಕ್ತೀಕರಣ ಎಂದು ಅರ್ಥೈಸಿದ್ದಾರೆ. ಆದರೆ ವಿಕೇಂದ್ರೀಕರಣ ವಾಸ್ತವವಾಗಿ ತಳಮಟ್ಟದಲ್ಲಿರುವ ಜನರ ಸಶಕ್ತೀಕರಣಕ್ಕೆ ಪೂರಕವಾಗಿ ಕೆಲಸ ಮಾಡದಿರುವುದು ದಾಖಲೆಗಳಲ್ಲಿ ವಿಕೇಂದ್ರೀಕರಣ ವ್ಯವಸ್ಥೆಯನ್ನು ನೋಡಬಹುದಾಗಿದೆ ಎಂದು ಲೇಖಕರು ವಿಶ್ಲೇಷಿಸಿದ್ದಾರೆ. ಗ್ರಾಮಪಂಚಾಯಿತಿಯ ಅಭಿವೃದ್ಧಿಯು ತಳಮಟ್ಟದ ಜನರ ಕೆಳಜಾತಿ ವರ್ಗಗಳಲ್ಲಿ ಸಶಕ್ತೀಕರಣದಿಂದ ಆಗುತ್ತದೆ ಎಂದು ವಿವರಿಸಿದ್ದಾರೆ.[೫೩]

೫೨. ಕೆ.ಕೆ. ತ್ರಿಪಾಟಿ ಅವರ **ರೂರಲ್ ವೇಜ್ ಗ್ಯಾರಂಟಿ ಇಂಪ್ಲಿಮೆಂಟೇಶನ್, ಚಾಲೆಂಜ್ಸ್,** ಲೇಖನದಲ್ಲಿ ನರೇಗಾ ಯೋಜನೆಯು ಗ್ರಾಮೀಣ ಜನರಿಗೆ ಹೆಚ್ಚು ಉಪಯುಕ್ತವಾದ ಯೋಜನೆಯಾಗಿದೆ ಎಂದಿದ್ದಾರೆ. ೨೦೧೧ರಲ್ಲಿ ಸಾಮಾಜಿಕ ಜಮಾಬಂದಿ ಗ್ರಾಮಸಭೆಯನ್ನು ಜಾರಿಗೆ ತರಲಾಗಿದೆ. ಆ ಮೂಲಕ ಪ್ರತಿ ೬ ತಿಂಗಳಿಗೊಮ್ಮೆ ನರೇಗಾ ಯೋಜನೆ ಸಾಮಾಜಿಕ ಜಮಾಬಂದಿಯನ್ನು ನಡೆಸಲಾಗುತ್ತಿದೆ. ಆ ಮೂಲಕ ಜನರಿಗೆ ಹೆಚ್ಚು ಕೆಲಸವನ್ನು ನೀಡುತ್ತಿದ್ದು ಸರಿಯಾದ ವೇತನ ಸಿಗುವುದರಿಂದ ಗ್ರಾಮೀಣ ಜನರು ನರೇಗಾ ಯೋಜನೆಯಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿ ಫಲಾನುಭವವನ್ನು ಪಡೆದುಕೊಳ್ಳುತ್ತಿದ್ದಾರೆ ಎಂದು ಲೇಖನದಲ್ಲಿ ಉಲ್ಲೇಖಿಸಿದ್ದಾರೆ.[೫೪]

೫೩. ಡಾ.ಟಿ.ಆರ್.ಚಂದ್ರಶೇಖರ್ ಅವರು **ಜನರನ್ನು ಒಳಗೊಳ್ಳುವ ಅಭಿವೃದ್ಧಿ ಹೈದರಾಬಾದ್–ಕರ್ನಾಟಕ ಪ್ರದೇಶ** ಗ್ರಂಥದಲ್ಲಿ ಹೈದರಾಬಾದ್ ಕರ್ನಾಟಕ ಪ್ರದೇಶವು ಜನರನ್ನು ಹೇಗೆ ಅಭಿವೃದ್ಧಿಯಲ್ಲಿ ಒಳಗೊಳ್ಳುತ್ತದೆ ಮತ್ತು ಹೇಗೆ ಜನರನ್ನು ಅಭಿವೃದ್ಧಿಯಿಂದ ಹೊರಗಿಡುತ್ತಿದೆ ಎಂಬುದನ್ನು ವಿವರಿಸಿದ್ದಾರೆ. ಅಭಿವೃದ್ಧಿಯಿಂದ ಹೊರಗೆ ಉಳಿದಿರುವವರ ಸಾಕ್ಷರತೆ, ಪ್ರಾಥಮಿಕ ಶಿಕ್ಷಣ, ದುಡಿಮೆಗಾರರ ಸ್ವರೂಪ, ಪರಿಶಿಷ್ಟರ ನೆಲೆಗಳ, ಸಾಮಾಜಿಕ ಅಸಮಾನತೆ, ವರಮಾನ, ಲಿಂಗ, ರಾಜಕೀಯ ಸ್ಥಿತಿಗತಿಗಳನ್ನು ಆಧರಿಸಿ ಹೈದರಾಬಾದ್ ಕರ್ನಾಟಕದ ಜನರನ್ನು ಅಭಿವೃದ್ಧಿಯನ್ನು ಅಭಿವೃದ್ಧಿಯಿಂದ ಹೊರಗೆ ಉಳಿದಿರುವ ಜನರು ಅಭಿವೃದ್ಧಿಯನ್ನು ಒಳಗೊಳ್ಳಲು ಹತ್ತು ಸೂತ್ರಗಳನ್ನು ಸೂಚಿಸಿದ್ದಾರೆ. ಅಕ್ಷರಕ್ರಾಂತಿ, ಶಾಲಾ ದಾಖಲಾತಿ ಕ್ರಾಂತಿ, ಪೌಷ್ಟಿಕತೆ ಕ್ರಾಂತಿ, ಉದ್ಯೋಗ ಕ್ರಾಂತಿ, ಸಾಮಾಜಿಕ ಬ್ಯಾಂಕಿಂಗ್ ಕ್ರಾಂತಿ, ಆರೋಗ್ಯ ಕ್ರಾಂತಿ, ಸಂತಾನೋತ್ಪತ್ತಿ ಆರೋಗ್ಯ ಕ್ರಾಂತಿ, ಪ್ರಾದೇಶಿಕ ಅಭಿವೃದ್ಧಿ ಕ್ರಾಂತಿ, ಈ ರೀತಿಯಲ್ಲಿ ಅಭಿವೃದ್ಧಿಗೆ ಪೂರಕವಾಗುವ ಅಂಶಗಳಲ್ಲಿ ಜನರು ಒಳಗೊಳ್ಳುವುದರಿಂದ ಅಭಿವೃದ್ಧಿಯನ್ನು ಸಾಧಿಸುತ್ತಾರೆ ಎಂದು ಲೇಖಕರು ಸೂಚಿಸಿದ್ದಾರೆ.[೫೫]

೫೪. ಎಂ. ಚಂದ್ರ ಪೂಜಾರಿ ಅವರು **ಜನಾಯೋಜನೆ, ಹೈದರಾಬಾದ್ ಕರ್ನಾಟಕದ ಅನುಭವಗಳು** ಗ್ರಂಥದಲ್ಲಿ ಬಳ್ಳಾರಿ ಜಿಲ್ಲೆಯ ಸಂಡೂರು ತಾಲೂಕಿನ ಕೃಷ್ಣನಗರ ಪಂಚಾಯಿತಿ

ಮತ್ತು ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲೂಕಿನ ಯರೆಹಂಚಿನಾಳ ಪಂಚಾಯಿತಿಗಳ ಗ್ರಾಮಸಭೆಗಳಲ್ಲಿ ಜನರು ಭಾಗವಹಿಸದೇ ಇರುವುದಕ್ಕೆ ಕಂಡುಬಂದಿರುವ ಕಾರಣ ಕುರಿತು ಚರ್ಚಿಸಿದ್ದಾರೆ. ಗ್ರಾಮಸ್ಥರು ವಸತಿ ಸಭೆಗಳಲ್ಲಿ ಕಡಿಮೆ ಸಂಖ್ಯೆಯಲ್ಲಿ ಭಾಗವಹಿಸುವಿಕೆಗೆ ಪೂರ್ವ ತಯಾರಿಯ ಕೊರತೆ ಕಾರಣ ಎಂಬುದನ್ನು ವಿವರಿಸಿದ್ದಾರೆ. ಪಂಚಾಯಿತಿಗಳಲ್ಲಿ ಅಭಿವೃದ್ಧಿಮಟ್ಟ ಕೆಳಹಂತದಲ್ಲಿರುವುದು, ಗ್ರಾಮಪಂಚಾಯಿತಿಯ ಅಧಿಕಾರಗಳೊಂದಿಗೆ ಪಂಚಾಯಿತಿ ಸಿಬ್ಬಂದಿ ಸಂಬಂಧದ ತೊಡಕುಗಳು, ಗ್ರಾಮಸ್ಥರನ್ನು ಗ್ರಾಮಸಭೆಯಲ್ಲಿ ಸೇರಿಸಲು ಗ್ರಾಮಪಂಚಾಯಿತಿ ಸದಸ್ಯರು ಮತ್ತು ಗ್ರಾಮಸ್ಥರು ವಿಶೇಷ ಪ್ರಯತ್ನ ಮಾಡದಿರುವುದು, ಈ ಮೇಲಿನ ಕಾರಣದಿಂದ ಗ್ರಾಮಸಭೆಗಳಲ್ಲಿ ಗ್ರಾಮಸ್ಥರು ಹೆಚ್ಚು ಸಂಖ್ಯೆಯಲ್ಲಿ ಭಾಗವಹಿಸುವುದಿಲ್ಲ ಎಂದು ಲೇಖಕರು ತೀರ್ಮಾನಕ್ಕೆ ಬಂದಿದ್ದಾರೆ. ಕೃಷ್ಣನಗರ ಗ್ರಾಮಪಂಚಾಯಿತಿಯಲ್ಲಿ ಹೆಚ್ಚಿನ ಸಂಖ್ಯೆ ಜನರು ಗ್ರಾಮದಿಂದ ದೂರದ ಊರುಗಳಿಗೆ, ಪಕ್ಕದ ಕಾರ್ಖಾನೆಗಳಿಗೆ ಬೆಳಿಗ್ಗೆ ಹೋಗಿ ಸಂಜೆ ಬರುವುದರಿಂದ ಗ್ರಾಮಸಭೆಗೆ ಭಾಗವಹಿಸಲು ಸಾಧ್ಯವಾಗದೇ ಇರುವುದು ಕಂಡುಬಂದಿದೆ ಎಂದು ತೀರ್ಮಾನಿಸಿದ್ದಾರೆ.[೫೬]

೫೫. ಡಾ.ಯಶೋಧ ಅವರು **ಪರಿಶಿಷ್ಟ ಬುಡಕಟ್ಟಿನ ಜನರು ಶಿಕ್ಷಣ ಪಡೆಯುವಲ್ಲಿ ಎದುರಿಸುತ್ತಿರುವ ಸಮಸ್ಯೆಗಳು** ಎಂಬ ಲೇಖನದಲ್ಲಿ ಬುಡಕಟ್ಟುಗಳನ್ನು ಅಭಿವೃದ್ಧಿ ಪಥದೆಡೆಗೆ ಕೊಂಡೊಯ್ಯಲು ಅವರಿಗೆ ಪ್ರಮುಖವಾಗಿ ಶಿಕ್ಷಣ ಬೇಕು ಎಂದಿದ್ದಾರೆ. ಸಮಾಜದಲ್ಲಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಬುಡಕಟ್ಟಿನ ಜನರಿಗೆ ಶಿಕ್ಷಣ ಬೇಕಾಗಿದೆ. ಬಹುಪಾಲು ಜನರು ಕುಗ್ರಾಮ, ಬೆಟ್ಟಗುಡ್ಡ, ನಿರ್ಜನ ಪ್ರದೇಶಗಳಲ್ಲಿ ವಾಸಿಸುತ್ತಿದ್ದು ನಾಗರಿಕ ಸಮಾಜದಿಂದ ದೂರವಿದ್ದಾರೆ. ಅವರಲ್ಲಿ ಬಾಲ್ಯವಿವಾಹ, ಹೆಣ್ಣುಶಿಶುಗಳ ಹತ್ಯೆ, ಹೆಂಡತಿಯರ ವಿನಿಮಯ, ಬಹುಪತ್ನಿತ್ವ ಪದ್ಧತಿಗಳು ಸಮಸ್ಯೆಗಳಾಗಿ ಪೀಡಿಸುತ್ತವೆ. ಸರ್ಕಾರ ಬುಡಕಟ್ಟು ಜನರ ಸರ್ವತೋಮುಖ ಅಭಿವೃದ್ಧಿಗೆ ಏನೆಲ್ಲಾ ಕಾರ್ಯಕ್ರಮಗಳನ್ನು ಹಾಕಿದರೂ ಅವರಲ್ಲಿ ಅವಿದ್ಯಾವಂತರ ಸಂಖ್ಯೆ ಹೆಚ್ಚಾಗಿದ್ದು ಅವರು ನಾಗರಿಕ ಸಮಾಜದಿಂದ ದೂರ ಉಳಿದಿರುವುದು ಮತ್ತು ಅವರಿಗೆ ಶಿಕ್ಷಣದ ಮಹತ್ವ ತಿಳಿಯದೇ ಇರುವುದು ಪ್ರಮುಖ ಕಾರಣಗಳಾಗಿ ಕಂಡುಬರುತ್ತವೆ ಎಂದು ವಿವರಿಸಿದ್ದಾರೆ.[೫೭]

ಗ್ರಾಮೀಣ ಪ್ರದೇಶಗಳಲ್ಲಿ ವಾಸಿಸುವ ಇವರನ್ನು ಸ್ಥಳೀಯರು ಅಸ್ಪೃಶ್ಯರಂತೆ ಕಾಣುತ್ತಿದ್ದಾರೆ. ಶಿಕ್ಷಣದಿಂದ ಮತ್ತು ಅಭಿವೃದ್ಧಿ ಯೋಜನೆಗಳಿಂದ ದೂರ ಉಳಿದಿರುವುದರಿಂದ ಬುಡಕಟ್ಟಿನ ಜನರು ಸರ್ಕಾರದ ಯೋಜನೆಗಳ ಫಲವನ್ನು ಪಡೆಯಲಾಗುತ್ತಿಲ್ಲ ಎಂದು ವಿಶ್ಲೇಷಿಸಿದ್ದಾರೆ.

೫೬. Dr. Snehalata Panda, **Indian Politics** ಈ ಗ್ರಂಥದ **Political Efficacy and Political Participation: A Study of Women involvement in Politics in India** ಎಂಬ ಲೇಖನದಲ್ಲಿ ಮಹಿಳೆಯ ರಾಜಕೀಯ ಭಾಗವಹಿಸುವಿಕೆ ಮತ್ತು ತೀರ್ಮಾನಗಳನ್ನು ತೆಗೆದುಕೊಳ್ಳುವ ಸಾಮರ್ಥ್ಯ ಕುರಿತು ಚರ್ಚಿಸಿದ್ದಾರೆ. ಮಹಿಳೆಯರ ರಾಜಕೀಯ ಭಾಗವಹಿಸುವಿಕೆಯಲ್ಲಿ ಶಿಕ್ಷಣ ಪ್ರಮುಖ ಪಾತ್ರ ನಿರ್ವಹಿಸುತ್ತದೆ. ಶಿಕ್ಷಣವು ಮಹಿಳೆ ಮತ್ತು ಪುರುಷರಿಗೆ ರಾಜಕೀಯ ಮತ್ತು ಸಾಮಾಜಿಕ ವಿಷಯಗಳನ್ನು ಪರಿಚಯಿಸುತ್ತದೆ. ರಾಜಕೀಯ ಅವಕಾಶ, ಅಧಿಕಾರಿ ಮತ್ತು ಅವುಗಳನ್ನು ಪಡೆಯುವ ಜ್ಞಾನವನ್ನು ನೀಡುತ್ತದೆ. ರಾಜಕೀಯ ನಿರ್ಧಾರಗಳನ್ನು ಪ್ರಶ್ನಿಸುವ ಮಾನಸಿಕ ಸಾಮರ್ಥ್ಯ ಮತ್ತು ಬೌದ್ಧಿಕ ಸಾಮರ್ಥ್ಯವನ್ನು ನೀಡುತ್ತದೆ. ಶಿಕ್ಷಣ ಹೊಂದಿರುವ ಕುಟುಂಬದಲ್ಲಿ ಸಾಮಾಜಿಕ, ಆರ್ಥಿಕ ಸಂಪನ್ಮೂಲ ನಿರ್ವಹಣೆ ಉತ್ತಮವಾಗಿರುತ್ತದೆ. ಶಿಕ್ಷಣ ಪಡೆದವರಲ್ಲಿ ರಾಜಕೀಯ ಸಮಸ್ಯೆಗಳಿಗೆ ಪರಿಹಾರ ಮತ್ತು ಅರಿವು ಇರುತ್ತದೆ. ಮಹಿಳೆಯರ ಅನೌಪಚಾರಿಕವಾದ ಸಾಮಾಜಿಕ ಅಸಮಾನತೆಯು ಮಹಿಳೆಯರ ರಾಜಕೀಯ ಭಾಗವಹಿಸುವಿಕೆ ಯಿಂದ ದೂರವಿರುವಂತೆ ಮಾಡುತ್ತದೆ. ಸ್ತ್ರೀಯರು ಹುಟ್ಟಿನಿಂದ ಪ್ರತಿ ಹಂತದಲ್ಲಿ ಸಾಮಾಜಿಕ ಅಸಮಾನತೆಗೆ ಒಳಗಾಗುತ್ತಾ ಬಂದಿರುತ್ತಾರೆ. ಅದು ಮನೆಯಿಂದ ಪ್ರಾರಂಭವಾಗುತ್ತದೆ. ದೇವಸ್ಥಾನ, ಮಾರುಕಟ್ಟೆ, ವೃತ್ತಿ ದುಡಿಮೆ ಹೀಗೆ ಹಲವಾರು ಅಂಶಗಳಲ್ಲಿ ಮಹಿಳೆಯ ಹಕ್ಕನ್ನು ಮೊಟುಕು ಗೊಳಿಸುತ್ತಾ ಬಂದಿರುವುದರಿಂದ ಅವರಿಗೆ ಹಕ್ಕುಗಳ ಅರಿವಿಲ್ಲದಿರುವುದು ಅಧ್ಯಯನದಿಂದ ತಿಳಿದುಬಂದಿದೆ. ಮಹಿಳೆಯರು ತಮ್ಮ ಮೂಲಭೂತ ಹಕ್ಕುಗಳನ್ನು ಅನುಭವಿಸಲು ಸಾಧ್ಯವಾಗದಿರು ವಂತಹ ಸಾಮಾಜಿಕ ಸ್ಥಿತಿಯಲ್ಲಿ ಮಹಿಳೆಯ ರಾಜಕೀಯ ಭಾಗವಹಿಸುವಿಕೆಯನ್ನು ಗಮನಿಸಿದರೆ, ಅದು ತುಂಬ ಕಡಿಮೆ ಎಂದು ಲೇಖಕರು ಅಭಿಪ್ರಾಯ ವ್ಯಕ್ತಪಡಿಸುತ್ತಾರೆ. ನೇರವಾಗಿ ಮಹಿಳೆಯರ ಭಾಗವಹಿಸುವಿಕೆ ತೀರಾ ಕಡಿಮೆ. ರಾಜಕೀಯವಾಗಿ ಭಾಗವಹಿಸುವ ಮಹಿಳೆಯರು ಹಲವು ಅಂಶಗಳಿಂದ ಪ್ರಭಾವಿತರಾದಂತೆ ಕಂಡುಬರುತ್ತದೆ. ಯಾವ ಸಮುದಾಯದ ಜಾತಿ, ಮಹಿಳೆಯರು ಹೆಚ್ಚು ಹೆಚ್ಚು ಸಂಘ–ಸಂಸ್ಥೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿ ಅವುಗಳ ಉಪಯುಕ್ತತೆ ಪಡೆದವರು ಮಾತ್ರ ಉತ್ತಮ ರಾಜಕೀಯ ಭಾಗವಹಿಸಿಕೆ, ರಾಜಕೀಯ ತೀರ್ಮಾನ ಕೈಗೊಳ್ಳುವ ಸಾಮರ್ಥ್ಯವನ್ನು ಹೊಂದಿರುತ್ತಾರೆ. ಈ ಅಧ್ಯಯನದಲ್ಲಿ ರಾಜಕೀಯ ಪಾಲ್ಗೊಳ್ಳುವಿಕೆಗೆ ಶಿಕ್ಷಣ ಮತ್ತು ಸಮಾಜೋ ಆರ್ಥಿಕ ಅಂಶಗಳ ಜೊತೆಯಲ್ಲಿ ಕೌಟುಂಬಿಕ ಸ್ಥಿತಿಗತಿ ಪ್ರಮುಖವಾದ ಕಾರಣಗಳಾಗುತ್ತವೆ ಎಂದು ವಿವರಿಸಿದ್ದಾರೆ.[೫೮]

೫೭. Panna Wignaraja ಅವರ **Towards praxis and pasticipatory development** ಎಂಬ ಲೇಖನದಲ್ಲಿ ದಲಿತರ, ಪರಿಶಿಷ್ಟ ಜಾತಿ ಸಮುದಾಯಗಳ ಹಿಂದಿನ ಸ್ಥಿತಿಗತಿಗಳು;

ಅವರ ರಾಜಕೀಯ ಭಾಗವಹಿಸುವಿಕೆ ಮತ್ತು ರಾಜಕೀಯ ಅಧಿಕಾರಗಳಿಂದ ದೂರ ಉಳಿದಿರುವುದರ ಬಗ್ಗೆ ವಿಶ್ಲೇಷಿಸಿದ್ದಾರೆ. ಉತ್ತಮ ರಾಜಕೀಯ ಭಾಗವಹಿಸುವಿಕೆ ಮತ್ತು ರಾಜಕೀಯ ಅಧಿಕಾರವನ್ನು ಪಡೆಯಲು ಅವರು ಹೇಗೆ ಸಫಲರಾದರು ಎಂಬುದನ್ನು ವಿವರಿಸಿದ್ದಾರೆ. ಸುಮಾರು ೭ ದಶಕಗಳ ಹಿಂದೆ ಪರಿಶಿಷ್ಟ ಜಾತಿ ಸಮುದಾಯಗಳು ಸವರ್ಣೀಯರಿಂದ ತೀರಾ ಕೆಳಮಟ್ಟದ ಸಾಮಾಜಿಕ ಬದುಕನ್ನು, ರಾಜಕೀಯ ಅಧಿಕಾರವನ್ನು ಹೊಂದಿದ್ದರು. ಅವರು ಮೂಲಭೂತ ಸೌಲಭ್ಯಗಳಿಂದ, ಆರ್ಥಿಕ ಸಂಪನ್ಮೂಲಗಳಿಂದ ದೂರ ಉಳಿದಿದ್ದರು. ಈ ರೀತಿಯ ಸ್ಥಿತಿಯಲ್ಲಿದ್ದ ತಳ ಜಾತಿ ಸಮುದಾಯಗಳು ಕಡಿಮೆ ಆದಾಯ ಹೊಂದಿರುವ ಸಮುದಾಯಗಳ ಅಭಿವೃದ್ಧಿಗೆ ತೆರೆದುಕೊಂಡಿದ್ದು ಮಾರುಕಟ್ಟೆ ವ್ಯವಸ್ಥೆಯ ಪರಿಚಯದಿಂದ. ತಳಸಮುದಾಯಗಳು ಮಾರುಕಟ್ಟೆ ಮತ್ತು ತಂತ್ರಜ್ಞಾನದ ಅರಿವು ಪಡೆಯುವುದರ ಮೂಲಕ ಸಾಮಾಜಿಕ ಸಮಸ್ಯೆಗಳು ದೂರವಾಗುತ್ತ ಹೋಯಿತು. ದಲಿತರ ಬೆಳೆಗಳಿಗೆ ಮಾರುಕಟ್ಟೆಯ ಮರು ಅವಕಾಶ, ಸಾರಿಗೆ ಅವಕಾಶಗಳು ದೊರೆತ ಕಾರಣದಿಂದ ಸ್ಥಳೀಯ ಯಜಮಾನಿಕೆ, ದಬ್ಬಾಳಿಕೆಯಿಂದ ಹೊರಬಂದು ಉತ್ತಮ ಆರ್ಥಿಕ ಸವಲತ್ತುಗಳನ್ನು ಪಡೆದರು. ಆ ಮೂಲಕ ದಲಿತರ ಆರ್ಥಿಕ ಸ್ಥಿತಿಗಳನ್ನು ಸುಧಾರಿಸ ಬಹುದು. ದಲಿತರು ರಾಜಕೀಯ ಅಧಿಕಾರವನ್ನು ಪಡೆಯಲು ಸಬಲೀಕರಣಗೊಂಡರು ಮತ್ತು ಸ್ವಯಂಜ್ಞಾನ ಪಡೆದರು ಎಂದು ಲೇಖಕರು ವಿವರಿಸಿದ್ದಾರೆ. ಈ ರೀತಿಯ ಚಟುವಟಿಕೆಗಳಿಂದ ದಲಿತರು ಸವರ್ಣೀಯರಿಗಿಂತ ಪ್ರಬಲವಾಗಿ ಸಂಘಟಿತರಾದರು. ಈ ಸಂಘಟನೆ ಅವಕಾಶವು ಭಾಗವಹಿಸುವಿಕೆಯಿಂದ ಸಾಧ್ಯವಾಯಿತು. ಎಲ್ಲಿಯವರೆಗೆ ದಲಿತರು ಮಾರುಕಟ್ಟೆಯಲ್ಲಿ ಭಾಗವಹಿಸದೇ ಹೊರಗೆ ಉಳಿದಿದ್ದರೋ ಅಲ್ಲಿಯವರೆಗೆ ಅವರ ಆರ್ಥಿಕ ಸ್ಥಿತಿ ಸುಧಾರಿಸಿಲ್ಲ. ಶಿಕ್ಷಣವನ್ನು ಪಡೆಯುವುದರ ಮೂಲಕ ಸಮಸ್ಯೆಗೆ ಪರಿಹಾರ ಕಂಡುಕೊಂಡು ಉತ್ತಮ ಬದುಕು ನಡೆಸಲು ಸಮರ್ಥರಾದರು. ರಾಜಕೀಯ ಪಕ್ಷಗಳಲ್ಲಿ, ಮತದಾನದಲ್ಲಿ, ಸಂಘಟನೆಗಳಲ್ಲಿ, ಸಂಘ–ಸಂಸ್ಥೆಗಳಲ್ಲಿ ಭಾಗವಹಿಸುವುದರಿಂದ ದಲಿತರು ರಾಜಕೀಯ ಅಧಿಕಾರಗಳನ್ನು ಪಡೆಯಲು ಸಾಧ್ಯವಾಯಿತು. ರಾಜಕೀಯ ನಿರ್ಧಾರಗಳನ್ನು ತೆಗೆದುಕೊಳ್ಳುವ ಕಾನೂನುಗಳನ್ನು ನಿಯಂತ್ರಿಸುವ ಮತ್ತು ರೂಪಿಸು ವಂತಹ ಸ್ಥಿತಿಗೆ ತಳಜಾತಿ ಸಮುದಾಯಗಳು ಬಂದವು ಎಂದು ಲೇಖನದಲ್ಲಿ ಚರ್ಚಿಸಿದ್ದಾರೆ.[೫೯]

೫೮. M.P. Boraian ಅವರು **Projects, peoples and participation** ಎಂಬ ಲೇಖನ ದಲ್ಲಿ ಯೋಜನೆಗಳನ್ನು ಎರಡು ವಿಧವಾಗಿ ವಿಂಗಡಿಸಿದ್ದಾರೆ. ಅವು ದೊಡ್ಡ ಯೋಜನೆಗಳು ಮತ್ತು ಸಣ್ಣ ಯೋಜನೆಗಳು. ಯೋಜನೆಗಳ ಗಾತ್ರವನ್ನು ಆಧರಿಸಿಕೊಂಡು ಯಶಸ್ಸು ದೊರಕುತ್ತದೆ ಎಂದು ವಿವರಿಸುತ್ತಾರೆ. ಬೃಹತ್ ಯೋಜನೆಗಳು ಹೆಚ್ಚು ಹಣಕಾಸು ವ್ಯವಸ್ಥೆಯಿಂದ ಕೂಡಿರುತ್ತದೆ. ಈ ಯೋಜನೆಗಳಲ್ಲಿ ನಿಖರವಾದ ಒಂದು ಗುಂಪಿಗೆ, ಸಮುದಾಯಕ್ಕೆ ಯೋಜನಾ ವ್ಯಾಪ್ತಿ

ಸೀಮಿತಗೊಳಿಸಿದ್ದು ಈ ಯೋಜನೆಗಳಿಗೆ ಗುರಿ ಮತ್ತು ಉದ್ದೇಶ ನಿಖರತೆಯಿಂದ ಕೂಡಿದ್ದಾಗಿರುತ್ತದೆ. ಫಲಾನುಭವಿಗಳು ಸಕ್ರಿಯವಾಗಿ ಭಾಗವಹಿಸಿ ಬೃಹತ್ ಯೋಜನೆಯಿಂದ ದೀರ್ಘಕಾಲಿನ ವ್ಯವಹಾರ ಮಾಡುವುದರಿಂದ ಮತ್ತು ಭಾಗವಹಿಸುವುದರಿಂದ ಬೃಹತ್ ಯೋಜನೆಗಳಲ್ಲಿ ಜನರ ಭಾಗವಹಿಸುವಿಕೆ ಉತ್ತಮವಾಗಿರುತ್ತದೆ. ಯೋಜನೆಗಳು ಸಕ್ರಿಯವಾಗಿ ಯಶಸ್ವಿಗೊಳ್ಳುತ್ತವೆ. ಚಿಕ್ಕ ಯೋಜನೆ ಅಥವಾ ಅಲ್ಪಕಾಲೀನ ಯೋಜನೆಗಳು ಸಣ್ಣ ಹಣಕಾಸಿನ ವ್ಯವಹಾರವನ್ನು ಹೊಂದಿರುತ್ತವೆ. ಅಲ್ಪಾವಧಿಯ ಯೋಜನೆಗಳಾಗಿರುವುದರಿಂದ ಯೋಜನೆಗೆ ಸಂಬಂಧಿಸಿದಂತೆ ಸಭೆ ಸೇರುವುದು ಕಡಿಮೆ. ಫಲಾನುಭವಿಗಳಿಗೆ ಯೋಜನೆಯಿಂದ ಫಲಿತಾಂಶ ಬರುವ ಸಮಯಕ್ಕೆ ಯೋಜನೆಗಳು ಮುಕ್ತಾಯಗೊಳ್ಳುವುದರಿಂದ ಜನರ ಭಾಗವಹಿಸುವಿಕೆ ಕಡಿಮೆ ಇರುತ್ತದೆ. ಯೋಜನೆ ಅಥವಾ ಯಾವುದೇ ನಿಯಮಗಳು ಜನರು ಹೆಚ್ಚು ಕಾಲ ಒಳಗೊಳ್ಳುವಂಥ ಅವಧಿಯವಾಗಿರಬೇಕು. ಭಾಗವಹಿಸುವಿಕೆಯಿಂದ ಜನರ ಆರ್ಥಿಕ ರಾಜಕೀಯ ಸ್ಥಿತಿಗತಿಗಳು ಬದಲಾಗಬೇಕು ಎಂಬ ಅಂಶಗಳನ್ನು ಈ ಲೇಖನದಲ್ಲಿ ವಿವರಿಸಿದ್ದಾರೆ.[೬೦]

೫೯. Katar Singh ಅವರ **Implementing Rural Development programmes** ಎಂಬ ಲೇಖನದಲ್ಲಿ ಗ್ರಾಮೀಣ ಅಭಿವೃದ್ಧಿ ಯೋಜನೆಗಳ ಯಶಸ್ಸಿಗೆ ಬೇಕಾಗಿರುವ ಅಂಶಗಳನ್ನು ಮತ್ತು ಯೋಜನೆಗಳ ವಿಫಲತೆಗೆ ಕಾರಣಗಳನ್ನು ಗುರುತಿಸಲಾಗಿದೆ. ತಾಂತ್ರಿಕ ಅಂಶಗಳು, ಹಣಕಾಸಿನ ಅಂಶಗಳು, ಮಾರುಕಟ್ಟೆ, ಸಾಮಾಜಿಕ-ಸಾಂಸ್ಕೃತಿಕ ಮತ್ತು ರಾಜಕೀಯ ಅಂಶಗಳು, ಯೋಜನೆಯ ನಿರ್ವಹಣಾ ಅಂಶಗಳು, ಜನರ ಭಾಗವಹಿಸುವಿಕೆ, ಸಂಯೋಜನೆ ಮಾಡುವ ಸಾಮರ್ಥ್ಯ ಈ ಎಲ್ಲಾ ಅಂಶಗಳು ಸಕ್ರಿಯವಾಗಿ ನಡೆದರೆ ಅಥವಾ ನಿರ್ವಹಿಸಿದರೆ ಗ್ರಾಮೀಣ ಅಭಿವೃದ್ಧಿ ಯೋಜನೆಗಳು ಯಶಸ್ವಿಯಾಗಲು ಸಾಧ್ಯವಾಗುತ್ತದೆ. ಈ ಮೇಲಿನ ಅಂಶಗಳು ನಿರ್ವಹಣೆಯಾಗದಿದ್ದರೆ ಯೋಜನೆಗಳು ವಿಫಲಗೊಳ್ಳುತ್ತವೆ. ಅದರ ಜೊತೆಯಲ್ಲಿ ಯೋಜನೆ ಅಥವಾ ಗ್ರಾಮಸಭೆ, ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲು ಬೇಕಾಗಿರುವ ಸಾಮಗ್ರಿಗಳ ಸಮಸ್ಯೆ ಇದ್ದರೆ ಯೋಜನೆಗಳು ಯಶಸ್ವಿಯಾಗುವುದಿಲ್ಲ. ೧. ಯೋಜನೆಗಳ ಸಕ್ರಿಯ ನಿರ್ವಹಣೆ ಮತ್ತು ವಿಶ್ಲೇಷಿಸುವ ಸಾಮರ್ಥ್ಯ, ೨. ಅನುಷ್ಠಾನಗೊಳಿಸುವ ನುರಿತ ಅನುಭವಿ ತಂಡ ಅಥವಾ ಸಿಬ್ಬಂದಿ, ೩. ಯೋಜನೆಯ ಸರಳೀಕರಿಸಿ ಸುವ್ಯವಸ್ಥಿತವಾಗಿ ಆಗುವುದಿಲ್ಲ ಎಂಬ ಚರ್ಚೆ, ಹೀಗೆ ಈ ಚರ್ಚೆಗಳನ್ನು ಒಪ್ಪಿಕೊಳ್ಳುತ್ತಾ ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಗ್ರಾಮಸಭೆಯು ಸಕ್ರಿಯವಾಗಿ ಜಾರಿಗೊಳ್ಳದಿರಲು ಕಂಡುಬಂದ ಅಂಶಗಳ ಬಗ್ಗೆ ಲೇಖಕರು ವಿಶ್ಲೇಷಿಸಿದ್ದಾರೆ.[೬೧]

೬೦. K.H.Menjor Singh ಅವರು **Participatory way of Rural Development** ಎಂಬ ಅಧ್ಯಾಯದಲ್ಲಿ ಲೇಖಕರು ಭಾಗವಹಿಸುವಿಕೆಯನ್ನು ಎರಡು ಬಗೆಯಲ್ಲಿ ವಿವರಿಸಿದ್ದಾರೆ. ಅಭಿವೃದ್ಧಿ ಯೋಜನೆಗಳ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವಲ್ಲಿ ಅಧಿಕಾರಿಗಳು, ಸಿಬ್ಬಂದಿಯ ಭಾಗವಹಿಸುವಿಕೆ, ಯೋಜನೆಯ ತಯಾರಿಕೆಯಲ್ಲಿ ತಜ್ಞರ ಭಾಗವಹಿಸುವಿಕೆ ಯೋಜನೆ ಅನುಷ್ಠಾನಕ್ಕೆ ಸೂಕ್ತ ಅವಕಾಶ ಮಾಡಿಕೊಡುತ್ತದೆ. ಎರಡನೆಯದಾಗಿ ಯೋಜನೆಯು ಅಭಿವೃದ್ಧಿಯ ದೃಷ್ಟಿ ಕೋನದಿಂದ ಸಿದ್ಧಗೊಂಡಿದ್ದರೆ ಆ ಗುಂಪಿನ ಜನರ ಭಾಗವಹಿಸುವಿಕೆಯಿಂದ ಅಭಿವೃದ್ಧಿ ಯೋಜನೆಗಳು ಯಶಸ್ವಿಯಾಗುತ್ತವೆ ಎಂದು ವಿವರಿಸಿದ್ದಾರೆ. ಗ್ರಾಮೀಣ ಅಭಿವೃದ್ಧಿ ಯೋಜನೆಗಳು ಬಡತನ ನಿರ್ಮೂಲನೆಗೆ ಸಂಬಂಧಿಸಿದ ಹಲವು ಯೋಜನೆ ತಯಾರಿಕೆಯಲ್ಲಿ, ಯೋಜನೆ ಅನುಷ್ಠಾನದಲ್ಲಿ ಆಡಳಿತ ಸಮಸ್ಯೆಗಳ ಜೊತೆಯ ಭಾಗವಹಿಸುವಿಕೆ ಕೊರತೆಯು ಪ್ರಧಾನ ಅಂಶವಾಗಿ ಕಂಡುಬರುತ್ತದೆ. ಜನರು ಗ್ರಾಮೀಣ ಅಭಿವೃದ್ಧಿಯ ಫಲಾನುಭವವನ್ನು ಪಡೆಯಲು ಗ್ರಾಮಸಭೆಗಳಲ್ಲಿ ಭಾಗವಹಿಸಿ ತಮಗೆ ಬೇಕಾದ ಮಾಹಿತಿಯನ್ನು ಪ್ರಶ್ನೆಗಳ ಮುಖಾಂತರ ಉತ್ತರವನ್ನು, ಸವಲತ್ತುಗಳನ್ನು ಪಡೆಯಬಹುದಾಗಿದೆ. ೧೯೯೩ರ ಮಾನವ ವರದಿಯ ಪ್ರಕಾರ ಶೇ.೯೦ ಬಹುಪಾಲು ತಳಸಮುದಾಯಗಳು ಅಭಿವೃದ್ಧಿ ಯೋಜನೆಗಳಿಂದ ದೂರ ಉಳಿದಿದ್ದಾರೆ. ಗ್ರಾಮೀಣ ತಳಸಮುದಾಯಗಳಲ್ಲಿ ಮಹಿಳೆಯರ ಸಂಖ್ಯೆ ಹೆಚ್ಚಾಗಿದೆ. ಭಾರತದಲ್ಲಿ ಇಂದಿಗೂ ಗ್ರಾಮೀಣ ಅಭಿವೃದ್ಧಿಯಲ್ಲಿ ಅಧಿಕಾರ ಮತ್ತು ಆಡಳಿತ ವರ್ಗಗಳ ಪ್ರಭಾವ ಹೆಚ್ಚಾಗಿರುತ್ತದೆ. ಬಡತನ ಹೊಂದಿರುವ ಜನರು ಇಂದಿಗೂ ಅಧಿಕಾರಿಗಳೊಂದಿಗೆ ಚರ್ಚಿಸಿ ಯೋಜನೆಗಳನ್ನು ಪಡೆಯುವುದು ಕಷ್ಟದ ಕೆಲಸವಾಗಿದೆ. ಅದಕ್ಕೆ ಸ್ಥಳೀಯ ಕಛೇರಿಗಳಲ್ಲಿನ ಅಧಿಕಾರ, ಭ್ರಷ್ಟಾಚಾರ ಜನರ ಸಮಸ್ಯೆಗಳನ್ನು ಪರಿಗಣಿಸದೇ ಇರುವ ಮತ್ತು ಗೌರವದಿಂದ ಯೋಜನೆ ನಿರಾಶ್ರಿತರನ್ನು ಕಾಣದೇ ಅಸ್ಪೃಶ್ಯತೆಯನ್ನು ಅನುಸರಿಸುವ ಅಂಶಗಳು ಜನರು ಗ್ರಾಮಸಭೆ, ಆಡಳಿತದಲ್ಲಿ ಭಾಗವಹಿಸಿದೆ ದೂರ ಉಳಿಯುವಂತೆ ಮಾಡಿರುವ ಅಂಶಗಳನ್ನು ಲೇಖಕರು ಗಮನಿಸಿದ್ದಾರೆ.[೨]

೬೧. Dr. M. Jezet Jabanesan, P.Elias ಅವರ **Concept Conventions and cases in unorganised labour Issues** ಎಂಬ ಲೇಖನದಲ್ಲಿ ಅಸಂಘಟಿತ ಕಾರ್ಮಿಕರ ಸಾಮಾಜಿಕ ಭದ್ರತೆ ಮತ್ತು ಅವರ ಸಾಮಾಜಿಕ ಸಮಸ್ಯೆಗಳ ಕುರಿತು ಚರ್ಚಿಸಲಾಗಿದೆ. ದೇಶದ ಆರ್ಥಿಕತೆಯಲ್ಲಿ ಅಸಂಘಟಿತ ವಲಯದಲ್ಲಿ ದುಡಿಯುವವರ ಸಂಖ್ಯೆ ಬಹುದೊಡ್ಡದಾಗಿದೆ. ಹೆಚ್ಚು ಆದಾಯ ಹೊಂದಿರುವ ರಾಷ್ಟ್ರಗಳಲ್ಲಿ ಅಸಂಘಟಿತ ವಲಯದಲ್ಲಿನ ಕಾರ್ಮಿಕರ ಕೆಲಸದ ಒತ್ತಡ ಕಡಿಮೆ ಇದೆ. ಕಡಿಮೆ ಆದಾಯ ಹೊಂದಿರುವ ರಾಷ್ಟ್ರಗಳಲ್ಲಿ ಅತಿ ಹೆಚ್ಚು ಅಸಂಘಟಿತ ವಲಯದ ಕಾರ್ಮಿಕರ ಕೆಲಸದ ಒತ್ತಡ ಹೆಚ್ಚಾಗಿದೆ. ಮಧ್ಯಮ ಆದಾಯ ತರುವಂಥ ಭಾರತದಂಥ ದೇಶಗಳಲ್ಲಿ ಅಸಂಘಟಿತ ಕಾರ್ಮಿಕರ ಕೆಲಸದ ಒತ್ತಡ ಹೆಚ್ಚಾಗಿದೆ. ಕನಿಷ್ಠ ಜೀವನಮಟ್ಟವನ್ನು

ಅವರು ಅನುಭವಿಸುತ್ತಿದ್ದಾರೆ. ಭಾರತದಲ್ಲಿ ಕೇರಳ ಮತ್ತು ತಮಿಳು ನಾಡು ರಾಜ್ಯಗಳಲ್ಲಿ ಈ ಅಸಂಘಟಿತ ವಲಯದ ಕಾರ್ಮಿಕರಿಗೆ ಸಾಮಾಜಿಕ ಭದ್ರತೆ ನೀಡುವ, ಕೆಲಸ, ವೇತನಕ್ಕೆ ಸಂಬಂಧಿಸಿದಂತೆ ಭದ್ರತೆಯನ್ನು ಒದಗಿಸಿದೆ. ಕರ್ನಾಟಕದಂಥ ಕಡಿಮೆ ಸಾಕ್ಷರತೆ ಹೊಂದಿರುವ ರಾಜ್ಯಗಳಲ್ಲಿ ಜಾಗತಿಕ ಆರ್ಥಿಕ ನೀತಿಯಿಂದ ಅಸಂಘಟಿತ ಕಾರ್ಮಿಕರು ಅಸುರಕ್ಷತೆಯ ಕಡೆಗೆ, ಅಭದ್ರತೆಯ ಕಡೆಗೆ ದೂಡಲ್ಪಟ್ಟಿದ್ದಾರೆ. ರಕ್ಷಣೆ ಇಲ್ಲದಂತಹ ಕೆಳದರ್ಜೆ ಕೆಲಸಗಳಿಗೆ ಕಡಿಮೆ ಆದಾಯದ ಕಡೆಗೆ ಅಸಂಘಟಿತ ಕಾರ್ಮಿಕರನ್ನು ದೂಡುತ್ತಿದೆ. ನಗರ ಪ್ರದೇಶಗಳಿಗೆ ಹತ್ತಿರ ಇರುವ ಬಹುಪಾಲು ಕಾರ್ಮಿಕರು ಅಸಂಘಟಿತ ವಲಯದಲ್ಲಿ ದುಡಿಯುತ್ತಿದ್ದು, ಅವರಲ್ಲಿ ಆರ್ಥಿಕ ಸಾಮಾಜಿಕ ಭದ್ರತೆ ಇಲ್ಲ. ಕಡಿಮೆ ಆದಾಯದ ಹೊಂದಿರುವ ಕಾರಣದಿಂದ ಗ್ರಾಮೀಣ ಪ್ರದೇಶದಲ್ಲಿರುವ ಬಹುಪಾಲು ಗ್ರಾಮೀಣ ಬಡವರು ತಮ್ಮ ದಿನದ ದುಡಿಮೆಗಾಗಿ ಹೋರಾಟ ನಡೆಸುವ ಸ್ಥಿತಿಯಲ್ಲಿದ್ದಾರೆ. ಹಾಗಾಗಿ ಗ್ರಾಮಸಭೆಗಳಲ್ಲಿ ಭಾಗವಹಿಸುವಿಕೆ ಮತ್ತು ಹಕ್ಕುಗಳ ಪಡೆಯುವ ಪ್ರಯತ್ನಗಳನ್ನು ಮಾಡುವಷ್ಟು ಸಬಲತೆ ಇಲ್ಲದಿರುವುದು ಕರ್ನಾಟಕದ ಹಲವು ಗ್ರಾಮೀಣ ಅಸಂಘಟಿತ ಕಾರ್ಮಿಕರಲ್ಲಿ ಕಾಣಬಹುದಾಗಿದೆ. ಅಧ್ಯಯನದ ಕ್ಷೇತ್ರದಲ್ಲಿ ಬಹುಪಾಲು ಕೃಷಿ ಕಾರ್ಮಿಕರು, ದಿನಗೂಲಿ ಕಾರ್ಮಿಕರು ವಾಸವಾಗಿದ್ದಾರೆ. ಈ ಮೇಲೆ ಚರ್ಚಿಸಿದ ಅಂಶಗಳು ಈ ಸ್ಥಳೀಯ ಜನರ ಭಾಗವಹಿಸುವಿಕೆ ಮೇಲೆ ಪ್ರಭಾವ ಬೀರಿರುವ ಸಾಧ್ಯತೆಗಳು ಕಂಡುಬರುತ್ತವೆ ಎಂದು ಲೇಖಕರು ವಿಶ್ಲೇಷಿಸುತ್ತಾರೆ.[೬೩]

೬೨. **Jean Dreze, Amartyasen** ಅವರ **India Economic Development and Social Opportunity, Local Government and Social Reform** ವಿಷಯ ಕುರಿತು ಚರ್ಚಿಸುತ್ತಾ ಭಾರತದಲ್ಲಿನ ಸಾಮಾಜಿಕ ಸ್ಥಿತಿಗತಿ ಮತ್ತು ರಾಜಕೀಯ ಅಧಿಕಾರಗಳು ನಿರೀಕ್ಷಿತ ಮಟ್ಟದಲ್ಲಿ ಕಂಡುಬರುವುದಿಲ್ಲ ಎಂದಿದ್ದಾರೆ. ಸ್ಥಳೀಯ ಗ್ರಾಮೀಣ ಆಡಳಿತ, ರಾಜಕೀಯ ಅಧಿಕಾರಿಗಳು ಸಾರ್ವಜನಿಕರ ಅಭಿಪ್ರಾಯದಿಂದ ನಡೆಯಲು ಜನರಲ್ಲಿ ಶಿಕ್ಷಣ ಅವಶ್ಯಕತೆ ಮತ್ತು ರಾಜಕೀಯ ಅವಕಾಶಗಳ ಅವಶ್ಯಕತೆ ಪ್ರಮುಖವಾಗಿ ಕಂಡುಬರುತ್ತದೆ. ರಾಜಕೀಯ ಅವಕಾಶಗಳಿಂದ ಸಮುದಾಯದಲ್ಲಿ ರಾಜಕೀಯ ಪ್ರಜ್ಞೆ, ಅಧಿಕಾರದ ಅರಿವು ಉಂಟಾಗುತ್ತದೆ. ಇದರಿಂದ ಸ್ಥಳೀಯ ಸರ್ಕಾರದಿಂದ ಸವಲತ್ತುಗಳನ್ನು ಪಡೆಯಲು ಅವಕಾಶವಾಗುತ್ತದೆ. ಅನೌಪಚಾರಿಕ ಮತ್ತು ಔಪಚಾರಿಕವಾದ ಶಿಕ್ಷಣಗಳು ಜನರಿಗೆ ತಮ್ಮ ಹಕ್ಕು ಸ್ವಾತಂತ್ರ್ಯಗಳ ಬಗ್ಗೆ ಅರಿವು ನೀಡುತ್ತವೆ. ರಾಜಕೀಯ ಸಬಲೀಕರಣಕ್ಕೆ ಅವಕಾಶವನ್ನು ಮಾಡಿಕೊಡುತ್ತವೆ.[೬೪]

೬೩. Hasahat Abdul(Ed), ಅವರ **Governor South Asian Perspective,** 'local Gover- nor for Goud governanee Experience in Andhra Pradesh' ಎಂಬ ಲೇಖನದಲ್ಲಿ ಆಂಧ್ರ ಪ್ರದೇಶ ೧೯೯೪ರಲ್ಲಿ ೭೩ನೇ ತಿದ್ದುಪಡಿ ಕಾಯ್ದೆಯನ್ನು ಅನುಷ್ಠಾನಕ್ಕೆ ತಂದಿತ್ತು ಎಂದು

ಗುರುತಿಸಿದ್ದಾರೆ. ಈ ಕಾಯ್ದೆಯಲ್ಲಿ ಪಾರದರ್ಶಕ ಆಡಳಿತ ಕುರಿತು ಹೆಚ್ಚಿನ ಒತ್ತು ನೀಡಲಾಗಿತ್ತು. ಸಾರ್ವಜನಿಕ ಲೆಕ್ಕಪರಿಶೋಧನೆಗೆ ಗ್ರಾಮದ ಪಂಚಾಯಿತಿಯ ಸದಸ್ಯರು, ಗ್ರಾಮಪಂಚಾಯಿತಿಯ ಎಲ್ಲಾ ಮತದಾರರು ಈ ಲೆಕ್ಕಪರಿಶೋಧನಾ ಸಭೆಯ ಸದಸ್ಯರಾಗಿರುತ್ತಾರೆ. ಈ ಸಭೆಯಲ್ಲಿ ಗ್ರಾಮಪಂಚಾಯಿತಿಯ ಆಡಳಿತ ದಾಖಲೆಗಳ ಮಾಹಿತಿಯನ್ನು ಸಾರ್ವಜನಿಕರಿಗಾಗಿ ಪ್ರಕಟಿಸಬೇಕು. ಸಾರ್ವಜನಿಕ ಸಮಸ್ಯೆಗಳನ್ನು ಮತ್ತು ಕೆಲಸಗಳನ್ನು ಕುರಿತು ಸಭೆಯು ಚರ್ಚೆ ನಡೆಸಿ ಸಾರ್ವಜನಿಕ ಲೆಕ್ಕ ಪರಿಶೋಧನೆ ನಡೆಸುವುದರಿಂದ ವರ್ಷದಿಂದ ವರ್ಷಕ್ಕೆ ಗ್ರಾಮ ಪಂಚಾಯಿತಿಗಳ ಆಡಳಿತ ವನ್ನು ಪರಾಮರ್ಶಿಸಿ ಕಾರ್ಯ ನಿರ್ವಹಿಸಲು ಸಹಕಾರಿಯಾಗುತ್ತದೆ. ಗ್ರಾಮಸಭಾ ಮತ್ತು ಸಾಮಾಜಿಕ ಜಮಾಬಂದಿ ಗ್ರಾಮಸಭೆಯಿಂದ ಗ್ರಾಮಪಂಚಾಯಿತಿಗಳ ಆಡಳಿತ ಹೆಚ್ಚು ವಿಕೇಂದ್ರೀಕರಣ ಗೊಳ್ಳುವುದನ್ನು ಲೇಖಕರು ವಿವರಿಸಿದ್ದಾರೆ.[೬೪]

೬೪. Rehman Sobhan ಅವರ **Reprioritising South Asia's Development Agenda: Role of Governor** ಈ ಲೇಖನದಲ್ಲಿ Transparency and a contribitityಗಳು ಒತ್ತಡ ಆಡಳಿತವನ್ನು ಗುರುತಿಸುವಂಥ ಮಾನದಂಡಗಳಿಗೆ ಪ್ರಾಮಾಣಿಕ ಮತ್ತು ಪಾರದರ್ಶಕ ಆಡಳಿತ ವ್ಯವಸ್ಥೆ ಪಾರ್ಲಿಮೆಂಟಿನಿಂದ ಪ್ರಾರಂಭಗೊಂಡ ಗ್ರಾಮಪಂಚಾಯಿತಿಯ ಆಡಳಿತದವರೆಗೆ ಹೆಚ್ಚು ಪರಿಣಾಮಕಾರಿಯಾಗಿ ಕೆಲಸ ಮಾಡುತ್ತದೆ. ಪಾರ್ಲಿಮೆಂಟಿನ ಚುನಾವಣೆಗಳಲ್ಲಿ ಪಾರ್ಲಿಮೆಂಟಿನ ಸದಸ್ಯರ ಆಯ್ಕೆಗಾಗಿ ಮತದಾನದ ದಿನಗಳಲ್ಲಿ ಸಾರ್ವಜನಿಕರು ಅಭ್ಯರ್ಥಿಗಳಿಗೆ ಪ್ರಾಮಾಣಿಕ ಮತ್ತು ಪಾರದರ್ಶಕವಾಗಿ ಮತ ಚಲಾಯಿಸುತ್ತಾರೆ. ಪ್ರತಿ ಹಂತದಲ್ಲಿ ಸರ್ಕಾರಗಳ ಉತ್ತರಾಧಿಕಾರತ್ವ ಪ್ರಾಮಾಣಿಕ ಆಡಳಿತದಿಂದ ಜನ ವಿಶ್ವಾಸ ಗಳಿಸಿ ಮುಂದೆ ಸಾಗಲು ಸಾಧ್ಯವಾಗುತ್ತದೆ. ಶ್ರೀಲಂಕಾ, ಭಾರತ ಮತ್ತು ಬಾಂಗ್ಲಾದೇಶಗಳಲ್ಲಿ ಕೇಂದ್ರ ಸರ್ಕಾರಗಳು ಪಾರದರ್ಶಕ ಮತ್ತು ಪರಿಣಾಮಾತ್ಮಕ ಆಡಳಿತ ನಡೆಸುವಂಥ ಕ್ರಮಗಳನ್ನು ಜಾರಿಗೆ ತಂದು ಜನರ ಮನ್ನಣೆ ಪಡೆದಿರುವ ಉದಾಹರಣೆಗಳು ಕಂಡುಬರುತ್ತವೆ. ಪಾರದರ್ಶಕ ಮತ್ತು ಪರಿಣಾಮಾತ್ಮಕ ಆಡಳಿತದಿಂದ ಪ್ರಜಾಪ್ರಭುತ್ವ ಸರ್ಕಾರಗಳನ್ನು ಹೆಚ್ಚು ಪ್ರಭಾವಿತಗೊಳಿಸಲು ಸಾಧ್ಯವಾಗುತ್ತದೆ ಎಂದು ಲೇಖಕರು ವಿವರಿಸಿದ್ದಾರೆ.[೬೬]

೬೫. Xiaohongzhou, ಅವರ **Rural Political Participation in the Maoist and post Mao-periods** ಲೇಖನದಲ್ಲಿ ಎರಡು ಕಾಲಾವಧಿಯ ಅಥವಾ ಸರ್ಕಾರಗಳ ಅವಧಿಗಳಲ್ಲಿ ಚೀನಾದಲ್ಲಿ ಗ್ರಾಮೀಣ ಸಬಲೀಕರಣ ಮತ್ತು ರಾಜಕೀಯದ ಭಾಗವಹಿಸುವಿಕೆ ಕುರಿತು ಚರ್ಚಿಸಿದ್ದಾರೆ. Maoist ಕಾಲಾವಧಿಯಲ್ಲಿ ಚೀನಾದ ಗ್ರಾಮೀಣ ಜನರ ಜೀವನಮಟ್ಟವನ್ನು ರಾಜ್ಯಗಳು ನಿರ್ಧರಿಸು ತ್ತಿದ್ದವು. ಈ ಅವಧಿಯಲ್ಲಿ ಹಳ್ಳಿಯ ಸರ್ಕಾರಗಳನ್ನು ಪರಾಭವಗೊಳಿಸಿ ಹೊಸ ಸರ್ಕಾರ ಆಡಳಿತಕ್ಕೆ ತಂದಿರುವುದು ಗ್ರಾಮೀಣ ಪ್ರದೇಶದ ಜನರಲ್ಲಿರುವ ರಾಜಕೀಯದಲ್ಲಿ ಭಾಗವಹಿಸುವಿಕೆ

ಯನ್ನು ಸೂಚಿಸುತ್ತದೆ. ಸ್ಥಳೀಯ ಸರ್ಕಾರಗಳು ರಾಜ್ಯದ ಅಧೀನದಲ್ಲಿ ಹೆಚ್ಚು ಇರಬೇಕಾಗಿತ್ತು. ಸ್ಥಳೀಯ ಸರ್ಕಾರಗಳಲ್ಲಿ ಆಡಳಿತಾತ್ಮಕ ರಾಜಕೀಯ ಸಮಸ್ಯೆಗಳು ಉಂಟಾದಲ್ಲಿ ರಾಜ್ಯ ಸರ್ಕಾರವು ಸ್ಥಳೀಯ ಸರ್ಕಾರಗಳನ್ನು ತನ್ನ ವಶಕ್ಕೆ ತೆಗೆದುಕೊಳ್ಳುತ್ತಿತ್ತು. Post-Mao periodನಲ್ಲಿ ಚೀನಾ ಗ್ರಾಮೀಣ ಜನರ ಜೀವನ ಅವರ ಕೈಯಲ್ಲಿ ಇರುತ್ತಿತ್ತು. ಸ್ಥಳೀಯ ಸರ್ಕಾರಗಳು ಸ್ಥಳೀಯ ಜನರ ಅಧೀನದಲ್ಲಿರುತ್ತಿತ್ತು. ಗ್ರಾಮೀಣ ಸ್ಥಳೀಯ ಸರ್ಕಾರಗಳು ಆರ್ಥಿಕ ಸದೃಢತೆಯನ್ನು ಹೊಂದಿದ್ದು, ರಾಜ್ಯ ಸರ್ಕಾರವು ಚೀನಾ ಸ್ಥಳೀಯ ಸರ್ಕಾರಗಳಿಗೆ ಹಣಕಾಸಿನ ಆರ್ಥಿಕ ಸಬಲೀಕರಣಗೊಳಿಸುವುದಕ್ಕೆ ಅಧಿಕಾರಗಳನ್ನು ನೀಡಿತ್ತು. ಉತ್ಪಾದನೆ, ನಿರ್ವಹಣಾ ಅಧಿಕಾರ, ರಾಜಕೀಯ, ಸಾಂಸ್ಕೃತಿಕ, ಸಾಮಾಜಿಕ, ಆರ್ಥಿಕವಾಗಿ ಭಾಗವಹಿಸುವಿಕೆಯಲ್ಲಿ ಎಲ್ಲಾ ವರ್ಗಗಳಿಗೆ ಎಲ್ಲಾ ರಾಜಕೀಯ ಹಿಂದುಳಿದ ಸಮುದಾಯಗಳಿಗೆ, ವ್ಯಕ್ತಿಗಳಿಗೆ ಮುಕ್ತ ಅವಕಾಶಗಳನ್ನು ಕಲ್ಪಿಸಿತು. ಅವರ ಸಾಮರ್ಥ್ಯ, ಅನುಭವ, ಶಿಕ್ಷಣ, ರಾಜಕೀಯದಲ್ಲಿ ಭಾಗವಹಿಸುವಿಕೆಯ ಆಸಕ್ತಿಗಳನ್ನು ಗುರುತಿಸಿ ಗ್ರಾಮೀಣ ಜನರ ಅಭಿವೃದ್ಧಿಗೆ ಸ್ಥಳೀಯ ಸರ್ಕಾರಗಳಿಗೆ ಹೆಚ್ಚಿನ ಅಧಿಕಾರ ಮತ್ತು ಜನರಿಗೆ ಆಡಳಿತದಲ್ಲಿ ರಾಜಕೀಯ, ಆರ್ಥಿಕ ನಿರ್ವಹಣೆಗಳು ಮುಕ್ತ ಅವಕಾಶವನ್ನು ಕಲ್ಪಿಸಲಾಗಿದೆ. ಹಾಗಾಗಿ Post mao-period ಚೀನಾ ಗ್ರಾಮೀಣ ಸಮಾಜವು ಹೆಚ್ಚು ಆರ್ಥಿಕ, ರಾಜಕೀಯ, ಆಡಳಿತಾತ್ಮಕ ಸಬಲೀಕರಣ ಹೊಂದಿರುವ ಸಮಾಜವಾಗಿರುವುದನ್ನು ಈ ಅಧ್ಯಯನದಲ್ಲಿ ಗಮನಿಸಲಾಗಿದೆ.[೬೬]

೬೬. Vinod K. Jairath and Srinivas Sajja ಅವರ **Negotiating with Empowerment Panchayath Raj in Andhra Pradesh** ಎಂಬ ಲೇಖನದಲ್ಲಿ ಆಂಧ್ರ ಪ್ರದೇಶದ ಅಮನಗಲ್ ಮಂಡಲ ಸ್ಥಳೀಯ ಗ್ರಾಮಪಂಚಾಯಿತಿಗಳಲ್ಲಿ ಸಾಮಾಜಿಕ ಮತ್ತು ರಾಜಕೀಯ ಸೌಲಭ್ಯಗಳು ಹೇಗೆ ಹಂಚಿಕೆಯಾಗಿವೆ ಎಂದು ಚರ್ಚಿಸಿದ್ದಾರೆ. ಈ ಮಂಡಲದಲ್ಲಿ ರೆಡ್ಡಿ ಮತ್ತು ವೆಲಮ ಎಂಬ ಎರಡು ಹಿಂದುಳಿದ ವರ್ಗದ ಜಾತಿಯವರು ಬಹುಸಂಖ್ಯೆಯಲ್ಲಿದ್ದಾರೆ. ಈ ಎರಡೂ ಜಾತಿಗಳಲ್ಲಿ ಭೂ ಒಡೆತನ ಇದೆ. ಪರಿಶಿಷ್ಟ ಜಾತಿಯ ಸಮುದಾಯಗಳಲ್ಲಿ ಭೂ ಒಡೆತನ ಕಡಿಮೆ ಇದೆ. ಹಿಂದುಳಿದ ಜಾತಿಯ ಸಮುದಾಯಗಳು ಇಂದಿಗೂ ಅಸ್ಪೃಶ್ಯತೆಯನ್ನು ಅನುಸರಿಸುತ್ತಾರೆ. ದಲಿತರು, ಪರಿಶಿಷ್ಟ ಜಾತಿ ಮತ್ತು ಪಂಗಡಗಳ ಜಾತಿಗಳು ಮೀಸಲಾತಿಯ ಮತ್ತು ೭೩ನೇ ಕಾಯ್ದೆಯಿಂದ ರಾಜಕೀಯ ಸ್ಥಾನಗಳನ್ನು ಪಡೆದರೂ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಇಂದಿಗೂ ಅಸಮಾನತೆಯನ್ನು ಹೊಂದಿದ್ದಾರೆ. ಗ್ರಾಮಸಭೆಗಳಲ್ಲಿ ಪರಿಶಿಷ್ಟ ಜಾತಿ, ಪಂಗಡದವರ ಭಾಗವಹಿಸುವಿಕೆ ತೀರಾ ಕಡಿಮೆ ಇರುತ್ತದೆ. ಏಕೆಂದರೆ ಬಹುಪಾಲು ಜನ ದಲಿತರು ರೆಡ್ಡಿ ಮತ್ತು ವೆಲಮ ಜಾತಿಯವರ ಹೊಲ–ಗದ್ದೆಗಳಲ್ಲಿ ಕೂಲಿಗೆ ಹೋಗುವುದರಿಂದ ಅವರಿಗೆ ಸವರ್ಣೀಯ ಜಾತಿಯವರ ಸಮಾನವಾಗಿ ರಾಜಕೀಯ ಹಕ್ಕುಗಳು ಸಿಗುತ್ತಿಲ್ಲ.

ಅವರಲ್ಲಿ ಮಾನಸಿಕ ಶಕ್ತಿ ಸಾಮರ್ಥ್ಯ ಮತ್ತು ಆರ್ಥಿಕ ಸಾಮರ್ಥ್ಯ ಇಲ್ಲದಿರುವುದನ್ನು ಗಮನಿಸಬಹುದಾಗಿದೆ. ಈ ಸ್ಥಿತಿ ಕೇರಳ ಮತ್ತು ಪಶ್ಚಿಮ ಬಂಗಾಳ ರಾಜ್ಯಗಳಲ್ಲಿ ಹೆಚ್ಚಾಗಿ ಕಂಡುಬರುವುದಿಲ್ಲ. ಅದಕ್ಕೆ ಈ ರಾಜ್ಯಗಳಲ್ಲಿ ಭೂಸುಧಾರಣೆಗಳಾಗಿರುವುದು ಒಂದು ಕಾರಣವಾಗಿದೆ. ದಲಿತರಿಗೆ ಭೂ ಒಡೆತನ ಇಲ್ಲದೇ ಗ್ರಾಮೀಣ ಪ್ರದೇಶದ ಆರ್ಥಿಕ ಸಬಲೀಕರಣ ಸಾಧ್ಯತೆಗಳು ಕಡಿಮೆ ಇರುತ್ತವೆ. ಹಾಗಾಗಿ ಆಂಧ್ರದ ಭೂರಹಿತ ದಲಿತ ಕಾರ್ಮಿಕರಿಗೆ ಗ್ರಾಮಸಭೆಗಳ ಅರಿವು, ಸಾಮಾಜಿಕ ಜಮಾಬಂದಿ ಸಭೆಗಳ ಅರಿವು ಇಲ್ಲದಿರುವುದು, ಅರಿವು ಇದ್ದರೂ ಭಾಗವಹಿಸಿ ಗ್ರಾಮಪಂಚಾಯಿತಿ ಆಡಳಿತದಿಂದ ಸವಲತ್ತುಗಳನ್ನು ಪಡೆಯುವಂತಹ ಸಾಮರ್ಥ್ಯ ಇಲ್ಲದಿರುವುದು ಕಂಡುಬಂದಿದೆ ಎಂದು ಲೇಖಕರು ವಿವರಿಸಿದ್ದಾರೆ.[೬೮]

೬೭. Manasendu Kundu, ಅವರ **Panchayatiraj of Party Raj Understanding the Nature of Local Government in West Bengal** ಎಂಬ ಲೇಖನದಲ್ಲಿ ಪಶ್ಚಿಮ ಬಂಗಾಳ ರಾಜ್ಯದ ಮಲಯಪುರ್, ಹರಿನ್‌ಕೋಲ್-೧, ಹರಿನ್‌ಕೋಲ್-೨ ಗ್ರಾಮಪಂಚಾಯಿತಿಗಳಲ್ಲಿ ಸಂವಿಧಾನದ ೭೩ನೇ ತಿದ್ದುಪಡಿಯು ದಲಿತರ ರಾಜಕೀಯ ಅಧಿಕಾರಕ್ಕೆ ಸಂಬಂಧಿಸಿದಂತೆ ಎಷ್ಟು ಉಪಯುಕ್ತವಾಗಿದೆ ಮತ್ತು ಗ್ರಾಮಪಂಚಾಯಿತಿಗಳಲ್ಲಿ ಮಹಿಳೆಯರ ಮತ್ತು ಎಸ್.ಸಿ. ಸದಸ್ಯರ ಕರ್ತವ್ಯಗಳ ಕುರಿತು ಚರ್ಚಿಸಲಾಗಿದೆ. ಈ ಗ್ರಾಮಗಳಲ್ಲಿ ೭೩ನೇ ಕಾಯ್ದೆಯ ಅನುಷ್ಠಾನ ಕೇವಲ ಮೀಸಲಾತಿ ಸ್ಥಾನಗಳನ್ನು ಪಡೆಯುವಲ್ಲಿ ಸಫಲತೆ ಕಂಡಿದೆ. ಮೀಸಲಾತಿಯಿಂದ ಆಯ್ಕೆಯಾದ ಸದಸ್ಯರನ್ನು ತಮ್ಮ ನಾಯಕರು ಎಂದು ಸವರ್ಣೀಯರು ಒಪ್ಪಿಕೊಳ್ಳುವುದಿಲ್ಲ. ರಾಜಕೀಯ ಅಧಿಕಾರಕ್ಕಿಂತ ರಾಜಕೀಯ ಪಕ್ಷದಲ್ಲಿ ಗುರುತಿಸಿಕೊಂಡಿರುವ ವ್ಯಕ್ತಿಗಳಿಗೆ ಹೆಚ್ಚಿನ ಗೌರವ ಮಾನ್ಯತೆಗಳು ಸಿಗುತ್ತವೆ. ಸಿಪಿಐಎಂ ರಾಜಕೀಯ ಪಕ್ಷವು ಸ್ಥಳೀಯ ಸರ್ಕಾರಗಳ ಅಧಿಕಾರಗಳನ್ನು ತನ್ನ ಹಿಡಿತದಲ್ಲಿ ಇಟ್ಟುಕೊಂಡಿದೆ. ಹಾಗಾಗಿ ರಾಜಕೀಯ ಹುದ್ದೆಗಳ ರಾಜಕೀಯ ಅಧಿಕಾರವು ಸ್ಥಳೀಯ ಸರ್ಕಾರಗಳಲ್ಲಿ ಅನುಪಯುಕ್ತವಾಗಿರುವುದು ಕಂಡುಬರುತ್ತದೆ. ಎಸ್.ಸಿ. ಜಾತಿ ಸಮುದಾಯಗಳು ಇತರ ಸ್ಥಾಯಿ ಸಮಿತಿಗಳಲ್ಲಿ ಸ್ಥಾನಗಳನ್ನು ಪಡೆದಿಲ್ಲ ಮತ್ತು ಮಹಿಳೆಯರು ರಾಜಕೀಯ ಪಕ್ಷದ ಸದಸ್ಯತ್ವವನ್ನು ಪಡೆದಿಲ್ಲ. ಗ್ರಾಮಪಂಚಾಯಿತಿಗಳಲ್ಲಿ ಇವರ ಸಂಖ್ಯೆ ತೀರ ಕಡಿಮೆ. ಒಂದೆರಡು ಸ್ಥಾನಗಳಿಗೆ ಮಾತ್ರ ಆಯ್ಕೆಯಾಗಿರುವುದು ಕಂಡುಬಂದಿದೆ. ಈ ಅಧ್ಯಯನದಲ್ಲಿ ೭೩ನೇ ಕಾಯ್ದೆ ಅನುಷ್ಠಾನ ಮತ್ತು ರಾಜಕೀಯ ಅಸಮಾನತೆಗಳು ರಾಜಕೀಯ ಅಧಿಕಾರದಿಂದ ಹೇಗೆ ದಲಿತರನ್ನು ದೂರದಲ್ಲಿ ಇರಿಸುತ್ತದೆ ಎಂಬ ಅಂಶಗಳನ್ನು ಚರ್ಚಿಸಿದ್ದಾರೆ.[೬೯]

೬೮. Omar Azfar, ಅವರ **Decentralization in Uganda, Tefferey livingston and Partick Meagher** ಎಂಬ ಈ ಲೇಖನದಲ್ಲಿ ಉಗಂಡಾ ದೇಶದಲ್ಲಿ ಸ್ಥಳೀಯ ಸರ್ಕಾರ

ಮತ್ತು ಅಧಿಕಾರ ಕುರಿತು ಚರ್ಚಿಸಿದ್ದಾರೆ. ಕೇಂದ್ರ ಸರ್ಕಾರಗಳು ಹೆಚ್ಚು ಆಡಳಿತಾತ್ಮಕ, ರಾಜಕೀಯ ಅಧಿಕಾರವನ್ನು ಹೊಂದಿರುತ್ತವೆ. ನಂತರ ಜಿಲ್ಲಾ ಸರ್ಕಾರಗಳು ಜಿಲ್ಲೆಯ ಆಯುಕ್ತರು, ನಂತರ ಸ್ಥಳೀಯ ಸರ್ಕಾರಗಳು ಹೇಗೆ ಅಧಿಕಾರ ವಿಕೇಂದ್ರೀಕರಣಗೊಂಡಿರುತ್ತದೆ ಎಂಬುದನ್ನು ಲೇಖಕರು ವಿವರಿಸಿದ್ದಾರೆ. ಕೇಂದ್ರ ಸರ್ಕಾರ ಜಿಲ್ಲಾಮಟ್ಟದಲ್ಲಿ ಹಿಡಿತ ಸಾಧಿಸುತ್ತದೆ. ಜಿಲ್ಲಾ ಸರ್ಕಾರಗಳು ಸ್ಥಳೀಯ ಸರ್ಕಾರಗಳ ಮೇಲೆ ಅಧೀನತೆ ಹೊಂದಿರುತ್ತವೆ. ಸ್ಥಳೀಯ ಸರ್ಕಾರಗಳು ಹೆಚ್ಚು ಪ್ರಜಾಪ್ರಭುತ್ವ ವ್ಯವಸ್ಥೆಯಿಂದ ಕೂಡಿರುತ್ತವೆ. ಸ್ಥಳೀಯ ಸರ್ಕಾರಗಳ ಚುನಾವಣೆಯಲ್ಲಿ ರಾಜಕೀಯ ಪಕ್ಷ ರಹಿತವಾದ ಚುನಾವಣೆಗಳು ನಡೆಯುತ್ತವೆ. ಗ್ರಾಮೀಣ ಸ್ಥಳೀಯ ಮಟ್ಟದ ಶಿಕ್ಷಣ ಮತ್ತು ಆರೋಗ್ಯ ಸೇವೆಗಳನ್ನು ಸ್ಥಳೀಯ ಸರ್ಕಾರಗಳು ಕೇಂದ್ರದ ಹಣಕಾಸಿನ ಸಹಾಯದಿಂದ ಉತ್ತಮ ಶಿಕ್ಷಣವನ್ನು ಜನರಿಗೆ ಒದಗಿಸುತ್ತವೆ. ಹಾಗೂ ಆರೋಗ್ಯ ಸೇವೆಯನ್ನು ಸ್ಥಳೀಯ ಸರ್ಕಾರಗಳಿಂದ ಜನರಿಗೆ ಸಿಗುತ್ತದೆ. ಇವರ ಶಿಕ್ಷಣಮಟ್ಟ ಉತ್ತಮವಾಗಿದೆ. ಸ್ಥಳೀಯ ರಾಜಕೀಯ ಪ್ರಚಾರ ಉತ್ತಮವಾಗಿರುತ್ತವೆ. ಜನರು ಮಾಧ್ಯಮಗಳನ್ನು ಬಳಸಿಕೊಂಡು ರಾಜಕೀಯ ಪ್ರಚಾರ, ಚರ್ಚೆಗಳನ್ನು ಮಾಡುವುದರ ಮೂಲಕ ಉತ್ತಮ ಸ್ಥಳೀಯ ಸರ್ಕಾರಗಳನ್ನು ರಚಿಸಿ ಕೊಂಡಿವೆ. ಕೇಂದ್ರ ಜಿಲ್ಲಾ ಸರ್ಕಾರಗಳ ಫೆಡರಲ್ ಮಾದರಿಯ ರಾಜಕೀಯ ಆಡಳಿತಾತ್ಮಕ, ಹಣಕಾಸಿನ ಅಧಿಕಾರಗಳ ಮೇಲ್ವಿಚಾರಣೆಯಿಂದಾಗಿ ಸ್ಥಳೀಯ ಸರ್ಕಾರಗಳು ಹೆಚ್ಚು ಪಾರದರ್ಶಕ ವಾಗಿಯೂ ಭ್ರಷ್ಟಾಚಾರರಹಿತವಾಗಿರಲು ಸಾಧ್ಯವಾಗುತ್ತದೆ ಎನ್ನಲಾಗಿದೆ. ಸ್ಥಳೀಯ ಸರ್ಕಾರಗಳ ಹಣಕಾಸಿನ ಜಮಾಬಂದಿ, ಆಡಳಿತಾತ್ಮಕ ಜಮಾಬಂದಿಗಳಿಗೆ ಜಿಲ್ಲಾ ಹಂತದಲ್ಲಿ ಅವಶ್ಯಕವಾದ ಸಿಬ್ಬಂದಿ ಮತ್ತು ತಾಂತ್ರಿಕತೆ ಕೊರತೆ ಇರುವುದು ಕಂಡುಬಂದಿದೆ. ಅದರ ಸ್ಥಳೀಯ ಸರ್ಕಾರಗಳು ಉತ್ತಮ ಸೇವೆಯನ್ನು ನೀಡುತ್ತಿರುವುದು, ಪ್ರಮುಖ ಸೇವೆಗಳು ಮತ್ತು ರಾಜಕೀಯ ಅಧಿಕಾರ ಹೆಚ್ಚು ವಿಕೇಂದ್ರೀಕರಣಗೊಂಡಿರುವುದನ್ನು ಈ ಸ್ಥಳೀಯ ಸರ್ಕಾರಗಳಲ್ಲಿ ಗಮನಿಸಬಹುದಾಗಿದೆ ಎಂದು ಲೇಖಕರು ವಿಶ್ಲೇಷಿಸಿದ್ದಾರೆ.[೨೦]

೬೯. David N.Gellher, Krishna Hachhethu ಅವರ **Local Democracy the Sri Lankan Experience** ಎಂಬ ಲೇಖನದಲ್ಲಿ ಶ್ರೀಲಂಕಾ ಸ್ಥಳೀಯ ಸರ್ಕಾರ/ಸಂಸ್ಥೆಗಳ ಅಧಿಕಾರ, ಹಣಕಾಸಿನ ನಿರ್ವಹಣೆಯ ಕುರಿತು ಚರ್ಚಿಸಲಾಗಿದೆ. ಸ್ಥಳೀಯ ಗ್ರಾಮಮಟ್ಟದಲ್ಲಿ ಪ್ರಾದೇಶಿಕ ಸಭಾಗಳನ್ನು ಗ್ರಾಮಪಂಚಾಯಿತಿಗಳೆಂದು ಕರೆಯಲಾಗಿದೆ. ಈ ಪ್ರಾದೇಶಿಕ ಸಭಾಗಳ ಸದಸ್ಯರನ್ನು ರಾಜ್ಯಮಟ್ಟದ ಮತ್ತು ರಾಷ್ಟ್ರಮಟ್ಟದ ರಾಜಕಾರಣಿಗಳು ಸೂಚಿಸಿದವರು ಆಯ್ಕೆಯಾಗುತ್ತಾರೆ. ಈ ಪ್ರಾದೇಶಿಕ ಸಭಾದ ಸದಸ್ಯರು ಯಾವ ರಾಜಕೀಯ ಅಧಿಕಾರವನ್ನು ಹೊಂದಿರುವುದಿಲ್ಲ. ಇವರು ಸ್ಥಳೀಯವಾಗಿ ಕಂಡುಬರುವ ಸಮಸ್ಯೆಗಳನ್ನು ತಿಳಿದುಕೊಳ್ಳಬೇಕು. ಆ ಸಮಸ್ಯೆಗಳನ್ನು ಕೇಂದ್ರ ಮತ್ತು ರಾಜ್ಯ ರಾಜಕೀಯ ನಾಯಕರಿಗೆ, ಡಿ.ಎಸ್.ಗಳಿಗೆ ತಿಳಿಸುವ ಕೆಲಸ ಮಾಡಬೇಕು.

ಪ್ರಾದೇಶಿಕ ಸಭಾ ಸದಸ್ಯರಿಗೆ ರಾಜಕೀಯ ಭದ್ರತೆ ಇರುವುದಿಲ್ಲ. ಮೂರು ವರ್ಷಗಳ ಅವಧಿಗೆ ಆಯ್ಕೆಯಾಗುತ್ತಾರೆ. ಗ್ರಾಮ ಭಾಗಗಳಿಂದ ಜಿಲ್ಲಾಮಟ್ಟದ ಅಧಿಕಾರಗಳು ಗ್ರಾಮಸೇವಕ ಮತ್ತು ವೈದ್ಯ ಸೇವಕರನ್ನು, ನೌಕರರನ್ನು ನೇಮಿಸುತ್ತಾರೆ. ಪ್ರಾದೇಶಿಕ ಸಭಾ ಅಥವಾ ಸ್ಥಳೀಯ ಹಂತ ಈ ಎರಡೂ ನೌಕರ ಸೇವೆ ಜನರಿಗೆ ಲಭ್ಯವಾಗುತ್ತದೆ. ಶ್ರೀಲಂಕಾದಲ್ಲಿ ಎಲ್ಲಾ ಅಧಿಕಾರಗಳು ಕೇಂದ್ರದಲ್ಲಿರುತ್ತವೆ. ಕೇಂದ್ರೀಕೃತ ಆಡಳಿತ ವ್ಯವಸ್ಥೆ ಹೆಚ್ಚು ಪ್ರಭಾವಿತವಾಗಿದೆ. ಸ್ಥಳೀಯ ಸರ್ಕಾರ ಗಳಿಗೆ ವಿಕೇಂದ್ರೀಕರಣ ವ್ಯವಸ್ಥೆಯು ಯಾವ ಹಂತದಲ್ಲೂ ಕಂಡುಬರುವುದಿಲ್ಲ. ಜನರಿಗೆ ಪ್ರಾದೇಶಿಕ ಸಭಾ ಸದಸ್ಯರ ಆಯ್ಕೆಯಲ್ಲಿ ಪ್ರಜಾಸ್ವಾತಂತ್ರ್ಯ ಮತ್ತು ಹಕ್ಕುಗಳು ಇಲ್ಲದಿರುವುದು ಕಂಡುಬಂದಿದೆ. ಪ್ರಾದೇಶಿಕ ಸಭಾ ಸದಸ್ಯರಿಗೆ ರಾಜಕೀಯ ಅಧಿಕಾರಗಳಿರುವುದಿಲ್ಲ. ಸ್ಥಳೀಯ ಸಮಸ್ಯೆಗಳನ್ನು ಪರಿಹರಿಸಬಲ್ಲ ರಾಜಕೀಯ ಅಧಿಕಾರಗಳು, ಆಡಳಿತ ಅಧಿಕಾರಗಳು ಮತ್ತು ಹಣಕಾಸಿನ ಅಧಿಕಾರಗಳು ಇಲ್ಲದಿರುವುದು ಕಂಡುಬಂದಿದೆ. ಶ್ರೀಲಂಕಾದಲ್ಲಿ ಸ್ಥಳೀಯ ಸರ್ಕಾರಗಳಿಲ್ಲದೆ ಗ್ರಾಮಮಟ್ಟದಲ್ಲಿ ಯಾವುದೇ ಮೂಲಭೂತ ಸೌಲಭ್ಯಗಳು ಜನರಿಗೆ ಸಿಗದೇ ಇರುವುದು ಕಂಡುಬಂದಿದೆ. ಗ್ರಾಮಮಟ್ಟದ ಅಭಿವೃದ್ಧಿಯಲ್ಲಿ ಸ್ಥಳೀಯ ಸರ್ಕಾರಗಳ ಪಾತ್ರ ಎಷ್ಟು ಪ್ರಮುಖವಾಗಿರುತ್ತದೆ ಎಂಬುದನ್ನು ಲೇಖಕರು ತಿಳಿಸುತ್ತಾರೆ.[೬೯]

೭೦. ಡಾ.ಕೆ.ಮೋಹನ್‌ಕೃಷ್ಣ ರೈ ಅವರ **ಪ್ರಭುತ್ವ ಮತ್ತು ಜನತೆ** ಸಮಾಜದ ರಚನೆ ಎಂಬ ಅಧ್ಯಾಯದಲ್ಲಿ ಮಹಿಳೆಯರ ಸ್ಥಾನಮಾನಗಳ ಕುರಿತು ಚರ್ಚಿಸಿದ್ದಾರೆ. ಮಹಿಳೆಯರಿಗೆ ಸಾವಿರಾರು ವರ್ಷಗಳಿಂದ ನಾಗರಿಕ ಹಕ್ಕುಗಳು ಅನ್ವಯಿಸದಂತೆ ಮಾಡಲಾಗಿದೆ. ಪುರುಷ ಸಮಾನತೆಯಾಗಿ ಮಹಿಳೆಯರು ಯಾವ ರಂಗಗಳಲ್ಲೂ ಕಂಡುಬರುವುದಿಲ್ಲ. ಮಹಿಳೆಯ ಸ್ವಾತಂತ್ರ್ಯ ಪರಿಕಲ್ಪನೆ ಪ್ರಾಚೀನ ಕಾಲದಿಂದಲೂ ಮಹಿಳೆಯರು ಕುಟುಂಬದಲ್ಲಿ ಅಸಮಾನತೆ, ಸಾಮಾಜಿಕ ಅಸಮಾನತೆ, ರಾಜಕೀಯ ಅಸಮಾನತೆ, ಸ್ವಾತಂತ್ರ್ಯ ಅಸಮಾನತೆ ಮತ್ತು ಬದುಕಿನ ಅಸಮಾನತೆಗಳನ್ನು ಎದುರಿಸುತ್ತಾ ಬಂದಿದ್ದು, ಪ್ರಸ್ತುತ ಕಾಲದಲ್ಲಿ ಬಹುಪಾಲು ಈ ಅಸಮಾನತೆ ಆಚರಣೆಗಳಿಗೆ ಹೊಂದಿಕೊಂಡು, ರಾಜಕೀಯ ಅಧಿಕಾರದಿಂದ ಮತ್ತು ಆರ್ಥಿಕ ಸಂಪನ್ಮೂಲಗಳ ಒಡೆತನದಿಂದ ಮತ್ತು ಕುಟುಂಬ ಒಡೆತನದಿಂದ ದೂರ ಉಳಿದಿರುವುದು ಕಂಡುಬಂದಿದೆ ಎಂದು ವಿಶ್ಲೇಷಿಸಿದ್ದಾರೆ. ಸಮಾಜದ ಅಭಿವೃದ್ಧಿಯಲ್ಲಿ ಆಚರಣೆಗಳ ಪಾತ್ರ ಬಹು ಪ್ರಮುಖವಾಗಿರುವುದು ಈ ಸ್ಥಿತಿಯಿಂದ ಗ್ರಾಮಸಮಾಜಗಳನ್ನು ಹೊರಬಂದಾಗ ಹೊಸ ಸಮಾನತೆಯ ಸಮಾಜವು ಕಾಣಲು ಸಾಧ್ಯವಾಗುತ್ತದೆ ಎಂದು ಲೇಖಕರು ಅಭಿಪ್ರಾಯಪಟ್ಟಿದ್ದಾರೆ.[೭೦]

೭೧. ಡಾ.ರಾಮಮನೋಹರ ಲೋಹಿಯಾ ಅವರ ಅನುವಾದಿತ ಕೃತಿ **ಜಾತಿ ಪದ್ಧತಿ** ಎಂಬ ಗ್ರಂಥದಲ್ಲಿ ಜಾತಿಯ ಅರ್ಥ ಜನರ ಸಾಮರ್ಥ್ಯವನ್ನು ಕಸಿದುಕೊಳ್ಳುವುದು, ಭಾರತೀಯರು

ಇಷ್ಟು ಹಿಂದುಳಿಯಲು ಹಾಗೂ ಇಷ್ಟೊಂದು ಬಾರಿ ದಾಸ್ಯಕ್ಕೊಳಪಡಲು ಇದೇ ಅತ್ಯಂತ ಮಹತ್ವದ ಕಾರಣ. ದೇಶದ ಶೇ.ಕಡ ೬೦ರಷ್ಟು ಅವಕಾಶಗಳನ್ನು ಸಾಮರ್ಥ್ಯವನ್ನು ಪರಿಗಣಿಸದೆ ಹಿಂದುಳಿದ ಜನರಿಗೆ ಕೊಡಲೇಬೇಕು. ಜಾತಿಯ ಅರ್ಥ ಜನರ ಸಾಮರ್ಥ್ಯವನ್ನು ಕಸಿದುಕೊಳ್ಳುವುದು ಹಾಗೂ ಜಾತಿಯ ನೆಲೆಯ ಸಮಾಜಕ್ಕೆ ದುಡಿಯಲು ಅಸಮರ್ಥ ಜಾತಿಯ ಹೆಸರಿನಲ್ಲಿ ಇರುವುದು ಕಂಡುಬಂದಿದೆ. ಜಾತಿಯ ನಕಾರಾತ್ಮಕ ನೋಟ ಜಾತಿ ಮತ್ತು ಸಾಮಾಜಿಕ ಅಂತರಗಳ ಮೇಲುಕೀಳು ಎಂಬ ಜಾತಿಯ ಭಾವನೆಗಳು ಸಣ್ಣ ಸಮುದಾಯಗಳ ಮತ್ತು ತಳಸಮುದಾಯಗಳ ಸಾಮಾಜಿಕ ಖಿನ್ನತೆಗೆ ಗುರಿ ಮಾಡುತ್ತಿದೆ.[೩]

೭೨. ಡಾ.ಸ.ಚಿ.ರಮೇಶ ಅವರ **ಅಲೆಮಾರಿಗಳ ಸ್ಥಿತಿಗತಿ** ಎಂಬ ಕೃತಿಯಲ್ಲಿ ಡಾ. ಹರಿಶ್ಚಂದ್ರ ದಿಗ್ಸಂಗೀಕರ್ ಅವರು *ಅಲೆಮಾರಿಗಳ ಸಮಕಾಲೀನ ಸ್ಥಿತಿ–ಗತಿ* ಎಂಬ ಲೇಖನದಲ್ಲಿ ಅಲೆಮಾರಿಗಳು ಒಂದು ಕಡೆ ನೆಲೆನಿಲ್ಲದವರಾಗಿದ್ದು ಮೂಲಭೂತ ಹಕ್ಕುಗಳಿಂದ ದೂರ ಉಳಿಯುತ್ತಿದ್ದಾರೆ ಎಂದಿದ್ದಾರೆ. ಇತ್ತೀಚೆಗೆ ಒಂದು ಕಡೆ ನೆಲೆ ನಿಂತಿರುವ ಈ ಅಲೆಮಾರಿ ಸಮುದಾಯಗಳು ಕುಡಿಯುವ ನೀರು, ಚರಂಡಿ, ರಸ್ತೆ, ಶಿಕ್ಷಣ, ವಿದ್ಯುತ್‌ನಂತಹ ಮೂಲಭೂತ ಅಂಶಗಳಿಂದ ದೂರವಿದ್ದಾರೆ. ಇವರು ಶಿಕ್ಷಣ ಪಡೆಯುವ ಸಾಧ್ಯತೆಗಳು ತೀರಾ ಕಡಿಮೆಯಾಗಿದೆ. ಪೋಷಕರನ್ನು ಸಾಕಲು ಮಕ್ಕಳು ಕೆಲಸಕ್ಕೆ ಹೋಗುವ ಅನಿವಾರ್ಯತೆಗಳು ಅಲೆಮಾರಿ ಸಮುದಾಯಗಳಲ್ಲಿ ಕಂಡುಬರುತ್ತವೆ. ದೇಶದ ಅಭಿವೃದ್ಧಿ ಮಾದರಿಗಳನ್ನು ಆವಿಷ್ಕಾರ ಮಾಡುತ್ತಿದ್ದಾರೆ. ಒಂದು ಕಡೆ ದಿನದ ಒಂದು ಹೊತ್ತಿನ ಊಟವಿಲ್ಲದೆ, ಮೂಲಭೂತ ಸವಲತ್ತುಗಳಿಲ್ಲದೆ ಹಲವು ಜಾತಿ ಸಮುದಾಯಗಳು ನರಳುತ್ತಿವೆ ಎಂದು ಅಲೆಮಾರಿಗಳ ಜೀವನವನ್ನು ಬಿಚ್ಚಿಟ್ಟಿದ್ದಾರೆ.[೪೪]

### ೧.೬. ಅಧ್ಯಯನದ ವಿನ್ಯಾಸ

**ಅಧ್ಯಾಯ ಒಂದು: ಪ್ರಸ್ತಾವನೆ**

ಪ್ರಸ್ತಾವನೆ, ಅಧ್ಯಯನದ ಸಮಸ್ಯೀಕರಣ ಅಧ್ಯಯನ ಉದ್ದೇಶಗಳು, ಅಧ್ಯಯನ ವಿಧಾನ, ಅಧ್ಯಯನದ ವ್ಯಾಪ್ತಿ ಮತ್ತು ಮಹತ್ವ ಅಧ್ಯಯನದ ವಿನ್ಯಾಸ

**ಅಧ್ಯಾಯ ಎರಡು: ಅಧ್ಯಯನದ ಕ್ಷೇತ್ರ ಪರಿಚಯ**

ಅಧ್ಯಯನ ಕ್ಷೇತ್ರದ ಪರಿಚಯ, ಬಳ್ಳಾರಿ ಜಿಲ್ಲೆಯ ಭೌಗೋಳಿಕ, ಆರ್ಥಿಕ, ಶೈಕ್ಷಣಿಕ ಮತ್ತು ರಾಜಕೀಯ ಅಂಶಗಳ ಕುರಿತು ವಿಸ್ತರಿಸಲಾಗಿದೆ. ಅಧ್ಯಯನ ಆಯ್ಕೆ ಮಾಡಿಕೊಂಡು ಹೊಸಪೇಟೆ ತಾಲ್ಲೂಕು ಮತ್ತು ಮಲಪನಗುಡಿ, ಪಾಪಿನಾಯಕನಹಳ್ಳಿ, ಬಳ್ಳಾರಿ, ತಾಲ್ಲೂಕಿನ ಮತ್ತು ತಾಲ್ಲೂಕಿನಲ್ಲಿರುವ ಸಂಗನಕಲ್ಲು, ಮೋಕಾ ಹಾಗೂ ಸಂಡೂರು ತಾಲ್ಲೂಕು ಮತ್ತು ಈ

ತಾಲ್ಲೂಕಿನಲ್ಲಿರುವ, ಸೋವೇನಹಳ್ಳಿ ಚೂರುನೂರು ಮತ್ತು ಕೂಡ್ಲಿಗಿ ತಾಲ್ಲೂಕು ಮತ್ತು ಈ ತಾಲೂಕಿನಲ್ಲಿರುವ ಗುಡೇಕೋಟೆ, ಅಪ್ಪಯ್ಯನಹಳ್ಳಿ, ಗ್ರಾಮಪಂಚಾಯಿತಿಗಳ, ಭೌಗೋಳ, ಸಾಮಾಜಿಕ, ಆರ್ಥಿಕ, ಶೈಕ್ಷಣಿಕ, ಆರೋಗ್ಯ, ಸ್ಥಿತಿಗತಿ ವಿವರಗಳ ವಿಶ್ಲೇಷಣೆ ಮಾಡಲಾಗಿದೆ.

**ಅಧ್ಯಾಯ ಮೂರು: ಪಂಚಾಯತ್‌ರಾಜ್ ಸಂಸ್ಥೆಗಳ ಕಾರ್ಯನುಷ್ಟಾನಗಳು**

ಗ್ರಾಮಪಂಚಾಯಿತಿಗಳ ಬೆಳವಣಿಗೆ, ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಕಾರ್ಯನುಷ್ಠಾನ ಮಾದರಿಗಳು. ಪಂಚಾಯಿತಿಗಳು ಅಧಿಕಾರಗಳ ಬೆಳವಣಿಗೆ, ಚರಿತ್ರೆ ಮತ್ತು ಈ ಅಧ್ಯಾಯದಲ್ಲಿ ಸಾಮಾಜಿಕ ಜಮಾಬಂದಿ, ಗ್ರಾಮಸಭೆಯ ಅನುಷ್ಠಾನ, ಅವಧಿ, ಅನುಷ್ಠಾನ, ಅಧಿಕಾರ, ಕೆಲಸ ಕಾರ್ಯಗಳು, ಜಮಾಬಂದಿ ಗ್ರಾಮಸಭೆ ಅನುಷ್ಠಾನದ ಪಂಚಾಯಿತಿ ಸಿಬ್ಬಂದಿಯವರ ಮತ್ತು ಜಮಾಬಂದಿ ಅಧಿಕಾರಿಗಳ ಕರ್ತವ್ಯಗಳು ಕುರಿತು ವಿವರಿಸಲಾಗಿದೆ. ನರೇಗಾ ಯೋಜನೆ ಸಾಮಾಜಿಕ ಲೆಕ್ಕ ಪರಿಶೋಧನೆಯ ಅನುಷ್ಠಾನ ಮಾದರಿಗಳನ್ನು ವಿವರಿಸಲಾಗಿದೆ.

**ಅಧ್ಯಾಯ ನಾಲ್ಕು: ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ, ಆಯಾಮಗಳು**

ನಾಲ್ಕನೇ ಅಧ್ಯಾಯದಲ್ಲಿ ಅಧ್ಯಯನಕ್ಕೆ ಆಯ್ದುಕೊಂಡ ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ಯಾವ ವಿಷಯಗಳ ಕುರಿತು ಚರ್ಚಿಸಲಾಗಿದೆ! ಎಷ್ಟು ಜನರು ಭಾಗವಹಿಸಿದ್ದಾರೆ ಎಂಬ ಅಂಶಗಳನ್ನು ವಿಶ್ಲೇಷಿಸಲಾಗಿದೆ. ಗ್ರಾಮಸ್ಥರಲ್ಲಿ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಬಗ್ಗೆ ಎಷ್ಟು ಜನರಿಗೆ ಅರಿವು ಇದೆ. ಎಷ್ಟು ಜನರು ಭಾಗವಹಿಸಿದ್ದಾರೆ ಹಾಗೂ ಜನತೆ ಜಮಾಬಂದಿ ಫಲಿತಗಳನ್ನು ಪಡೆದಿದ್ದಾರೆ ಎಂದು ವಿವರಿಸಲಾಗಿದೆ. ಗ್ರಾಮಗಳ ತೌಲನಿಕತೆಯನ್ನು ವಿವರಸಲಾಗಿದೆ.

**ಅಧ್ಯಾಯ ಐದು: ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ಎದುರಾಗುವ ತೊಡಕುಗಳು**

ಗ್ರಾಮಪಂಚಾಯಿತಿಗಳಲ್ಲಿ ಸಾಮಾಜಿಕ ಜಮಾಬಂದಿ ಗ್ರಾಮಸಭೆಯನ್ನು ಕಾಯ್ದೆಯಾನು ಸಾರವಾಗಿ ಅನುಷ್ಠಾನಕ್ಕೆ ತರಲು ಸ್ಥಳೀಯವಾಗಿ, ಹಲವು ಸಮಸ್ಯೆಗಳು, ಇಲಾಖೆಯಿಮದ ಉಂಟಾಗುವ ಅನಾನುಕೂಲತೆಗಳನ್ನು ಜನತೆಯಲ್ಲಿರುವ ಪೂರ್ವಪೀಕತ, ಅಭಿಪ್ರಾಯಗಳನ್ನು ಚರ್ಚಿಸಲಾಗಿದೆ.

**ಅಧ್ಯಾಯ ಆರು: ಉಪಸಂಹಾರ**

## ಕೊನೆ ಟಿಪ್ಪಣಿಗಳು


೧. ಭುವನಹಳ್ಳಿ ನಾಗರಾಜ್, ವಿಕೇಂದ್ರೀಕರಣ : ಪಂಚಾಯತ್ ರಾಜ್ ಸಂಸ್ಥೆಗಳು ನಡೆದು ಬಂದ ದಾರಿ ಒಂದು ಅವಲೋಕನ" "ಕರ್ನಾಟಕ ವಿಕಾಸ ಸಂಪುಟ ೪, ಸಂಖ್ಯೆ ೨, ಜನವರಿ ೨೦೦೦, ಪು.೯

೨. ನರಸಿಂಹರಾವ್ ಪಿ. ಮತ್ತು ವೆಂಕಟರಾವ್, "ರೂರಲ್ ಡೆವೆಲಪ್‌ಮೆಂಟ್ ಇನ್ ಇಂಡಿಯಾ, ಕುರುಕ್ಷೇತ್ರ ಸಂಚಿಕೆ: ೪೮, ಸಂಖ್ಯೆ: ೦೫, ಆಗಸ್ಟ್ ೨೦೦೦, ಪು.೨

೩. ಯರಿಸ್ವಾಮಿ ಎಂ., ಗ್ರಾಮ ಪಂಚಾಯಿತಿ ಮತ್ತು ಸಬಲೀಕರಣ(ಬಳ್ಳಾರಿ ಜಿಲ್ಲೆಯ ಅಧ್ಯಯನ) ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨, ಪು.೧೩-೧೪, ೩೯, ೪೨

೪. ಶ್ರೀಧರ ಎ., ವೀಕೇಂದ್ರಿಕರಣ ಮತ್ತು ಗ್ರಾಮಪಂಚಾಯಿತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭, ಪು.೧೮-೨೦

೫. Geeta Transparency and Accountabality in NREGA, at working paper No. 1 Institute or development studies, Mumbai February 2009, Pp.5-16

೬. Nidhi Vij, Collaborative Governana : Anolysing Social Audit in MGNREGA in India, Institute of Development studies, IDS bulletin volume 42, published black well number 2011, Pp.28-32

೭. Salim Lakha, Accountability from below the experience of MGNREGA in Rajasthan (India) Asia research institute National university of Singapure, December 2011, Pp.2-6

೮. Shylashri Shankar Can social Audits count ASARC working paper 2010 New Delhi, Pp.3-18

೯. C.A.K.Yasudian, Paverty alleviation programmes in India, A Social Audit, Indian JMED 126, October, 2007, Pp.364-373

೧೦. Dr. P. Geetha Legislative frame work for performance accountability in government Centr for good Governance New Delhi 2013, Pp.7, 11, 13

೧೧. Ibaid, Pp.14-15

೧೨. Nidhi Vij, Collaborative Governana : Anolysing Social Audit in MGNREGA in India, Institute of Development studies, IDS bulletin volume 42, published black well number 2011, Pp.40-46

೧೩. Farzaha Afridi, Vegard, lesson, Social Audits and MGNREGA delivery lessons from Andhra Pradesh ediscussion paper no 809 Germany April 2014, Pp.3-15

೧೪. ಟಿ.ಆರ್.ಚಂದ್ರಶೇಖರ್, ಜನಯೋಜನೆ ಕರ್ನಾಟಕ ಅನುಭವಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಪು.೪೬-೪೯

೧೫. ಎಂ.ಚಂದ್ರ ಪೂಜಾರಿ, ಜನಾಯೋಜನೆ ಹೈದರಾಬಾದ್ ಕರ್ನಾಟಕದ ಅನುಭವಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೪.

೧೬. ಎ.ಶ್ರೀಧರ, ವಿಕೇಂದ್ರಿಕರಣ ಮತ್ತು ಗ್ರಾಮಪಂಚಾಯಿತಿ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೭, ಪು.೨೨

೧೭. ಟಿ.ಆರ್.ಚಂದ್ರಶೇ.ಖರ, ಹೈದರಾಬಾದ್-ಕರ್ನಾಟಕ ಜನರನ್ನು ಒಳಗೊಳ್ಳುವ ಅಭಿವೃದ್ಧಿ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೯, ಪು.೫-೮

೧೮. Pratyusna Patnaik, Affirmative action and representation of weaker sections EPW, October 29, 2005, Pp.4753-4760

೧೯. Samuel Poul, Publica spending outcomes and Accountability EPW, January 28, 2006, Pp.333-335

೨೦. Aruna Bogchee, Political and Administrative realities of Employment Guarantee Shceme, EPW, October 15, 2015, Pp.4531-4335

೨೧. N. Sivanna , M. Devendra Babu, Panchayath jamabandhi in Karnataka : A case study of Transparency and accountability in good governance, working paper -142 institution social and Ecinomic change, 2004, Pp.4-9

೨೨. D.Narayana, Local governance without capacity building ten year of panchayath, E.P.W,2005, Pp.2823-2827

೨೩. M.R.Raghuram murthy, Role of panchayath Raj institution in rural development with spciel reference S.K. University,Ananthpur. A.P., 2009, Pp.162-172

೨೪. Timmaneeni nataraj guad,Implementation and impact of NREGP: A case study of Oravakhonda mandalam, S.K. University,ananthpur .district A.P. 2010, Pp.87-92

೨೫. M.Obalishu , Administration of rural development programme:A case study of MNREGP in S.K. University,ananthpur .district A.P. 2011, Pp.42-44

೨೬. Kristin vestrihein, mariekock, Nielsen shashvat, Decentralised planning process: Awareness and action for improving key social indicators, unicef collebaration with central ofr strities in social science, culcutta, 2004, Pp.64-66

೨೭. ವೀರಭದ್ರ ತಂಬ್ರಹಳ್ಳಿ, ಪಂಚಾಯತ್ ರಾಜ್ ವ್ಯವಸ್ಥೆಯಲ್ಲಿ ಬೇಡ ಬುಡಕಟ್ಟಿನ ಪಾಲ್ಗೊಳ್ಳುವಿಕೆ: ಬ್ಯಾಡನಾಯಕರು ಮತ್ತು ಊರನಾಯಕರು(ಬಳ್ಳಾರಿ ಜಿಲ್ಲೆಯನ್ನು ಅನುಲಕ್ಷಿಸಿ), ಪಿಎಚ್.ಡಿ. ಮಹಾಪ್ರಬಂಧ, ೨೦೧೧, ಪು.೩೮, ೮೮, ೮೯

೨೮. Ravidra Sharama(Ed), Grass Root Governance changes in Rural India, AALEK Publication, 2005, Pp.18-23

೨೯. R.P.Joshi, Panchyataraj Emerging Trends Across the States, Rawat Publications, New Delhi, 2005, Pp.46-49

೩೦. Ghanshyam Shah, Dalit Identity and Politics Cultur Subordition and The Dalit Challenge vol-2, Sage Publication, New Delhi, 2001, S.K. Therat, R.S. Deshpande, Caste system and Economic Inequality Economic Theory and Eviedence, Pp.166-169

೩೧. Krishan Chand ,Ramotra, Development Process and Scheduled Caste, Rawat Publication, Jaipur, 2008, Pp.283-289

೩೨. Dvid N. Gellner , Krishan Hachhethu, Democry in South Asia microprocess of Democratization in Nepal and It Neighbouss , Sage Publication, 2009, Local Democracy the South Srilank Experience, Pp.8-11

೩೩. Darin Khongsatjaviwat Jayant, K Routray, Local Government for Rural Development in Thailand, Sage Publication, 2009, Local Democracy the South Srilank Experience, Pp.24-26

೩೪ Praveen, K Jadhav, Scheduled Caste in Rural India ,Rawat Publication, New Delhi, 2008, Pp.124-126

୩୫. Snehalatha Pande, Indian Politics A Study of People's Involment, Archives Publication Distribution, New Delhi 1988, Political Efficiency and Political participation on: A Study of Women in Politics in India, Pp.4-9

୩୬. Panna wignarja, Akmal Hussuin ,Harsh sethi, Ganeshan wignaraja Participatory Development Learning form South Asia ,United National University Press Tokyo Oxford University, Karachi,1991.Panna wignarja ,Towards Praxis and Participatory Development, Pp.186-188

୩୭. G. Palanithurai, Participation in the Development Process Grass root Experience, Kanishka Publication Distributiona, New Delhi,1996.M.P.Boraian, Project, People's and Participation, Pp.97-98

୩୮. Katar Singh , Rural Development Principle's policies Management , Sage Publication, New Delhi, 1995, Implementing Rural Development Programmes, Pp.1-4

୩୯. Inclusion and Exclusion in local Governance field studies from Rural India, Sage Publication, New Delhi, 2009, Pp.4-6

୪୦. Leeamma Devasia, V.V. Desai Women Participatroy Research and Development, Dattson S J Nehru mar Nagpur, 1998, Pp.56-62

୪୧. Scheduled Caste Women Edited by P.C. Jain Shashi Jain and Sudha bhatnagar, Rachit Publication, Jaipur and New Delhi. 1997, Pp.162-164

୪୨. Vinod K Jairth and Srinivas Sajja, Negotiating with Empowerment Panchayati Raj in Andhra Pradesh Inclusion and Exclusion in local Governance field studies from Rural India, Sage Publication, New Delhi, 2009, Pp.80-104

୪୩. Manasehblu Kundu, Panchayati Raj or Party Raj understanding the Nature of Local Government in West Bengal, Manasendu Kundu, Inclusion and Exclusion in local Governance field studies from Rural India, Sage Publication, New Delhi, 2009, Pp.108-136

୪୪. T.G. Suresh, Understanding Grassroots power and Excluded communities in Kerala, Inclusion and Exclusion in local Governance field studies from Rural India, Sage Publication, New Delhi, 2009, Pp.87-99

೪೫. L. Thara Bhai, Gender, Caste and Politics in Rural Tamil Nadu, Inclusion and Exclusion in local Governance field studies from Rural India, Sage Publication, New Delhi, 2009, Pp.123-126

೪೬. ಬಿ.ಆರ್. ಅಣ್ಣಸಾಗರ, ಅಭಿವೃದ್ಧಿಯ ಹೊಸ ಆಯಾಮಗಳು, ಸಾಂಸ್ಕೃತಿಕ ಪ್ರಕಾಶನ ಗುಲಬರ್ಗಾ, ೨೦೦೯, ಪು.೨೮-೨೯

೪೭. ಒಡೆಯರ್ ಡಿ. ಹೆಗ್ಗಡೆ, ಎನ್. ಅನ್ನಪೂರ್ಣೇಶ್ವರಿ, ಮಹಿಳಾ ಹಕ್ಕುಗಳು, ಅರ್ಜುನ್ ಪಬ್ಲಿಕೇಷಿಂಗ್, ಮೈಸೂರು ೨೦೦೬, ಪು.೮.೧೦

೪೮ Ponna Wigharaja Akmal Hussain, Harsh, Sethi Ganeshan United Nations University press Oxford University Press, Karachi, 1991, Pp.42-44

೪೯. ಮಾನವಾಭಿವೃದ್ಧಿ ಮತ್ತು ಪ್ರಜಾಪ್ರಭುತ್ವ, ಒಡೆಯರ್ ಡಿ. ಹೆಗ್ಗಡೆ, ಬಿ.ಬಿ. ಚಾಣೇಗೌಡ ಮಾನವಾಭಿವೃದ್ಧಿ ಮತ್ತು ಪ್ರಜಾಪ್ರಭುತ್ವ ಮಾನವಾಭಿವೃದ್ಧಿ ಅಧ್ಯಯನಗಳ ಕೇಂದ್ರ, ಮೈಸೂರು ೨೦೦೪, ಪು.೪-೯

೫೦. ಟಿ.ಆರ್. ಚಂದ್ರಶೇ.ಖರ, ಕರ್ನಾಟಕ ಅಭಿವೃದ್ಧಿಯ ಆಕೃತಿ, ಪಲ್ಲವ ಪ್ರಕಾಶನ, ಎಮ್ಮಿಗನೂರು, ಬಳ್ಳಾರಿ, ೨೦೦೭, ಪು.೩೩-೩೪

೫೧. ಟಿ.ಆರ್. ಚಂದ್ರಶೇ.ಖರ, ಕರ್ನಾಟಕ ಅಭಿವೃದ್ಧಿಯ ಸಾಮಾಜಿಕ ಸ್ಥಿತಿಗಳು, ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು, ೨೦೦೩, ಪು.೫೭-೭೧

೫೨. ಟಿ.ಆರ್. ಚಂದ್ರಶೇ.ಖರ, ಜಿಲ್ಲಾ ಕರ್ನಾಟಕ ಜಿಲ್ಲಾ ಅಭಿವೃದ್ಧಿ ಅಧ್ಯಯನ ಮಾಲೆ-೨, ಜಿಲ್ಲಾ ಅಭಿವೃದ್ಧಿ ಅಧ್ಯಯನ ಗದಗ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೦, ಪು. ೮೯, ೧೧೧, ೧೧೪, ೧೧೫, ೧೧೬

೫೩. ಎಂ.ಚಂದ್ರಪೂಜಾರಿ, ದೇಶಿಯತೆಯ ನೆರಳಲ್ಲಿ ವಿಕೇಂದ್ರಿಕರಣ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೮, ಪು.೧೭೩-೧೭೬

೫೪. K.K.Tripathy, Allocation for Inclusive Growth, Kurukshetra, April, 2013, Pp.3-7

೫೫. ಟಿ.ಆರ್.ಚಂದ್ರಶೇ.ಖರ, ಹೈದರಾಬಾದ್-ಕರ್ನಾಟಕ ಜನರನ್ನು ಒಳಗೊಳ್ಳುವ ಅಭಿವೃದ್ಧಿ ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೯, ಪು.೩-೫

೫೬. ಎಂ.ಚಂದ್ರ ಪೂಜಾರಿ, ಜನಾಯೋಜನೆ ಹೈದರಾಬಾದ್ ಕರ್ನಾಟಕದ ಅನುಭವಗಳು, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೪, ಪು.೪-೬

೫೭. ಮೈತ್ರಿ ಕೆ.ಎಂ., ಚಲುವರಾಜು(ಸಂ), ಬುಡಕಟ್ಟು ಅಧ್ಯಯನ, ಸಂಪುಟ ೩, ಸಂಚಿಕೆ ೨, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬, ಪು.೪೨-೪೪

೫೮. Snehalatha Pande ,Indian Politics A Study of People's Involment, Archives Publication Distribution, New Delhi 1988, Political Efficiency and Political participation on: A Study of Women in Politics in India, Pp.6-8

೫೯. Panna wignarja , Akmal Hussuin ,Harsh sethi, Ganeshan wignaraja Participatory Development Learning form South Asia ,United National University Press Tokyo Oxford University, Karachi,1991.Panna wignarja ,Towards Praxis and Participatory Development, Pp.64-66

೬೦. G.Palanithurai, Participation in the Development Proces, Kanishka Publication, New Delhi, 1999, Pp.23-25

೬೧. Katar Singh , Rural Development Principle's policies Management , Sage Publication, New Delhi, 1995, Implementing Rural Development Programmes, Pp.108-109

೬೨. Kanchan Chopra, Gopal K. Kadekode, M.N. Murthy, Participatory Development People and common property Resources, Sage Publication New Delhi, 1990, Pp.11-24

೬೩. Decentralised Planing Proces: Awareness and Action for Improving, EPW, July 15, 2003, Pp.109-110

೬೪. Ibiad, Pp.112-113

೬೫. Aureliano Fernandes, Aggrandiser Government and Local Governace, EPW, July 5, 2003, Pp.2873-2875

೬೬ Ibiad, Pp.2873-2876

೬೭ Ibiad, Pp.2878-2879

೬೮. Vinod K Jairth and Srinivas Sajja, Negotiating with Empowerment Panchayati Raj in Andhra Pradesh Inclusion and Exclusion in local Governance field studies from Rural India, Sage Publication, New Delhi, 2009, Pp.80-104

೬೯. Manasehblu Kundu, Panchayati Raj or Party Raj understanding the Nature of Local Government in West Bengal, Manasendu Kundu, Inclusion and Exclusion in local Governance field studies from Rural India, Sage Publication, New Delhi, 2009, Pp.108-136.

೭೦. Ibiad, Pp.136-140

೭೧. David N. Gellher, Krishna Hachhethu, Local Democracy in South Asia, Microprocesses of Democratization in Nepal and it Neighbaus, Sage Publication, 2009, Pp.23-25

೭೨. ಡಾ. ಕೆ. ಮೋಹನ್‌ಕೃಷ್ಣ ರೈ, ಪ್ರಭುತ್ವ ಮತ್ತು ಜನತೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪, ಪು.೩೨-೩೩

೭೨. ಡಾ. ರಾಮಮನೋಹರ ಲೋಹಿಯಾ, **ಜಾತಿ ಪದ್ಧತಿ**, ಅನುದಾನ, ಹಸನ್ ಸಯೀಂ ಸುರಕೋಡ ಲಂಕೇಶ್ ಪ್ರಕಾಶನ, ಬೆಂಗಳೂರು ೨೦೧೦, ಪು.೧೮-೨೦

೭೪. ಡಾ.ಸ.ಚಿ. ರಮೇಶ, ಅಲೆಮಾರಿಗಳ ಸ್ಥಿತಿಗತಿ,(ಸಂ.) ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫, ಪು.೪೪-೪೫

# ಅಧ್ಯಾಯ ಎರಡು

## ಅಧ್ಯಯನದ ಕ್ಷೇತ್ರ ಪರಿಚಯ

೨.೧. ಬಳ್ಳಾರಿ ಜಿಲ್ಲಾ ಸಾಮಾಜಿಕ ವಿವರಣೆಗಳು

೨.೨. ಬಳ್ಳಾರಿ ತಾಲ್ಲೂಕಿನ ಸಾಮಾಜಿಕ ವಿವರಗಳು

೨.೩. ಹೊಸಪೇಟೆ ತಾಲ್ಲೂಕಿನ ಸಾಮಾಜಿಕ ವಿವರಗಳು

೨.೪. ಕೂಡ್ಲಿಗಿ ತಾಲೂಕಿನ ಸಾಮಾಜಿಕ ವಿವರಗಳು

೨.೫. ಸಂಡೂರು ತಾಲ್ಲೂಕಿನ ಸಾಮಾಜಿಕ ವಿವರಗಳು

## ಅಧ್ಯಾಯ ಎರಡು

# ಅಧ್ಯಯನ ಕ್ಷೇತ್ರ ಪರಿಚಯ

**ಪೀಠಿಕೆ**

ಬಳ್ಳಾರಿ ಜಿಲ್ಲೆಯ ನಾಲ್ಕು ತಾಲೂಕುಗಳನ್ನು ಅನುಲಕ್ಷಿಸಿ ಅಧ್ಯಯನದ ಕ್ಷೇತ್ರಕಾರ್ಯಕ್ಕೆ ಆಯ್ಕೆ ಮಾಡಿಕೊಂಡು ಸಂಶೋಧನೆಯನ್ನು ಮಾಡಲಾಗಿದೆ. ಈ ಅಧ್ಯಯನವು ಸಂಶೋಧನೆಯಲ್ಲಿ ಮಹತ್ವದ್ದಾಗಿರುತ್ತದೆ. ಬಳ್ಳಾರಿ ಜಿಲ್ಲೆಯ ಪ್ರಾಚೀನ ಹಿನ್ನೆಲೆಯನ್ನು ಅರ್ಥ ಮಾಡಿಕೊಳ್ಳಬೇಕಾಗುತ್ತದೆ. ಆ ಮೂಲಕ ಜಿಲ್ಲೆಯ ಜನರ ಸಾಮಾಜಿಕ ಬದುಕು, ಆರ್ಥಿಕ ಅಂತಸ್ತು, ಬಳ್ಳಾರಿ ಜಿಲ್ಲೆಯ ಆಡಳಿತ, ರಾಜಕೀಯ ಮತ್ತು ಭೌಗೋಳಿಕ ಅಂಶಗಳನ್ನು ಅರ್ಥ ಮಾಡಿಕೊಂಡು ಜಿಲ್ಲೆಯ ಅಭಿವೃದ್ಧಿಯಲ್ಲಿ ಈ ಮೇಲ್ಕಂಡ ಅಂಶಗಳ ಪ್ರಾಧಾನ್ಯತೆಯನ್ನು ಗಮನಿಸಲಾಗಿದೆ. ಅಭಿವೃದ್ಧಿ ಹಿನ್ನಡೆಯಾಗಿರುವುದಕ್ಕೆ ಕಂಡುಬಂದಿರುವ ಅಂಶಗಳನ್ನು ಗುರುತಿಸಲಾಗಿದೆ. ಇದಕ್ಕೆ ಅಧ್ಯಯನ ಕ್ಷೇತ್ರ ಪರಿಚಯವು ಮುಖ್ಯವಾಗಿರುತ್ತದೆ. ಅಧ್ಯಯನದಲ್ಲಿ ರಚನಾತ್ಮಕ ಪ್ರಶ್ನಾವಳಿಯನ್ನು ಸಿದ್ಧಪಡಿಸಿಕೊಂಡು ಅಧ್ಯಯನದ ವ್ಯಾಪ್ತಿಗೆ ಒಳಪಡುವ ಗ್ರಾಮಪಂಚಾಯಿತಿಯ ಸಿಬ್ಬಂದಿಗಳಿಂದ ಮತ್ತು ಗ್ರಾಮಸ್ಥರಿಂದ ಮಾಹಿತಿಯನ್ನು ಪಡೆಯಲಾಗಿದೆ. ಇದಕ್ಕೆ ಅಧ್ಯಯನದ ಕ್ಷೇತ್ರಕಾರ್ಯದ ಕುಟುಂಬಗಳನ್ನು ಸಮೀಕ್ಷೆ ಮಾಡಿ ಸಂಶೋಧನೆಯಲ್ಲಿ ಬಳಸಲಾಗಿದೆ. ಕ್ಷೇತ್ರಕಾರ್ಯವು ಪ್ರಮುಖವಾಗಿ ಗ್ರಾಮಪಂಚಾಯಿತಿ ಕಚೇರಿಯಲ್ಲಿ ಮತ್ತು ಗ್ರಾಮಪಂಚಾಯಿತಿಯ ಕಾರ್ಯಚಟುವಟಿಕೆಗಳಲ್ಲಿ ಗ್ರಾಮದ ವಿವಿಧ ಸಾಮಾಜಿಕ ಗುಂಪುಗಳ ಸಹಭಾಗಿತ್ವ ಹೇಗಿರುತ್ತವೆ ಮತ್ತು ಸ್ಥಳೀಯವಾಗಿ ಗ್ರಾಮಸ್ಥರು ಗ್ರಾಮಸಭೆಗಳಲ್ಲಿ ಮತ್ತು ಜಮಾಬಂದಿ ಸಭೆಗಳಲ್ಲಿ ಭಾಗವಹಿಸುವಿಕೆಯ ಆಸಕ್ತಿ ಹೇಗಿದೆ ಎಂಬುದನ್ನು ಪರಿಶೀಲಿಸಲಾಗಿದೆ. ಭಾಗವಹಿಸದೇ ಇದ್ದರೆ ಅದಕ್ಕೆ ಕಾರಣಗಳೇನು ಎಂಬ ಅಂಶಗಳನ್ನು ಕ್ಷೇತ್ರ ಅಧ್ಯಯನದ ಅವಲೋಕನ ಮತ್ತು ಮಾಹಿತಿ ದತ್ತಾಂಶಗಳಿಂದ ಗ್ರಹಿಸಿಕೊಳ್ಳಲಾಗಿದೆ. ಸ್ಥಳೀಯ ಅಭಿವೃದ್ಧಿಯಲ್ಲಿ ಗ್ರಾಮದ ವಿವಿಧ ಸಾಮಾಜಿಕ ಗುಂಪುಗಳು ಯಾವ ಯಾವ ರೀತಿಯಲ್ಲಿ ತಮ್ಮ

ಅಭಿವೃದ್ಧಿಯನ್ನು ಸಾಧಿಸಿಕೊಳ್ಳಲು ಸಾಧ್ಯವೆಂದು ಗ್ರಹಿಸಿಕೊಳ್ಳುವುದಕ್ಕೆ ಅಧ್ಯಯನ ಕ್ಷೇತ್ರವನ್ನು ಪರಿಚಯ ಮಾಡಿಕೊಳ್ಳುವುದು ಅವಶ್ಯಕವಾಗಿರುತ್ತದೆ.

## ೨.೧. ಬಳ್ಳಾರಿ ಜಿಲ್ಲಾ ಸಾಮಾಜಿಕ ವಿವರಣೆಗಳು

ಬಳ್ಳಾರಿ ಜಿಲ್ಲೆಯ ಇತಿಹಾಸ ಕ್ರಿ.ಪೂ.೩೫೬೦ರಿಂದ ಕ್ರಿ.ಪೂ.೧೦೦೦ ಕಾಲಘಟ್ಟ ಹಳೆ ಶಿಲಾಯುಗ ಕಾಲಮಾನಕ್ಕೆ ಸೇರುತ್ತದೆ.

ಬಳ್ಳಾರಿಯ ಪ್ರದೇಶದಲ್ಲಿ ದೊರೆತಿರುವ ಅಶೋಕನ ಶಾಸನಗಳನ್ನು ಆಧರಿಸಿ ಬಳ್ಳಾರಿ ಜಿಲ್ಲೆಯಲ್ಲಿ ಮೌರ್ಯರು ಆಡಳಿತ ನಡೆಸಿರುವ ಪುರಾವೆಗಳು ಕಂಡುಬಂದಿವೆ. ಈ ಹಿನ್ನೆಲೆಯಲ್ಲಿ ಕ್ರಿ.ಪೂ.೩೨೬ರಿಂದ ಬಳ್ಳಾರಿ ಪ್ರದೇಶ ಮೌರ್ಯರ ಆಳ್ವಿಕೆಗೆ ಒಳಪಟ್ಟಿರಬಹುದೆಂದು ಹೇಳಬಹುದು.

ಕ್ರಿ.ಪೂ.೨೨೦ರಿಂದ ಕ್ರಿ.ಶ.೨೩೦ರವರೆಗೆ ಶಾತವಾಹನರು ಆಳ್ವಿಕೆಗೆ ಒಳಪಟ್ಟಿದ್ದು ಇವರ ಮೂಲ ನೆಲೆಯು ಬಳ್ಳಾರಿ ಜಿಲ್ಲೆಯೆಂದು ಹಲವು ಚರಿತ್ರೆಕಾರರ ಅಭಿಪ್ರಾಯ. ಜಿಲ್ಲೆಯ ಹಿರೇಹಡಗಲಿಯಲ್ಲಿ ದೊರೆತ ತಾಮ್ರಪತ್ರಗಳಲ್ಲಿ ಬಳ್ಳಾರಿ ಪ್ರದೇಶಕ್ಕೆ 'ಶಾತಹನಿಹಾರ' ಮತ್ತು 'ಸಾತವನಿರರು' ಎಂದು ಕರೆಯಲಾಗುತ್ತಿತ್ತು ಎಂಬ ಅಂಶವೂ ಇಲ್ಲಿ ದೊರೆತ ತಾಮ್ರಪತ್ರಗಳಿಂದ ತಿಳಿದುಬರುತ್ತದೆ.

ಬಳ್ಳಾರಿ ಜಿಲ್ಲೆಯ ಕೋಳೂರಿನ ಶಾಸನವು ಗುಪ್ತರು ಉತ್ತರ ಭಾರತದಿಂದ ಬಳ್ಳಾರಿ ಜಿಲ್ಲೆಯವರೆಗೂ ತಮ್ಮ ಆಳ್ವಿಕೆಯನ್ನು ವಿಸ್ತರಿಸಿದ ಕುರುಹುಗಳನ್ನು ನೀಡುತ್ತದೆ. ಕ್ರಿ.ಶ. ೩೪೦ರಲ್ಲಿ ದಕ್ಷಿಣ ಭಾರತಕ್ಕೆ ಸಮುದ್ರಗುಪ್ತನು ದಂಡಯಾತ್ರೆ ಕೈಗೊಂಡು ಬಳ್ಳಾರಿಯ ಪ್ರದೇಶವನ್ನು ತನ್ನ ಆಳ್ವಿಕೆಗೆ ಸೇರಿಸಿಕೊಂಡ ಎಂದು ಅಲಹಾಬಾದ್ ಸ್ತಂಭಶಾಸನ ತಿಳಿಸುತ್ತದೆ. ಈ ಪ್ರದೇಶದಲ್ಲಿಯೇ ಗುಪ್ತರ ವಂಶಕ್ಕೆ ಸಂಬಂಧಪಟ್ಟ ಶಾಲೆಯೊಂದು ಬಳ್ಳಾರಿಯ ಗಡಿಭಾಗದಲ್ಲಿ ಇತ್ತೆಂದು ಶಾಸನಗಳು ಹೇಳುತ್ತವೆ.

ಕದಂಬರು ಕನ್ನಡಿಗರಾಗಿದ್ದು, ಕನ್ನಡದ ಪ್ರಥಮ ಚಕ್ರವರ್ತಿಗಳೆಂಬ ಹೆಗ್ಗಳಿಕೆಗೆ ಪಾತ್ರವಾಗಿದ್ದರು. ತಮ್ಮ ರಾಜ್ಯವನ್ನು ಪಶ್ಚಿಮ ಕಡಲಿನಿಂದ ಬಳ್ಳಾರಿಯ ಉಚ್ಚಂಗಿಯವರೆಗೂ ವಿಸ್ತರಿಸಿದರು. ಇದಕ್ಕೆ ಬನವಾಸಿ ೧೨೦೦ ಎಂದು ಕರೆದರು. ಕಾರ್ತಿಕೇಯ ಸ್ವಾಮಿ ದೇವಾಲಯ ಇರುವ ಸಂಡೂರಿನ ಪ್ರದೇಶವು ಕದಂಬರು ಮತ್ತು ಚಾಲುಕ್ಯರ ಕಾಲಗಳಲ್ಲಿ ಪ್ರಮುಖವಾಗಿತ್ತು ಎಂದು ಹಲವು ಉಲ್ಲೇಖಗಳಿವೆ. 'ಕದಂಬಿಳಗೆ ಸಾಸಿರ' ಎಂದು ಕರೆಯಲಾಗುತ್ತಿದ್ದು, ಬಳ್ಳಾರಿ ಜಿಲ್ಲೆಯ ಹರಪನಹಳ್ಳಿ, ಕೂಡ್ಲಿಗಿ, ತಾಲ್ಲೂಕುಗಳು ಮತ್ತು ಕೆಲವು ಗ್ರಾಮಗಳು ಇವರ ಆಳ್ವಿಕೆಗೆ ಒಳಗೊಂಡಿದ್ದು ಕಂಡುಬರುತ್ತದೆ.

ಗಂಗವಂಶದ ಅರಸರಿಗೆ ಕರ್ನಾಟಕ ಇತಿಹಾಸದಲ್ಲಿ ವಿಶಿಷ್ಟ ಸ್ಥಾನವಿದೆ. ದುರ್ವಿನೀತನ ಕಾಲಘಟ್ಟದಲ್ಲಿ ಕ್ರಿ.ಶ.೫೪೯-೫೭೦ರವರೆಗೆ ಗಂಗರು ಬಳ್ಳಾರಿ ಜಿಲ್ಲೆಯನ್ನು ಆಳ್ವಿಕೆ ಮಾಡುತ್ತಿದ್ದ ಆಧಾರಗಳು ಕಂಡುಬರುತ್ತವೆ.

ಕುರುಗೋಡು ಶಾಸನವೊಂದರಲ್ಲಿ ಬಳ್ಳಾರಿ ಪ್ರದೇಶ ಎರಡನೆಯ ಪುಲಿಕೇಶಿಯ ಆಳ್ವಿಕೆಯ ಒಂದು ಪ್ರದೇಶವಾಗಿತ್ತು. ಅವನ ನಂತರ ಆದಿತ್ಯವರ್ಮ ಮತ್ತು ಚಂದ್ರಾದಿತ್ಯವರ್ಮರ ಅಧೀನದಲ್ಲಿ ಆಳಲ್ಪಟ್ಟಿರುವ ಉಲ್ಲೇಖಗಳು ಕಂಡುಬರುತ್ತವೆ. ಗುತ್ತಿ ತಾಲ್ಲೂಕಿನ ಪೆನ್ನವಡ ಗೂರು ಶಾಸನದ ಮೂಲಕ ಬಳ್ಳಾರಿಯಲ್ಲಿ ಬಾದಾಮಿ ಅರಸ ಇಮ್ಮಡಿ ಪುಲಿಕೇಶಿಯು ಬಾಣದೊರೆ ರಣವಿಕ್ರಮನನ್ನು ಸೋಲಿಸಲು ಬಳ್ಳಾರಿಗೆ ಬಂದಿದ್ದು, ರಣವಿಕ್ರಮನನ್ನು ಸೋಲಿಸಿ 'ಉಳ್ವತ್ತು ಸಿಂಬಿಗೆ' ನಾಡನೂರು ಗ್ರಾಮಗಳನ್ನು ಜನರಿಗೆ ಕೊಟ್ಟ ಅಂಶಗಳು ಉಲ್ಲೇಖವಾಗುತ್ತವೆ.

ಬಳ್ಳಾರಿಯಲ್ಲಿ ದೊರೆತ ಹಲವು ಶಾಸನಗಳು ಹೇಳುವಂತೆ ರಾಷ್ಟ್ರಕೂಟರು ಬಾದಾಮಿಯ ಚಾಲುಕ್ಯರನ್ನು ಸೋಲಿಸಿ ಅವರ ಶಕ್ತಿಯನ್ನು ಇಮ್ಮಡಿಸಿ ಸಾಮ್ರಾಜ್ಯ ವಿಸ್ತಾರ ಮಾಡಿದ ಉಲ್ಲೇಖ ಗಳಿವೆ. ಇಮ್ಮಡಿ ಕೃಷ್ಣ ಸಂಡೂರಿನ ಸಮೀಪದಲ್ಲಿ ಇರುವ ಕುಮಾರಸ್ವಾಮಿ ದೇವಾಲಯಕ್ಕೆ ದತ್ತಿ ಬಿಟ್ಟಿದ್ದನ್ನು ಸಂಡೂರಿನ ಶಾಸನ ತಿಳಿಸುತ್ತದೆ.

ಜಯಸಿಂಹನ ರಾಣಿ ದೇವಲದೇವಿ ಬಳ್ಳಾರಿ ಪ್ರದೇಶದವಳೆಂದು ಓರುವಾಯಿ ಶಾಸನದಿಂದ ತಿಳಿದುಬರುತ್ತದೆ. ಇವರ ಕಾಲಘಟ್ಟದಲ್ಲಿ ಬಳ್ಳಾರಿ ಪ್ರದೇಶದ ಹಲವಾರು ದೇವಾಲಯಗಳಿಗೆ, ಮಠಗಳಿಗೆ, ದತ್ತಿದಾನಗಳನ್ನು ಕೊಟ್ಟಿದ್ದು ಕಂಡುಬಂದಿದೆ. ಇವರು ಅನೇಕ ದೇವಾಲಯಗಳನ್ನು ನಿರ್ಮಿಸಿದ್ದು ಐದನೇ ವಿಕ್ರಮಾದಿತ್ಯನ ಒಂದು ಶಾಸನ ಬಳ್ಳಾರಿ ಪ್ರದೇಶದಲ್ಲಿ ಕಂಡುಬಂದಿದೆ. ಇಲ್ಲಿ ಆರನೇ ವಿಕ್ರಮಾದಿತ್ಯನ ಹಲವು ಶಾಸನಗಳು ದೊರೆತಿವೆ. ಕ್ರಿ.ಶ.೧೦೭೧ರ ಅಂತಿಮ ಅವಧಿಯಲ್ಲಿ ಹಡಗಲಿಯ ಶಾಸನದಲ್ಲಿ ಇಮ್ಮಡಿ ಸೊಮೇಶ್ವರ ಚಕ್ರವರ್ತಿಯಾಗಿ ಜೀವಂತವಾಗಿ ಇರುವಾಗಲೇ ವಿಕ್ರಮಾದಿತ್ಯನು ತನ್ನನ್ನು ಚಕ್ರವರ್ತಿಯೆಂದು ಕರೆದುಕೊಂಡಿದ್ದು ಕಂಡುಬಂದಿದೆ.

ಹೊಯ್ಸಳ ವಂಶದ ಮಹಾಮಂಡಳೇಶ್ವರ ವಿಷ್ಣುವರ್ಧನನಿಂದ ಬಳ್ಳಾರಿ ಪ್ರದೇಶ ಆಳ್ವಿಕೆಗೆ ಒಳಪಡುತ್ತದೆ. ಕ್ರಿ.ಶ.೧೧೮೯ರ ಸುಮಾರಿಗಾಗಲೇ ಬಳ್ಳಾರಿಯು ಸಂಪೂರ್ಣವಾಗಿ ಹೊಯ್ಸಳರ ಆಡಳಿತಕ್ಕೆ ಒಳಗಾಗಿತ್ತು. ಎರಡನೇ ವೀರಬಲ್ಲಾಳ ಪದುಮಲ ದೇವಿಯವರ ಪುತ್ರ ವೀರನರಸಿಂಹನ ಆಳ್ವಿಕೆಯ ಕಾಲಾವಧಿಯಲ್ಲಿ ಬಳ್ಳಾರಿ ಪ್ರದೇಶವು ಹೊಯ್ಸಳರಿಗೆ ಒಳಪಟ್ಟಿತ್ತು. ಕ್ರಿ.ಶ.೧೨೮೦ರಿಂದ ೧೩೨೬ವರೆಗೆ ಬಳ್ಳಾರಿಯು ಮುಮ್ಮಡಿ ಸಿಂಗೇನಾಯಕ ಅವನ ಪುತ್ರ ವೀರ ಕಂಪಿಲರಾಯ ಮತ್ತು ಅವನ ಪುತ್ರ ಕುಮಾರರಾಮನ ಆಳ್ವಿಕೆಗೆ ಸೇರಿತ್ತು. ಅನಂತರ ದೆಹಲಿ ಸುಲ್ತಾನರ ದಾಳಿಯಿಂದ ವೀರಕಂಪಿಲರಾಯ ಮತ್ತು ಕುಮಾರರಾಮ ಮರಣ ಹೊಂದುತ್ತಾರೆ. ೧೩೩೬ರ ಹೊತ್ತಿಗೆ ವಿಜಯನಗರ ಸಾಮ್ರಾಜ್ಯ ಸ್ಥಾಪನೆಗೊಂಡು ಹಂಪಿಯನ್ನು ರಾಜಧಾನಿಯಾಗಿ ಮಾಡಿಕೊಂಡು ಆಳ್ವಿಕೆಯನ್ನು ನಡೆಸಲಾಗಿತ್ತು. ವಿಜಯನಗರ ಸಾಮ್ರಾಜ್ಯ ಸ್ಥಾಪನೆಯಾಗಿ ನಾಲ್ಕು ವಂಶಗಳು ಆಳ್ವಿಕೆ ನಡೆಸಿದ್ದು

ಈ ವಂಶಗಳ ಕೊನೆಯ ದೊರೆಯಿಂದ ಬಿಜಾಪುರದ ಒಂದನೇ ಅಲಿ ಆದಿಲ್‌ಷಾ ೧೫೬೮ರಲ್ಲಿ ರಾಜ್ಯವನ್ನು ಪಡೆದುಕೊಂಡನು.[೧]

ಕ್ರಿ.ಶ.೧೬೧೫ರವರೆಗೆ ಜರಿಮಲೆ ಅರಸನ ಅಧೀನದಲ್ಲಿ ಬಳ್ಳಾರಿಯ ಸಂಡೂರು, ಸಂಸ್ಥಾನ ಇತ್ತು. ನಂತರ ಸಿದ್ದೋಜಿ ಘೋರ್ಪಡೆ ಮರಾಠರ ಮುಖಂಡರೆಂದು ಘೋಷಿಸಿಕೊಂಡರು. ಆ ಸಮಯದಲ್ಲಿ ಬಳ್ಳಾರಿ ಸ್ಥಳೀಯ ಆಳ್ವಿಕೆಯಿಂದ ಶಿವಾಜಿಯ ಸಂಸ್ಥಾನ ವಶಪಡಿಸಿಕೊಂಡಿತ್ತು. ನಂತರ ಶಿವಾಜಿಯ ಮರಣಾನಂತರ ೧೬೦೬ರಲ್ಲಿ ಔರಂಗಜೇಬ್ ಅಧೀನಕ್ಕೆ ಒಳಪಡುತ್ತದೆ. ನಂತರ ಬಳ್ಳಾರಿ ಸೇರಿದಂತೆ ಹಲವು ಭಾಗಗಳು ಹೈದರಾಬಾದಿನ ನಿಜಾಮನ ಅಧೀನಕ್ಕೆ ಒಳಗಾಗುತ್ತವೆ.

ಕ್ರಿ.ಶ.೧೭೯೨ರಲ್ಲಿ ಟಿಪ್ಪುಸುಲ್ತಾನನ ವಿರುದ್ಧ ಒಪ್ಪಂದವನ್ನು ಮಾಡಿಕೊಂಡ ಲಾರ್ಡ್‌ಕಾರ್ನ್ ವಾಲಿಸ್, ಮರಾಠರು, ನಿಜಾಮರು ಟಿಪ್ಪುವಿನ ಮರಣ ನಂತರ ರಾಜ್ಯ ಹಂಚಿಕೆಯ ವಿವಾದ ಉಂಟಾಯಿತು. ಆ ಹೊತ್ತಿಗೆ ಮೈಸೂರು ಪ್ರದೇಶ ಬಾಂಬೆ ಕರ್ನಾಟಕ ಮತ್ತು ಹೈದರಾಬಾದ್ ಕರ್ನಾಟಕ ಪ್ರದೇಶಗಳು ಬ್ರಿಟಿಷರ ನೆಲೆಯಾಗಿದ್ದವು. ಕ್ರಿ.ಶ.೧೮೦೦ರ ಡಿಸೆಂಬರ್ ಹೊತ್ತಿಗೆ ಬಳ್ಳಾರಿ ಪ್ರದೇಶವು ನಿಜಾಮನಿಂದ ಬ್ರಿಟಿಷರಿಗೆ ಹಸ್ತಾಂತರಿಸಲ್ಪಟ್ಟಿತು. ಆಗ ಬಳ್ಳಾರಿ ಪ್ರದೇಶವನ್ನು ರೆವಿನ್ಯೂ ಜಿಲ್ಲೆಯೆಂದು ಮಾಡಿದರು. ಆಗ ಮದ್ರಾಸ್ ಆಧಿಪತ್ಯದಲ್ಲಿ ೨೪ ಜಿಲ್ಲೆಗಳನ್ನು ಒಳಗೊಂಡಿತ್ತು.

ಮೈಸೂರು ಸಂಸ್ಥಾನವು ಕ್ರಿ.ಶ.೧೭೯೯ರಲ್ಲಿ ನಾಲ್ಕನೇ ಮೈಸೂರು ಯುದ್ಧದ ನಂತರ ಅಸ್ತಿತ್ವಕ್ಕೆ ಬಂದಿತು. ರಾಜ್ಯ ಪುನರ್ವಿಂಗಡಣಾ ಕಾಯಿದೆಯ ಅಡಿಯಲ್ಲಿ ನೂತನ ರಾಜ್ಯಕ್ಕೆ ಒಂದು ಕೇಂದ್ರವಾಯಿತು. ಆಗ ಸಂಸ್ಥಾನದ ವಿಸ್ತೀರ್ಣ ೬೫೪೨ ಚ.ಕಿ.ಮೀ. ಆಗಿತ್ತು. ೧೮೦೦ರಲ್ಲಿಯೇ ಬಳ್ಳಾರಿ ಬ್ರಿಟಿಷರ ಆಳ್ವಿಕೆಗೆ ಸೇರಿತು. ಬ್ರಿಟಿಷರು ಮದ್ರಾಸ್ ಪ್ರದೇಶಕ್ಕೆ ಸೇರಿಸಿಕೊಂಡು ೧೪೬ ವರ್ಷಗಳ ಆಳ್ವಿಕೆಯನ್ನು ನಡೆಸಿದರು. ಆ ಸಂದರ್ಭದಲ್ಲಿ ಈ ಪ್ರದೇಶದಲ್ಲಿ ೧೮ ತಾಲ್ಲೂಕುಗಳಿದ್ದವು. ನಂತರ ೧೮೦೮ಕ್ಕೆ ತಾಲ್ಲೂಕುಗಳ ಸಂಖ್ಯೆ ೧೫ಕ್ಕೆ ಬಂದಿತು. ಈ ಮೇಲ್ಕಂಡ ೧೫ ತಾಲ್ಲೂಕುಗಳು ಬಳ್ಳಾರಿ ವ್ಯಾಪ್ತಿಯಲ್ಲಿದ್ದವು. ೧೮೮೨ರಲ್ಲಿ ಎರಡು ಜಿಲ್ಲೆಗಳಾಗಿ ವಿಂಗಡಣೆಯಾಯಿತು. ಬಳ್ಳಾರಿ ಮತ್ತು ಅನಂತಪುರ ಜಿಲ್ಲೆಗಳಾಗಿ ವಿಂಗಡನೆಯಾದ ನಂತರ ಬಳ್ಳಾರಿ ಜಿಲ್ಲೆಯಲ್ಲಿ ೮ ತಾಲ್ಲೂಕುಗಳನ್ನು ಉಳಿಸಿ ೬ ತಾಲ್ಲೂಕುಗಳನ್ನು ಅನಂತಪುರ ಜಿಲ್ಲೆಗೆ ಸೇರಿಸಲಾಯಿತು. ಆ ಸಮಯದಲ್ಲಿ ಈ ಪ್ರಾಂತ್ಯದಲ್ಲಿ ಬಳ್ಳಾರಿ ಜಿಲ್ಲೆಯ ಭೌಗೋಳಿಕ ನೆಲೆಯು ಆಯಕಟ್ಟಿನದಾಗಿತ್ತು. ಆದ್ದರಿಂದ ಆ ಪ್ರದೇಶದಲ್ಲಿ ಅನೇಕ ಅಭಿವೃದ್ಧಿ ಕಾರ್ಯಕ್ರಮಗಳನ್ನು ಬ್ರಿಟಿಷರು ಕೈಗೊಂಡರು. ೧೮೬೧ರಲ್ಲಿ ಬಳ್ಳಾರಿ–ಗುಂತಕಲ್ಲು ರೈಲು ಮಾರ್ಗವನ್ನು ನಿರ್ಮಿಸಲಾಯಿತು. ಬಳ್ಳಾರಿಗೆ ರೈಲ್ವೆ ಸಾರಿಗೆ ಸಂಪರ್ಕ ಒದಗಿಸಲಾಯಿತು. ಅದೇ ರೀತಿಯಾಗಿ ೧೮೮೪ರಲ್ಲಿ ಬಳ್ಳಾರಿ–ಹೊಸಪೇಟೆ ನಡುವೆ ರೈಲು ಮಾರ್ಗ ನಿರ್ಮಿಸಲಾಯಿತು. ೧೯ನೇ ಶತಮಾನದ ಕೊನೆಯ ಭಾಗದಲ್ಲಿ ಬಳ್ಳಾರಿ ನಗರದಲ್ಲಿ ಭದ್ರವಾದ

ಕಾರಾಗೃಹವೊಂದನ್ನು ಕಟ್ಟಲಾಯಿತು. ಇಷ್ಟೆಲ್ಲ ಕಾರ್ಯಕ್ರಮಗಳು ಬಳ್ಳಾರಿ ವ್ಯಾಪ್ತಿಯಲ್ಲಿ ನಡೆದರೂ ೧೮೮೧ರಿಂದ ೧೮೯೮ರವರೆಗೂ ಬಳ್ಳಾರಿ ಜಿಲ್ಲೆಗೆ ಸ್ಪಷ್ಟವಾದ ನಕಾಶೆಯೇ ಸಿಕ್ಕಿರಲಿಲ್ಲ. ಕಾರಣ ೧೮೯೫ವರೆಗೂ ಜಿಲ್ಲೆಯ ಹಲವಾರು ರೀತಿಯ ಭೌಗೋಳಿಕ ನಕಾಶೆಯ ಬದಲಾವಣೆಗಳು ನಡೆದಿವೆ.[೨]

೧೯೦೧ರಲ್ಲಿ ಬಳ್ಳಾರಿಯ ಪ್ರದೇಶ ವ್ಯಾಪ್ತಿಯಲ್ಲಿ ಎರಡು ಮುನಿಸಿಪಾಲಿಟಿಗಳಿದ್ದವೆಂದು ತಿಳಿದುಬಂದಿದೆ. ಮೊದಲನೆಯದು ಬಳ್ಳಾರಿ ಮುನಿಸಿಪಾಲಿಟಿ, ಮತ್ತೊಂದು ಆದೋನಿ ಮುನಿಸಿಪಾಲಿಟಿ. ಅದೇ ರೀತಿಯಲ್ಲಿ ಇವು ಮೂರು ತಾಲ್ಲೂಕು ಬೋರ್ಡ್‌ಗಳನ್ನು ಒಳಗೊಂಡಿತ್ತು. ೧೯ ಯೂನಿಯನ್‌ಗಳಿಗೆ ಸಂಬಂಧಿಸಿದಂತೆ ಬಳ್ಳಾರಿ ಕೇಂದ್ರವಾಗಿ ಕಾರ್ಯ ನಿರ್ವಹಿಸಲಾಗುತ್ತಿತ್ತು. ಬಳ್ಳಾರಿ ತಾಲ್ಲೂಕು ಬೋರ್ಡ್‌ನ ವ್ಯಾಪ್ತಿಯಲ್ಲಿ ಹೀರೆಹಾಳು, ಕಣಿಕಲ್ಲು, ಕುಡತಿನಿ, ರಾಯದುರ್ಗ, ಸಿರಗುಪ್ಪ ಮತ್ತು ಹೊಸಪೇಟೆ ಬೋರ್ಡ್ ವ್ಯಾಪ್ತಿಯಲ್ಲಿ ಹಡಗಲಿ, ಹರಪನಹಳ್ಳಿ, ಕಮಲಾಪುರ, ಕಂಪ್ಲಿ, ಕೊಟ್ಟೂರು, ಕೂಡ್ಲಿಗಿ, ನಾರಾಯಣದೇವರಕೆರೆ, ಆದೋನಿ ಬೋರ್ಡ್ ವ್ಯಾಪ್ತಿಯಲ್ಲಿ ಹೊಲಾಡ್ಡಿಗುಡಿ, ಕಟ್ಟೆಲಲಮ್ಮ, ಕೊಸಗಿ, ಎಮ್ಮಿಗನೂರು ಪ್ರದೇಶಗಳನ್ನು ಒಳಗೊಂಡಂತೆ ಸ್ಥಳೀಯ ಆಡಳಿತ ಕೇಂದ್ರಗಳಾಗಿ ಕಾರ್ಯ ನಿರ್ವಹಿಸುತ್ತಿದ್ದವು.[೩]

೧೮೮೧ರಲ್ಲಿ ಮೈಸೂರು ಸಂಸ್ಥಾನವು ಬೆಂಗಳೂರು, ತುಮಕೂರು, ಕೋಲಾರ, ಕಡೂರು, ಮೈಸೂರು, ಚಿತ್ರದುರ್ಗ ಮತ್ತು ಶಿವಮೊಗ್ಗ ಜಿಲ್ಲೆಗಳನ್ನು ಹೊಂದಿತ್ತು. ೧೮೮೬ರಲ್ಲಿ ಎಂಟನೇ ಜಿಲ್ಲೆಯಾಗಿ ಹಾಸನ ೧೯೩೯ರಲ್ಲಿ ಮಂಡ್ಯ ಒಂಬತ್ತನೇ ಜಿಲ್ಲೆಯಾಗಿ ರಚನೆಗೊಂಡಿತು.[೪]

೧೯೨೦ರಿಂದ ಬಳ್ಳಾರಿಯ ಪ್ರದೇಶಗಳಿಗೆ ಸಂಬಂಧಿಸಿದಂತೆ ಹಲವಾರು ಮಾರ್ಪಾಡುಗಳು ಆಗುತ್ತಿದ್ದವು. ೧೯೨೦ರಲ್ಲಿ ಬಳ್ಳಾರಿಯ ಬಗ್ಗೆ ವಿವಾದವೇ ಸೃಷ್ಟಿಯಾಯಿತು. ಈ ವಿವಾದ ಇತ್ಯರ್ಥಕ್ಕಾಗಿ ಕೇಳ್ಕರ್ ಸಮಿತಿಯನ್ನು ರಚಿಸಲಾಯಿತು. ಈ ಸಮಿತಿಯ ವರದಿಯ ಪ್ರಕಾರ ರಾಯದುರ್ಗ, ಆಲೂರು, ಆದವಾನಿ ತಾಲ್ಲೂಕುಗಳನ್ನು ಹೊರತುಪಡಿಸಿ ಬಳ್ಳಾರಿ ಜಿಲ್ಲೆಯನ್ನು ಕರ್ನಾಟಕ ಪ್ರದೇಶವೆಂದು ಹೇಳಿಕೆ ನೀಡಿ ಅದನ್ನು ಕೆಪಿಸಿಸಿ ವ್ಯಾಪ್ತಿಗೆ ಒಳಪಡಿಸಿತು. ನಂತರ ಬಳ್ಳಾರಿ ಸಮಸ್ಯೆಯನ್ನು ಒಳಗೊಂಡಂತೆ ಕೆ.ಎನ್.ವಾಂಛೂ ಸಮಿತಿ ನೇಮಕವಾಯಿತು. ಈ ಸಮಿತಿಯು ಬಳ್ಳಾರಿ ಪಟ್ಟಣ ಮತ್ತು ಸುತ್ತಮುತ್ತಲಿನ ಹಳ್ಳಿಗಳ ಬಗ್ಗೆ ಸ್ಪಷ್ಟವಾಗಿ ವರದಿಯನ್ನು ನೀಡದೇ ಇದ್ದದ್ದು ಕಂಡುಬಂದಿತ್ತು. ಅನಂತರ ಬಳ್ಳಾರಿಯ ತಾಲೂಕಿನ ಅಧ್ಯಯನ ಮಾಡಿ ಎಲ್.ಎಸ್.ಮಿಶ್ರಾ ಅವರು ವರದಿಯನ್ನು ಸಲ್ಲಿಸಿದರು. ಆ ವರದಿಯು ಬಳ್ಳಾರಿಯನ್ನು ಕರ್ನಾಟಕಕ್ಕೆ ಸೇರಿಸಬೇಕೆಂದು ಹೇಳಿ ಈ ರೀತಿಯಾಗಿ ಬಳ್ಳಾರಿ ಪ್ರಾಂತ್ಯವು ವಿವಾದಗಳಿಗೆ ಒಳಗಾಗಿ ಹಲವು ರೀತಿಯ ಇತಿಹಾಸವನ್ನು ಕಟ್ಟಿಕೊಂಡಿತು.[೫]

ಈ ಸಮಿತಿಗಳ ಶಿಫಾರಸ್ಸುಗಳು ಮತ್ತು ವರದಿಗಳಿಂದ ಬಳ್ಳಾರಿಯ ಪ್ರಾದೇಶಿಕತೆಯ ಚರ್ಚೆಗಳು ನಡೆಯುತ್ತ ಇದ್ದವು. ೧೯೫೩ರ ಡಿಸೆಂಬರ್ ೨೯ರಲ್ಲಿ ಫಜಲ್ ಆಲಿ ಕಮೀಶನ್, ಬಳ್ಳಾರಿ ಜಿಲ್ಲೆಯ ಕುರಿತು ತೀರ ಭಿನ್ನವಾದ ಅಂಶಗಳನ್ನು ಹೊರಹಾಕಿತು. ಸಿರುಗುಪ್ಪ, ಬಳ್ಳಾರಿ ಮತ್ತು ಹೊಸಪೇಟೆ ತಾಲ್ಲೂಕುಗಳು ಮತ್ತು ಮಲ್ಲಾಪುರ ಸಬ್ ತಾಲ್ಲೂಕಿನ ಚಿಕ್ಕ ಭಾಗವೊಂದು ಎಂದರೆ ತುಂಗಭದ್ರಾ ಪ್ರಾಜೆಕ್ಟ್‌ನಲ್ಲಿ ಮುಖ್ಯ ಕೇಂದ್ರಗಳಾಗಿವೆಯೋ ಅಂತಹ ಭಾಗಗಳ ನಗರಗಳನ್ನು ಕರ್ನಾಟಕದಿಂದ ಹೊರಗೆ ಇಡಲು ಶಿಫಾರಸ್ಸು ಮಾಡಿತು. ಈ ಶಿಫಾರಸ್ಸಿನಿಂದ ಬಳ್ಳಾರಿ ಜನತೆಯ ಹೋರಾಟಗಳು ಹೆಚ್ಚಾದ ಕಾರಣ ಪಾರ್ಲಿಮೆಂಟ್ ಬಳ್ಳಾರಿಯ ಸ್ಥಾನವನ್ನು ಸುರಕ್ಷಿತವಾಗಿ ಉಳಿಸಿತು. ೧೯೫೫ರ ಸಂದರ್ಭದಲ್ಲಿ ಕರ್ನಾಟಕ ರಾಜ್ಯ ನಿರ್ಮಾಣವಾಗಬೇಕೆಂದು 'ಮೈಸೂರು ರಾಜ್ಯ' ಎಂಬ ಹೊಸ ರಾಜ್ಯ ಕುರಿತು ಶಾಸನಮಂಡಲ ಚರ್ಚೆಯನ್ನು ಪಡೆದು ಈ ಹೊಸ ರಾಜ್ಯದಿಂದ ಬಳ್ಳಾರಿಯನ್ನು ಬೇರ್ಪಡಿಸಬಾರದೆಂಬ ನಿರ್ಣಯವನ್ನು ಅಂಗೀಕರಿಸಲಾಯಿತು.[೬] ೧೯೫೬ರಲ್ಲಿ ನವೆಂಬರ್ ಒಂದನೆಯ ತಾರೀಖು ವಿಶಾಲ ಮೈಸೂರು ರಾಜ್ಯ ಉದಯವಾಯಿತು. ೧೯೭೩ರಲ್ಲಿ ಕರ್ನಾಟಕ ರಾಜ್ಯ ಎಂದು ಹೆಸರಿಸಲಾಯಿತು. ಹೀಗೆ ಬಳ್ಳಾರ್ರಿ ಜಿಲ್ಲೆಯು ಹಲವಾರು ವಿಶೇಷತೆಗಳಿಂದ ಕೂಡಿದ್ದು, ಹಲವಾರು ಹೋರಾಟಗಳ ಮತ್ತು ಬಲಿದಾನಗಳ ಮೂಲಕ ತನ್ನ ರಾಜ್ಯದ ಪ್ರತ್ಯೇಕತೆಯನ್ನು ಉಳಿಸಿಕೊಂಡು ಬಂದಿದೆ. ನವಕರ್ನಾಟಕದಲ್ಲಿ ಬಳ್ಳಾರಿ ಜಿಲ್ಲೆಯ ಹಲವಾರು ಅಂಶಗಳು ಸೇರಿದಂತೆ ಪ್ರಸ್ತುತ ಅಧ್ಯಯನಕ್ಕೆ ಪೂರಕವಾಗುವಂತಹ ಮಾಹಿತಿಯನ್ನು ಬಳಸಿಕೊಂಡಿದ್ದೇನೆ.

### ಬಳ್ಳಾರಿ ಜಿಲ್ಲೆಯ ವಿಸ್ತೀರ್ಣ ಮತ್ತು ಸರಹದ್ದು

ಬಳ್ಳಾರಿ ಜಿಲ್ಲೆಯ ವಿಸ್ತೀರ್ಣ ೮೪೫೦ ಚ.ಕಿ.ಮೀ. ಇದನ್ನು ರಾಜ್ಯದ ಒಟ್ಟು ವಿಸ್ತೀರ್ಣಕ್ಕೆ ಹೋಲಿಸಿದರೆ ಶೇ.೬ರಷ್ಟಾಗುತ್ತದೆ. ವಿಸ್ತೀರ್ಣದಲ್ಲಿ ಈ ಜಿಲ್ಲೆ ೧೧ನೇ ಸ್ಥಾನದಲ್ಲಿದೆ. ಜಿಲ್ಲೆಯು ಬೆಂಗಳೂರಿನಿಂದ ೩೦೪ ಕಿ.ಮೀ. ದೂರದಲ್ಲಿದೆ. ಇದು ಕರ್ನಾಟಕ ರಾಜ್ಯದ ಪೂರ್ವಭಾಗದ ಮಧ್ಯದಲ್ಲಿ ದಕ್ಷಿಣೋತ್ತರದವರೆಗೆ ಹಬ್ಬಿದೆ. ೧೪೦–೧೩೦ ಮತ್ತು ೧೫೦–೫೦೦ ಉತ್ತರ ಅಕ್ಷಾಂಶ ಹಾಗೂ ೭೦೦–೪೦೦ ಮತ್ತು ೭೭೦–೧೧೦ ಪೂರ್ವ ರೇಖಾಂಶಗಳ ಮಧ್ಯದಲ್ಲಿದೆ. ಜಿಲ್ಲೆಯ ಉತ್ತರದಲ್ಲಿ ರಾಯಚೂರು, ಪಶ್ಚಿಮದಲ್ಲಿ ಹಾವೇರಿ, ದಕ್ಷಿಣದಲ್ಲಿ ಚಿತ್ರದುರ್ಗ ಜಿಲ್ಲೆಗಳು ಹಾಗೂ ಪೂರ್ವದಲ್ಲಿ ಆಂಧ್ರ ಪ್ರದೇಶದ ಕರ್ನೂಲು ಜಿಲ್ಲೆ ಮತ್ತು ಅನಂತಪುರ ಜಿಲ್ಲೆಗಳಿಂದ ಆವೃತವಾಗಿದೆ. ತುಂಗಭದ್ರಾ ನದಿಯು ಪಶ್ಚಿಮ ಮತ್ತು ಉತ್ತರ ಮೇರೆಯಾಗಿ ಹರಿಯುತ್ತದೆ.

### ಜಿಲ್ಲೆಯ ಭೌಗೋಳಿಕ ಅಂಶಗಳು

**ಹವಾಮಾನ:** ಬಳ್ಳಾರಿಯು ವರ್ಷದ ಹೆಚ್ಚಿನ ಭಾಗ ಶುಷ್ಕವಾಗಿದ್ದು, ಬೇಸಿಗೆಯಲ್ಲಿ ಉಷ್ಣಾಂಶದಿಂದ ಕೂಡಿರುತ್ತದೆ. ಡಿಸೆಂಬರ್ ತಿಂಗಳಿನಿಂದ ಫೆಬ್ರವರಿಯವರೆಗೆ ವಾತಾವರಣ ತಂಪಾಗಿರುತ್ತದೆ.

ಚಳಿಗಾಲದಲ್ಲಿ ಕನಿಷ್ಠ ಉಷ್ಣಾಂಶ ೯೦–೧೦೦ ಚ.ಸೆ. ಇದ್ದು, ಗರಿಷ್ಠ ಉಷ್ಣಾಂಶ ೩೫ ಸೆ.ವರೆಗೆ ಇರುತ್ತದೆ. ಬೇಸಿಗೆ ಕಾಲದಲ್ಲಿ ಅಂದರೆ ಮಾರ್ಚ್‌ನಿಂದ ಮೇವರೆಗೆ ಬಿರು ಬಿಸಿಲಿನಿಂದ ಕೂಡಿದ್ದು ಉಷ್ಣಾಂಶವು ಕನಿಷ್ಠ ೧೫ರಿಂದ ೪೪ ಸೆಂ.ವರೆಗೆ ಕಂಡುಬರುತ್ತದೆ. ಉತ್ತರ ಕರ್ನಾಟಕ ಜಿಲ್ಲೆಗಳು ಸಾಮಾನ್ಯವಾಗಿ ಹೆಚ್ಚು ಉಷ್ಣಾಂಶ ಹೊಂದಿದ್ದು, ಬಳ್ಳಾರಿ ಜಿಲ್ಲೆಯು ಕೈಗಾರಿಕಾ ಪ್ರದೇಶವಾಗಿದ್ದು, ಬೇಸಿಗೆಯಲ್ಲಿ ದಿನದಿನಕ್ಕೆ ಹೆಚ್ಚು ಹೆಚ್ಚು ಉಷ್ಣಾಂಶ ದಾಖಲಾಗುವುದು ಕಂಡುಬಂದಿದೆ.

ಜಿಲ್ಲೆಯು ಕರ್ನಾಟಕ ಪ್ರಿಕೇಂಬ್ರಿಯ್ ಭೂ ಭಾಗವಾಗಿದ್ದು ಕಲ್ಲು ಮತ್ತು ಬೆಣಚು ಕಲ್ಲುಗಳಿಂದ ಕೂಡಿದೆ. ಇಲ್ಲಿ ಕಬ್ಬಿಣ ಮತ್ತು ಮ್ಯಾಂಗನೀಸ್ ಅದಿರು ಹೆಚ್ಚಾಗಿ ದೊರೆಯುತ್ತದೆ. ಸಂಡೂರು ತಾಲ್ಲೂಕು ಹೆಚ್ಚು ಅದಿರು ಸಿಗುವ ತಾಲ್ಲೂಕಾಗಿದೆ. ಶೇ.೭೩–೭೫ರಷ್ಟು ಅದಿರು ಸಿಕ್ಕರೆ, ಹೊಸಪೇಟೆ ಎರಡನೇ ಸ್ಥಾನದಲ್ಲಿ ಕಬ್ಬಿಣ ಮತ್ತು ಮ್ಯಾಂಗನೀಸ್ ಒದಗಿಸುವ ತಾಲೂಕು ಆಗಿದೆ. ಜಿಲ್ಲೆಯಲ್ಲಿ ಕಪ್ಪು ಮತ್ತು ಕೆಂಪು ಮಣ್ಣಿನ ಮಾದರಿಗಳಿವೆ. ಬಳ್ಳಾರಿ ತಾಲ್ಲೂಕು ಒಂದರಲ್ಲಿ ಕಪ್ಪುಮಣ್ಣಿನ ಪ್ರದೇಶ ಹೆಚ್ಚಾಗಿದೆ. ಕಪ್ಪುಮಣ್ಣು ಮೂಲದಲ್ಲಿ ಫಲವತ್ತಾಗಿರುವ ಮಣ್ಣಾಗಿದೆ. ಈ ಕಪ್ಪುಮಣ್ಣು ಶೇ. ೬೮ರಷ್ಟು ಜೇಡಿಮಣ್ಣಿನಿಂದ ಕೂಡಿರುತ್ತದೆ. ಹೊಸಪೇಟೆ ಹಡಗಲಿ ಕೂಡ್ಲಿಗಿ ಮತ್ತು ಸಂಡೂರು ತಾಲ್ಲೂಕುಗಳಲ್ಲಿ ಉಸುಕುಮಿಶ್ರಿತ ಕೆಂಪು ಮಣ್ಣು ಮತ್ತು ಜಿಗುಟು ಮಣ್ಣು ದೊರೆಯುತ್ತದೆ. ತುಂಗಭದ್ರಾ ಜಲಾಶಯದಲ್ಲಿ ಕಪ್ಪುಮಣ್ಣು ೨ರಿಂದ ೪ ಅಡಿಯವರೆಗೆ ಕೂಡಿಕೊಂಡಿದೆ ಎಂಬ ಅಂಶವನ್ನು ಅಧ್ಯಯನಗಳು ತಿಳಿಸುತ್ತವೆ.[೭]

**ಕುಟುಂಬಗಳು:** ಬಳ್ಳಾರಿ ಜಿಲ್ಲೆಯ ಕುಟುಂಬ ಸಮೀಕ್ಷೆಯ ಪ್ರಕಾರ ೨೦೦೧ನೇ ಸಾಲಿನ ಜನಗಣತಿಯ ಪ್ರಕಾರ ಜಿಲ್ಲೆಯಲ್ಲಿ ವಾಸದ ಮನೆಗಳು ೩೭೩೦೩೪ ಕುಟುಂಬಗಳಿದ್ದು ಅದರಲ್ಲಿ ಒಟ್ಟು ೨೩೭೭೯, ಕುಟುಂಬಗಳು ಶೇ.೬೩.೭೪ರಷ್ಟು ಗ್ರಾಮೀಣ ಪ್ರದೇಶದಲ್ಲಿ ಇರುತ್ತದೆ. ಉಳಿದ ೧೩೫೨೫೫ ಕುಟುಂಬಗಳು ಶೇ. ೩೬.೨೬ರಷ್ಟು ನಗರ ಪ್ರದೇಶಗಳಲ್ಲಿ ವಾಸಿಸುತ್ತಿರುವುದು ಕಂಡುಬಂದಿದೆ. ೨೦೧೧ರ ಜನಗಣತಿ ಪ್ರಕಾರ ಜಿಲ್ಲೆಯಲ್ಲಿ ೨೫.೩೨.೩೮೩ ಜನಸಂಖ್ಯೆ ಹೊಂದಿದ್ದು, ಇದರಲ್ಲಿ ಶೇ. ೬೪ರಷ್ಟು ಗ್ರಾಮಾಂತರ ಪ್ರದೇಶದ ಜನಸಂಖ್ಯೆಯಾಗಿದೆ. ಅದೇ ರೀತಿಯಾಗಿ ೧೨೮೦೪೦೨ ಪುರುಷರು ಮತ್ತು ೧೨೫೧೯೮೧ ಸ್ತ್ರೀಯರ ಸಂಖ್ಯೆ ಒಳಗೊಂಡಿದೆ. ನಗರಪ್ರದೇಶದಲ್ಲಿ ವಾಸಿಸುವವರ ಸಂಖ್ಯೆ ಕೇವಲ ಶೇ. ೩೫ರಷ್ಟು ಮಾತ್ರ ಇದೆ. ೨೦೦೧ರ ಜಿಲ್ಲೆಯ ಜನಸಂಖ್ಯೆ ಬೆಳವಣಿಗೆಯು ಶೇ. ೨೧.೪೦ ಇತ್ತು. ೨೦೧೧ರಲ್ಲಿ ಜನಸಂಖ್ಯೆ ಬೆಳವಣಿಗೆ ಶೇ. ೨೪.೯೦ಕ್ಕೆ ಏರಿಕೆ ಕಂಡಿದೆ. ಜಿಲ್ಲೆಯ ಪ್ರತಿ ಚ.ಕಿ.ಮೀ.ವಿಸ್ತೀರ್ಣದಲ್ಲಿ ೨೯೯ ಜನಸಾಂದ್ರತೆಯನ್ನು ಹೊಂದಿದೆ. ಪ್ರತಿ ಸಾವಿರ ಪುರುಷರಿಗೆ ೯೭೮ ಸ್ತ್ರೀಯರಿದ್ದಾರೆ. ಅಂದರೆ ಪ್ರತಿ ಸಾವಿರ ಪುರುಷರಿಗೆ ೨೨ ಜನ ಸ್ತ್ರೀಯರ ಕೊರತೆ ಕಂಡು ಬಂದಿದೆ. ಈ ಜಿಲ್ಲೆಯನ್ನು ರಾಜ್ಯಕ್ಕೆ ಹೋಲಿಸಿದರೆ, ಪ್ರತಿ ಸಾವಿರಕ್ಕೆ ೧೦ ಜನ ಸ್ತ್ರೀಯರು ಅಧಿಕವಾಗಿ ಕಂಡು ಬರುತ್ತಿದ್ದಾರೆ.

**ಶಿಕ್ಷಣ:** ಜಿಲ್ಲೆಯಲ್ಲಿ ಒಟ್ಟು ೧೯೨೬ ಪ್ರಾಥಮಿಕ ಶಾಲೆಗಳು, ೪೭೯ ಪ್ರೌಢಶಾಲೆಗಳು, ೧೨೫ ಪದವಿ ಪೂರ್ವ ಕಾಲೇಜುಗಳು, ೨೦ ಸಾಮಾನ್ಯ ಪದವಿ ಕಾಲೇಜುಗಳು ಹಾಗೂ ೧೧ ಪಾಲಿಟೆಕ್ನಿಕ್ ಮತ್ತು ೧ ಆಯುರ್ವೇದಿಕ್ ಮೆಡಿಕಲ್ ಕಾಲೇಜು ಮತ್ತು ೨ ವೈದ್ಯಕೀಯ ಸಂಸ್ಥೆಗಳು ಮತ್ತು ೪ ಇಂಜಿನಿಯರಿಂಗ್ ಕಾಲೇಜುಗಳು ಇವೆ. ೨೦೧೧ರ ಜನಗಣತಿ ಪ್ರಕಾರ ಜಿಲ್ಲೆಯ ಸಾಕ್ಷರತೆ ಪ್ರಮಾಣ ಶೇ. ೬೭.೮೫ ಇದೆ. ಈ ಸಾಕ್ಷರತೆಯಲ್ಲಿ ಪುರುಷರು ಶೇ.೭೭.೨೦ರಷ್ಟು, ಸ್ತ್ರೀಯರು ಶೇ. ೫೮.೨೮ರಷ್ಟು ಸಾಕ್ಷರತೆಯನ್ನು ಸಾಧಿಸಿದ್ದಾರೆ. ಜಿಲ್ಲೆಯ ಪ್ರಾಥಮಿಕ ಶಾಲೆಗಳಲ್ಲಿ ೪.೨೫ ಲಕ್ಷ ವಿದ್ಯಾರ್ಥಿಗಳು, ಪ್ರೌಢಶಾಲೆಗಳಲ್ಲಿ ೦.೮೨೮ ಲಕ್ಷ ವಿದ್ಯಾರ್ಥಿಗಳು, ಪದವಿಪೂರ್ವ ಕಾಲೇಜುಗಳಲ್ಲಿ ೦,೧೫೮೭೨ ಸಾಮಾನ್ಯ ಪದವಿ ಕಾಲೇಜುಗಳಲ್ಲಿ ೦.೧೩೮೮೧ ಲಕ್ಷ ವಿದ್ಯಾರ್ಥಿಗಳು ಹಾಗೂ ಪಾಲಿಟೆಕ್ನಿಕ್‌ಗಳಲ್ಲಿ ೦.೦೭೮೪೬, ಇಂಜಿನಿಯರಿಂಗ್ ೦.೦೬೪೯೦, ಆಯುರ್ವೇದ ಮತ್ತು ವೈದ್ಯಕೀಯ ಕಾಲೇಜುಗಳಲ್ಲಿ ೦.೦೦೦೫೩೮ ಲಕ್ಷ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದಾರೆ ಎಂದು ಸಮೀಕ್ಷೆ ಖಚಿತಪಡಿಸಿದೆ. ಜಿಲ್ಲೆಯ ಸಾಕ್ಷರತೆ ಪ್ರಮಾಣವನ್ನು ಗಮನಿಸಿದರೆ ೧೯೯೧ರಲ್ಲಿ ಶೇ.೪೬ರಷ್ಟು ಇದ್ದಿತು. ೨೦೦೧ರ ಗಣತಿ ಪ್ರಕಾರ ಶೇ.೫೭.೪೦ಕ್ಕೆ ಏರಿಕೆ ಕಂಡಿತು. ನಂತರ ೨೦೧೧ರ ಜನಗಣತಿ ಪ್ರಕಾರ ೬೭೧೮.೫ ಏರಿಕೆ ಕಂಡು ಬಂದಿದೆ. ಅಂದರೆ ಪ್ರತಿ ದಶಕದಿಂದ ದಶಕಕ್ಕೆ ಕೇವಲ ಸರಾಸರಿ ೧೦ರಷ್ಟು ಮಾತ್ರ ಏರಿಕೆ ಕಂಡುಬಂದಿದೆ. ರಾಜ್ಯದ ಸಾಕ್ಷರತೆ ಪ್ರಮಾಣಕ್ಕೆ ಹೋಲಿಸಿದರೆ ಶೇ.೭.೭೫ರಷ್ಟು ಕಡಿಮೆ ಸಾಕ್ಷರತೆ ನಮೂದಿಸಿದೆ. ಬಳ್ಳಾರಿ ನಗರಪ್ರದೇಶದಲ್ಲಿ ಶೇ.೭೬.೮೬ ಸಾಕ್ಷರತೆ ಇದ್ದು, ಗ್ರಾಮೀಣ ಪ್ರದೇಶದಲ್ಲಿ ಪ್ರತಿಶತ ಶೇ.೬೨.೬೦ರಷ್ಟು ಸಾಕ್ಷರತೆ ದಾಖಲಾಗಿದೆ.[೮]

ಮಾನವ ಅಭಿವೃದ್ಧಿ ವರದಿ ೨೦೦೫ರ ಪ್ರಕಾರ ೨೦೧೧ರ ಜನಗಣತಿ ಪ್ರಕಾರ ಜಿಲ್ಲೆಯ ಒಟ್ಟು ಗ್ರಾಮೀಣ ಸಾಕ್ಷರತೆ ಶೇ.೬೨.೬೦ರಷ್ಟಾಗಿದೆ. ಅದರಲ್ಲಿ ಸ್ತ್ರೀಯರ ಸಾಕ್ಷರತೆ ಶೇ.೫೧.೬೩ರಷ್ಟು ಮಾತ್ರವಿದ್ದು, ಗ್ರಾಮೀಣ ಪುರುಷರ ಸಾಕ್ಷರತೆ ಶೇ.೭೩.೩೩ ಕಂಡುಬಂದಿದೆ. ಜಿಲ್ಲೆಯ ನಗರ ಸಾಕ್ಷರತೆಗೆ ಹೋಲಿಕೆ ಮಾಡಿದರೆ ಜಿಲ್ಲೆಯ ನಗರದ ಒಟ್ಟು ಸಾಕ್ಷರತೆ ಶೇ.೭೬.೮೯ರಷ್ಟಿದ್ದು ಗ್ರಾಮೀಣ ಪ್ರದೇಶಕ್ಕಿಂತ ಶೇಕಡ ೧೦ರಷ್ಟು ಅಭಿವೃದ್ಧಿಯಲ್ಲಿದೆ. ನಗರ ಸಾಕ್ಷರತೆಯಲ್ಲಿಯೂ ಪುರುಷ ಸಾಕ್ಷರತೆ ಶೇ.೮೪ರಷ್ಟಿವೆ. ಆದರೆ ಸ್ತ್ರೀಯರ ಸಾಕ್ಷರತೆ ಶೇ.೬೯.೬೯ರಷ್ಟು ಮಾತ್ರವಿದೆ. ರಾಜ್ಯದಲ್ಲಿ ಪ್ರಥಮ ಸ್ಥಾನದಲ್ಲಿರುವ ದಕ್ಷಿಣ ಕನ್ನಡಕ್ಕೆ ಹೋಲಿಸಿದರೆ ಅಲ್ಲಿ ಶೇ.೮೪.೮೦ರಷ್ಟು ಸ್ತ್ರೀಯರ ಸಾಕ್ಷರತೆ ಕಂಡುಬರುತ್ತದೆ. ಪುರುಷರ ಸಾಕ್ಷರತೆ ಶೇ.೯೩.೩೧ರಷ್ಟಿರುತ್ತದೆ. ಬಳ್ಳಾರಿ ಜಿಲ್ಲೆಯು ರಾಜ್ಯದಲ್ಲಿ ೨೪ನೇ ಸಾಕ್ಷರತೆ ಸ್ಥಾನ ಹೊಂದಿದೆ. ಪುರುಷ ಸಾಕ್ಷರತೆಯಲ್ಲಿ ೨೪ನೇ ಮತ್ತು ಮಹಿಳಾ ಸಾಕ್ಷರತೆಯಲ್ಲಿ ೨೫ನೇ ಸ್ಥಾನವನ್ನು ರಾಜ್ಯದಲ್ಲಿ ಬಳ್ಳಾರಿ ಜಿಲ್ಲೆಯು ಪಡೆದುಕೊಂಡಿದೆ. ಬಳ್ಳಾರಿ ಜಿಲ್ಲೆಯ ಸರ್ಕಾರಿ, ಅನುದಾನ, ಮತ್ತು ಅನುದಾನರಹಿತ ಪ್ರಾಥಮಿಕ ಶಾಲೆಗಳಲ್ಲಿ ವಿದ್ಯಾರ್ಥಿ ಮತ್ತು ಶಿಕ್ಷಕರ ಅನುಪಾತ

ಶೇ. ೨೮:೧ರಷ್ಟು ಇರುವುದು ಕಂಡುಬಂದಿದೆ. ಪ್ರೌಢಶಾಲೆಯಲ್ಲಿ ೨೦:೧ ಶಿಕ್ಷಕರ ವಿದ್ಯಾರ್ಥಿಗಳ ಅನುಪಾತ ಕಂಡುಬಂದಿದೆ.[೯]

**ಆರೋಗ್ಯ:** ಜಿಲ್ಲೆಯ ಆರೋಗ್ಯ ಸ್ಥಿತಿಗತಿಗಳೇನೂ ಉತ್ತಮವಾಗಿಲ್ಲ. ಕಾರಣ ನಗರಪ್ರದೇಶದಲ್ಲಿ ಕೈಗಾರಿಕೆಗಳ ಪ್ರಭಾವ ಮತ್ತು ಸ್ವಚ್ಛತೆಯ ಕೊರತೆಯಿಂದ ಸಾಮಾನ್ಯವಾಗಿ ಈ ಜಿಲ್ಲೆಯಲ್ಲಿ ಅಂಟು ರೋಗಗಳು ಹೆಚ್ಚಾಗಿಯೇ ಕಂಡುಬರುತ್ತವೆ. ಜಿಲ್ಲೆಯಲ್ಲಿ ಒಟ್ಟು ಸರ್ಕಾರಿ ಆಸ್ಪತ್ರೆಗಳು ೭೧, ಖಾಸಗಿ ನರ್ಸಿಂಗ್ ಹೋಮ್‌ಗಳು ೭೦, ಖಾಸಗಿ ಚಿಕಿತ್ಸಾಲಯಗಳ ಸಂಖ್ಯೆ ೧೬೨ ಆಗಿದೆ. ಸರ್ಕಾರಿ ಮತ್ತು ಚಿಕಿತ್ಸಾಲಯಗಳು ಸೇರಿದಂತೆ ಜಿಲ್ಲೆಯಲ್ಲಿ ಒಟ್ಟು ೩೦೩ ಆಸ್ಪತ್ರೆಗಳಿವೆ. ಜಿಲ್ಲೆಯಲ್ಲಿ ೧೨೧ ಸರ್ಕಾರಿ ಖಾಸಗಿ ವೈದ್ಯರು ಇದ್ದಾರೆ. ಉಳಿದಂತೆ ೨೬೨ ಖಾಸಗಿ ನರ್ಸಿಂಗ್ ಹೋಂಗಳಲ್ಲಿ ಮತ್ತು ಚಿಕಿತ್ಸಾಲಯಗಳಲ್ಲಿ ವೈದ್ಯರು ಇದ್ದರೆ, ಜಿಲ್ಲೆಯ ರೋಗಿಗಳಿಗೆ ಲಭ್ಯತೆಯಲ್ಲಿರುವ ಹಾಸಿಗೆಗಳ ಸಂಖ್ಯೆ ಸರ್ಕಾರಿ ಆಸ್ಪತ್ರೆಗಳಲ್ಲಿ ೯೪೩ ಖಾಸಗಿ ಆಸ್ಪತ್ರೆಗಳಲ್ಲಿ ೩೧೪ ಹಾಸಿಗೆಗಳು ಒಟ್ಟು ಜಿಲ್ಲೆಯಲ್ಲಿ ೪೨೬೭ ಹಾಸಿಗೆಗಳು ರೋಗಿಗಳಿಗೆ ಲಭ್ಯವಾಗುತ್ತಿವೆ. ಜಿಲ್ಲೆಯಲ್ಲಿ ಅಲೋಪತಿ ಆಸ್ಪತ್ರೆಗಳು ೧೪; ಈ ೧೪ ಆಸ್ಪತ್ರೆಗಳಲ್ಲಿ ೨೪ ಹಾಸಿಗೆಗಳನ್ನು ಹೊಂದಿದೆ. ಭಾರತೀಯ ವೈದ್ಯ ಪದ್ಧತಿ ಆಸ್ಪತ್ರೆಗಳು ೬ ಇದ್ದು ೪೬ ಹಾಸಿಗೆಗಳು ಇವೆ. ೨೩೨ ಖಾಸಗಿ ಆಸ್ಪತ್ರೆಗಳಲ್ಲಿ ೩೧೪ ಹಾಸಿಗೆಗಳಿವೆ. ಜಿಲ್ಲೆಯಲ್ಲಿ ಒಟ್ಟು ೫೫ ಪ್ರಾಥಮಿಕ ಆರೋಗ್ಯ ಕೇಂದ್ರಗಳಿದ್ದು ಇವುಗಳಲ್ಲಿ ೩೬೨ ಹಾಸಿಗೆಗಳು ಇವೆ. ಅದೇ ರೀತಿ ೮ ಸಮೂಹವಾರು ಆರೋಗ್ಯ ಕೇಂದ್ರಗಳಿದ್ದು. ೨೪೦ ಹಾಸಿಗೆಗಳ ಲಭ್ಯತೆ ಇದೆ. ಬಳ್ಳಾರಿಯಲ್ಲಿ ಕುಟುಂಬ ಕಲ್ಯಾಣ ಕೇಂದ್ರಗಳು ೮೧, ಉಪಕೇಂದ್ರಗಳು ೩೮೯, ಸಂತಾನಹರಣ ಶಸ್ತ್ರಚಿಕಿತ್ಸೆ ಕೇಂದ್ರಗಳು ೨೧೦೮೫+೪೨೧ ಇವೆ. ಜಿಲ್ಲೆಯಾದ್ಯಂತ ಔಷಧಿ ಅಂಗಡಿಗಳು ೧೧೨೪ಗಳಿದ್ದು, ೩ ರಕ್ತನಿಧಿಗಳು ಜಿಲ್ಲೆಯಲ್ಲಿ ಸಾರ್ವಜನಿಕರ ಸೇವೆಯಲ್ಲಿ ಇರುವುದು ಕಂಡುಬಂದಿದೆ.[೧೦]

ಬಳ್ಳಾರಿ ಜಿಲ್ಲೆಯ ಜನನ ಪ್ರಮಾಣ ಶೇ.೨೧ ಇದ್ದು ಮರಣ ಪ್ರಮಾಣ ೫ ಆಗಿದೆ. ಶಿಶು ಮರಣ ಪ್ರಮಾಣ ಶೇ.೧೪ ರಷ್ಟು ಇದ್ದು, ಮಾತೃಸಂಬಂಧಿತ ಪ್ರಮಾಣ ಶೇ.೧೦ರಷ್ಟಿದೆ. ಜನನ ಸುರಕ್ಷಾ ಯೋಜನೆ ಪಡೆದ ಫಲಾನುಭವಿಗಳ ಸಂಖ್ಯೆ ೨೨೪೮೯. ಮಡಿಲುಕಿಟ್ ಪಡೆದ ಫಲಾನುಭವಿಗಳ ಸಂಖ್ಯೆ ೧೧೬೪೨. ೧೦೮ ಆಂಬುಲೆನ್ಸ್‌ಗಳ ಸಂಖ್ಯೆ ೨೦. FRU Unitಗಳು ೬ ಜಿಲ್ಲೆಯಲ್ಲಿವೆ. ಡಿ.ಪಿ.ಟಿ ೫೯೪೭೮, ಪೋಲಿಯೋ ಲಸಿಕೆ ೫೯೬೭೮, ಬಿ.ಸಿ.ಜಿ ೫೮೯೬೬, ದಡಾರ ೫೩೩೮೫, ಪಿ.ಟಿ ೬೫೪೯೧...೪೫೧೭೭ಗಳಷ್ಟು ಲಸಿಕೆಗಳನ್ನು ಪ್ರತಿ ವರ್ಷ ಜಿಲ್ಲೆಯಲ್ಲಿ ಬಳಸಲಾಗುತ್ತಿದೆ. ಮಾರಣಾಂತಿಕ ರೋಗಗಳು ಜಿಲ್ಲೆಯಲ್ಲಿ ಕಂಡುಬಂದಿವೆ. ಏಡ್ಸ್ ರೋಗಕ್ಕೆ ಸಂಬಂಧಿಸಿದಂತೆ ಏಡ್ಸ್ ರೋಗ ನಿಯಂತ್ರಣ ಕಾರ್ಯಕ್ರಮ ಅನುಷ್ಠಾನದಲ್ಲಿರಿಸಲಾಗಿದ್ದು. ಜಿಲ್ಲೆಯಲ್ಲಿ ೧೮೨೫ ಏಡ್ಸ್

ರೋಗಿಗಳನ್ನು ಗುರುತಿಸಲಾಗಿದೆ. ಇವರಲ್ಲಿ ೨೪೧ ಜನ ಮರಣ ಹೊಂದಿದ್ದಾರೆ. ಕುಷ್ಠರೋಗ ನಿಯಂತ್ರಣ ಕಾರ್ಯಕ್ರಮ ಜಾರಿಯಲ್ಲಿದ್ದು ೩೧೯ ಗುಣವಾದ ರೋಗಿಗಳು ೨೮೮ ಗುಣವಾಗುತ್ತಿರುವ ರೋಗಿಗಳಿದ್ದು, ಈ ರೋಗದಿಂದ ಯಾರೂ ಮರಣ ಹೊಂದಿಲ್ಲ ಎಂದು ವರದಿ ಮಾಡಲಾಗಿದೆ. ಜಿಲ್ಲೆಯಲ್ಲಿ ಒಟ್ಟು ೩೧೭೦ ಜನ ಕ್ಷಯರೋಗಿಗಳನ್ನು ಗುರುತಿಸಿದ್ದಾರೆ. ಇದರಲ್ಲಿ ೯೨೭ ಜನ ಗುಣಮುಖರಾಗಿದ್ದಾರೆ. ೯೦ ಜನ ರೋಗದಿಂದ ಮರಣ ಹೊಂದಿದ್ದಾರೆ. ಕ್ಯಾನ್ಸರ್ ರೋಗವು ಜಿಲ್ಲೆಯಲ್ಲಿ ವರದಿಯಾಗದಿರುವುದು ಕಂಡುಬಂದಿದೆ. ಈ ಜಿಲ್ಲೆಯನ್ನು ಆರೋಗ್ಯವಂತ ಸ್ವಚ್ಛ ಜಿಲ್ಲೆಯಾಗಿ ರೂಪಿಸಲು ರಾಜ್ಯ ಮತ್ತು ಕೇಂದ್ರ ಸರ್ಕಾರಗಳ ಯೋಜನೆಗಳು ಉತ್ತಮ ಸೇವೆಯನ್ನು ಒದಗಿಸುತ್ತಿವೆ.[೧೧]

### ಬಳ್ಳಾರಿ ಜಿಲ್ಲೆಯ ಆರ್ಥಿಕ ಸ್ಥಿತಿಗತಿ

ಬಳ್ಳಾರಿ ಜಿಲ್ಲೆಯ ಜನರ ಮುಖ್ಯ ಕಸುಬು ಕೃಷಿಯಾಗಿದೆ. ಜಿಲ್ಲೆಯು ಅತಿ ಹೆಚ್ಚು ಖುಷ್ಕಿ ಭೂಮಿಯನ್ನು ಹೊಂದಿದ್ದು, ನೈರುತ್ಯ ಮುಂಗಾರು ಮಳೆಯನ್ನೇ ತನ್ನ ಒಟ್ಟು ಕೃಷಿ ಚಟುವಟಿಕೆಯನ್ನು ಅವಲಂಬಿಸಿದೆ. ಜಿಲ್ಲೆಯಲ್ಲಿ ಒಟ್ಟು ೯೬೫ ದೊಡ್ಡ ರೈತರಿದ್ದು ಇವರು ೧೦ ಹೆಕ್ಟೇರ್‌ಗಳಿಗಿಂತ ಹೆಚ್ಚು ಭೂಮಿಯನ್ನು ಹೊಂದಿದ್ದಾರೆ. ಇವರು ೫೩೭೫೨೬ರಷ್ಟು ವಿಸ್ತೀರ್ಣ ಭೂಮಿಯನ್ನು ಹೊಂದಿದ್ದು ಜಿಲ್ಲೆಯಲ್ಲಿ ೧.೪೪ ದೊಡ್ಡ ಹಿಡುವಳಿದಾರರು ಕಂಡುಬರುತ್ತಾರೆ. ಮಧ್ಯಮ ಭೂ ಮಾಲೀಕರು ೪ರಿಂದ ೧೦ ಹೆಕ್ಟೇರ್‌ಗಳಷ್ಟು ಭೂಮಿಯನ್ನು ಹೊಂದಿದವರು ಮಧ್ಯಮ ರೈತರಾಗಿದ್ದು ಇವರ ಸಂಖ್ಯೆ ೨೬೭೫೬. ಇವರಲ್ಲಿ ೧೫೨,೬೩೩ ಹೆಕ್ಟೇರ್ ವಿಸ್ತೀರ್ಣದ ಭೂಮಿ ಇದೆ. ಅರೆ ಮಧ್ಯಮ ಭೂಮಾಲೀಕರು ೨ರಿಂದ ೪ ಹೆಕ್ಟೇರ್ ಭೂಮಿ ಹೊಂದಿದವರು ಜಿಲ್ಲೆಯಲ್ಲಿ ೫೬೫೯ ಜನರಿದ್ದು, ಒಟ್ಟು ೧೫೩೧೭೩ ವಿಸ್ತೀರ್ಣ ಭೂಮಿ ಇದೆ. ಸಣ್ಣ ಭೂಹಿಡುವಳಿದಾರರು ೧ರಿಂದ ೨ ಹೆಕ್ಟೇರ್ ಭೂಮಿ ಹೊಂದಿದವರು. ೧೧೮೮೩೬೪ರಷ್ಟು ಭೂಮಿಯನ್ನು ಹೊಂದಿದವರು ಒಟ್ಟು ೫೮೬೭೯ ಹೆಕ್ಟೇರ್‌ಗಳಷ್ಟು ಭೂಮಿಯನ್ನು ಹೊಂದಿದ್ದಾರೆ. ಬಳ್ಳಾರಿ ಜಿಲ್ಲೆಯಲ್ಲಿ ಒಟ್ಟು ಗ್ರಾಮೀಣ ಕೃಷಿ ಕಾರ್ಮಿಕರ ಸಂಖ್ಯೆ ೩೬೭೦೯. ಅದೇ ರೀತಿ ನಗರಪ್ರದೇಶದಲ್ಲಿ ೯೦೫೩ ಕೃಷಿ ಕಾರ್ಮಿಕರಿದ್ದು, ಒಟ್ಟು ಜಿಲ್ಲೆಯಲ್ಲಿ ೪೦೬೯೨ ಜನ ಕೃಷಿಕಾರ್ಮಿಕರು ಇದ್ದಾರೆ.

ರಾಜ್ಯದ ಒಟ್ಟು ಆದಾಯ ೨೧೧೬೬೨೫೨ ಲಕ್ಷ ರೂ.ಗಳಲ್ಲಿ ಬಳ್ಳಾರಿ ಜಿಲ್ಲೆಯ ಆದಾಯ ೯೧೯೭೯ ಲಕ್ಷಗಳಾಗಿದ್ದು ಇದು ರಾಜ್ಯದ ಒಟ್ಟು ಆದಾಯಕ್ಕೆ ಹೋಲಿಸಿದರೆ ಶೇ.೪.೨೪ರಷ್ಟಾಗಿರುತ್ತದೆ. ಜಿಲ್ಲೆಯ ತಲಾ ಆದಾಯ ೪೧೮೫೬ ರೂ.ಗಳಿರುತ್ತದೆ ಎಂದು ಅಂದಾಜಿಸಲಾಗಿದೆ.[೧೨]

### ಬಳ್ಳಾರಿ ಜಿಲ್ಲೆಯ ಪಂಚಾಯಿತಿ ವ್ಯವಸ್ಥೆ

ಬಳ್ಳಾರಿ ಜಿಲ್ಲೆಯ ಪಂಚಾಯಿತಿ ವ್ಯವಸ್ಥೆಗೆ ತನ್ನದೇ ಆದ ಇತಿಹಾಸವಿದೆ. ಮೈಸೂರು ಸಂಸ್ಥಾನ ಆಳ್ವಿಕೆಯಿಂದಲೂ ಜಿಲ್ಲೆಯಲ್ಲಿ ಪಂಚಾಯಿತಿ ಸಂಸ್ಥೆಗಳ ಕಾರ್ಯನಿರ್ವಹಣೆಯಲ್ಲಿ ತೊಡಗಿದ್ದು ಕಾಲಕಾಲಕ್ಕೆ ಹೊಸ ಕಾಯ್ದೆ ನಿಯಮಗಳನ್ನು ಅಳವಡಿಸಿಕೊಂಡು ಮುಂದುವರಿದುಕೊಂಡು ಬಂದಿದೆ. ಬಳ್ಳಾರಿ ಜಿಲ್ಲೆಯಲ್ಲಿ ಒಂದು ಜಿಲ್ಲಾ ಪಂಚಾಯಿತಿ ೭ ತಾಲ್ಲೂಕು ಪಂಚಾಯಿತಿಗಳು ಮತ್ತು ೧೮೯ ಗ್ರಾಮಪಂಚಾಯಿತಿಗಳು ಕಾರ್ಯ ನಿರ್ವಹಿಸುತ್ತಿವೆ. ಪ್ರಸ್ತುತ ಜಿಲ್ಲಾಪಂಚಾಯಿತಿಯಲ್ಲಿ ೩೬ ಜನ ಸದಸ್ಯರು ಇದ್ದು ೭ ಪರಿಶಿಷ್ಟ ಜಾತಿ, ೮ ಪರಿಶಿಷ್ಟ ಪಂಗಡಕ್ಕೆ ೧೨ ಹಿಂದುಳಿದ, ೯ ಸಾಮಾನ್ಯ ಸ್ಥಾನಗಳ ಅಭ್ಯರ್ಥಿಗಳು ಚುನಾಯಿತರಾಗಿದ್ದಾರೆ. ಅದೇ ರೀತಿ ತಾಲ್ಲೂಕು ಪಂಚಾಯಿತಿ ಸ್ಥಾನಗಳು ೧೩೫ ಇದ್ದು, ಇದರಲ್ಲಿ ೨೮ ಪರಿಶಿಷ್ಟ ಜಾತಿ, ೨೫ ಪರಿಶಿಷ್ಟ ಪಂಗಡ, ೪೬ ಹಿಂದುಳಿದ ವರ್ಗ, ೩೬ ಸಾಮಾನ್ಯ ವರ್ಗಕ್ಕೆ ಸೇರಿದವರು ಆಯ್ಕೆಯಾಗಿದ್ದಾರೆ. ಅದೇ ರೀತಿ ಜಿಲ್ಲೆಯಲ್ಲಿ ಒಟ್ಟು ೧೮೯ ಗ್ರಾಮಪಂಚಾಯಿತಿಗಳಿದ್ದು ೩೪೦೫ ಸದಸ್ಯರಿದ್ದಾರೆ. ಇವುಗಳಲ್ಲಿ ಪರಿಶಿಷ್ಟ ಜಾತಿಯವರು ೬೯೯, ಪರಿಶಿಷ್ಟ ಪಂಗಡವರು ೭೪೦, ಹಿಂದುಳಿದ ವರ್ಗದವರು ೧೧೧೭, ಸಾಮಾನ್ಯ ವರ್ಗದವರು ೮೪೬ ಅಭ್ಯರ್ಥಿಗಳು ಆಯ್ಕೆಯಾಗಿರುತ್ತಾರೆ. ಇದು ಒಟ್ಟಾರೆ ಮೇಲಿನ ಹಂತದವರೆಗಿನ ಪಂಚಾಯಿತಿಗಳ ಚುನಾಯಿತ ಸದಸ್ಯರ ಸ್ಥಾನಗಳಾಗಿವೆ. ಬಳ್ಳಾರಿಯ ಜಿಲ್ಲಾಪಂಚಾಯಿತಿಯಿಂದ ಕೇಂದ್ರ ಮತ್ತು ರಾಜ್ಯ ಸರ್ಕಾರಗಳ ಯೋಜನೆಗಳನ್ನು ಜಾರಿಗೊಳಿಸಿದ್ದು ಸುಮಾರು ೩೫ ಅಭಿವೃದ್ಧಿ ಯೋಜನಾ ಕಾರ್ಯಕ್ರಮಗಳು ಅನುಷ್ಠಾನದ ಹಂತದಲ್ಲಿವೆ.

### ೨.೨. ಬಳ್ಳಾರಿ ತಾಲ್ಲೂಕಿನ ಸಾಮಾಜಿಕ ವಿವರಣೆಗಳು

ಬಳ್ಳಾರಿ ತಾಲ್ಲೂಕಿನ ಭೌಗೋಳಿಕ ವಿಸ್ತೀರ್ಣ ೧೬೮೯ ಚ.ಕಿ.ಮೀಗಳಷ್ಟಿದೆ. ತಾಲ್ಲೂಕಿನ ಒಟ್ಟು ಜನಸಂಖ್ಯೆ ೭೭೦೯೨೯: ಗ್ರಾಮೀಣ ಪ್ರದೇಶದ(ಜನಸಂಖ್ಯೆ) ಕುಟುಂಬಗಳು ೬೮೦೦೫, ಅದೇ ರೀತಿ ನಗರಪ್ರದೇಶದ ಕುಟುಂಬಗಳು ೮೪೮೪೪. ಒಟ್ಟು ತಾಲ್ಲೂಕಿನ ಕುಟುಂಬಗಳ ಸಂಖ್ಯೆ ೧೫೨೮೪೯ ಆಗಿದೆ. ಇದರಲ್ಲಿ ೨೦೧೧ರ ಜನಗಣತಿಯ ಪ್ರಕಾರ ಈ ತಾಲ್ಲೂಕಿನಲ್ಲಿ ೬೩೧೦೧ ಪರಿಶಿಷ್ಟ ಜಾತಿ ನಗರಪ್ರದೇಶದ ಕುಟುಂಬಗಳು ಹಾಗೂ ೭೫೮೭೮ ಗ್ರಾಮೀಣ ಪ್ರದೇಶ ಪರಿಶಿಷ್ಟ ಜಾತಿಯ ಕುಟುಂಬಗಳು ಇದ್ದು, ಪರಿಶಿಷ್ಟ ಪಂಗಡ ನಗರ ಪ್ರದೇಶದ ೪೩೬೨೫. ಆದರೆ ಗ್ರಾಮೀಣ ಪ್ರದೇಶ ಪರಿಶಿಷ್ಟ ಪಂಗಡ ಜನಸಂಖ್ಯೆ ೮೮೫೪೧ ರಷ್ಟಿದೆ. ತಾಲ್ಲೂಕಿನಲ್ಲಿ ಚ.ಕಿ.ಮೀ.ಗೆ ೪೫೭ ಜನಸಾಂದ್ರತೆ ಇದ್ದು, ಪ್ರತಿ ಸಾವಿರ ಪುರುಷರಿಗೆ ೯೮೮ ಸ್ತ್ರೀಯರಿದ್ದಾರೆ.

**ಶಿಕ್ಷಣ ವ್ಯವಸ್ಥೆ:** ಬಳ್ಳಾರಿ ತಾಲ್ಲೂಕಿನಲ್ಲಿ ಒಟ್ಟು ೪೫೭೧೨೨ ಜನ ಅಕ್ಷರಸ್ಥರಿದ್ದಾರೆ. ತಾಲ್ಲೂಕಿನ ಸಾಕ್ಷರತೆ ಪ್ರಮಾಣ ಶೇ.೬೮,೮೮ ಇದೆ. ಜಿಲ್ಲೆಯಲ್ಲಿ ಬಳ್ಳಾರಿ ತಾಲ್ಲೂಕು ಸಾಕ್ಷರತೆಯಲ್ಲಿ ೬ನೇ

ಸ್ಥಾನ ಹೊಂದಿದೆ. ಹಡಗಲಿ ತಾಲ್ಲೂಕು ಪ್ರಥಮ ಸ್ಥಾನದಲ್ಲಿದೆ. ಬಳ್ಳಾರಿ ತಾಲ್ಲೂಕಿನಲ್ಲಿ ಗ್ರಾಮೀಣ ಸಾಕ್ಷರತೆ ಶೇ.೫೮.೫೧, ನಗರ ಸಾಕ್ಷರತೆ ಶೇ.೭೮.೨೬ರಷ್ಟಿದೆ. ಈ ತಾಲ್ಲೂಕಿನಲ್ಲಿ ಸ್ತ್ರೀಯರು ಶೇ.೫೯.೭೯ ಮತ್ತು ಪುರುಷರು ಶೇ.೭೭.೬೮ರಷ್ಟು ಸಾಕ್ಷರತೆ ಹೊಂದಿದ್ದಾರೆ. ತಾಲ್ಲೂಕಿನಲ್ಲಿ ೧೮೫ ಕಿರಿಯ ಪ್ರಾಥಮಿಕ ಶಾಲೆಗಳು ಮತ್ತು ೮೧೫ ಹಿರಿಯ ಪ್ರಾಥಮಿಕ ಶಾಲೆಗಳಿವೆ. ಒಟ್ಟು ೧೪೩ ಪ್ರೌಢಶಾಲೆಗಳು ಇವೆ. ಪ್ರೌಢಶಾಲೆಗಳ ಶಿಕ್ಷಕರ ಸಂಖ್ಯೆ ಒಟ್ಟು ೨೯೯೮ ಇದ್ದು, ಪ್ರಾಥಮಿಕ ಶಾಲೆ ಶಿಕ್ಷಕರು ೫೬೮ ಜನ ಇದ್ದಾರೆ. ತಾಲ್ಲೂಕಿನಲ್ಲಿ ಒಟ್ಟು ೩೦೧ ಪ್ರಾಥಮಿಕ ಶಾಲೆಗಳಿಗೆ ಮತ್ತು ೬೧ ಪ್ರೌಢಶಾಲೆಗಳಿಗೆ ಮಧ್ಯಾಹ್ನದ ಬಿಸಿ ಊಟ ಕಾರ್ಯಕ್ರಮದ ಸೌಲಭ್ಯ ಸಿಗುತ್ತಿದೆ.

**ತಾಲ್ಲೂಕಿನ ಆರೋಗ್ಯ:** ಬಳ್ಳಾರಿ ತಾಲ್ಲೂಕಿನಲ್ಲಿ ೧೫ ಸರ್ಕಾರಿ ಆಸ್ಪತ್ರೆಗಳು, ೪೧ ನರ್ಸಿಂಗ್ ಹೋಮ್‌ಗಳು ಇವೆ. ೧೯ ಚಿಕಿತ್ಸಾಲಯಗಳು, ಒಟ್ಟು ತಾಲ್ಲೂಕಿನಲ್ಲಿ ೧೬೫ ಖಾಸಗಿ ಮತ್ತು ಸರ್ಕಾರಿ ಆಸ್ಪತ್ರೆಗಳಿದ್ದು ೩೭ ಸರ್ಕಾರಿ ೧೭೩ ಖಾಸಗಿ ವೈದ್ಯರು ತಾಲ್ಲೂಕಿನಲ್ಲಿ ಸೇವೆ ಸಲ್ಲಿಸುತ್ತಿದ್ದಾರೆ. ಒಟ್ಟು ೧೭೦೨ ಹಾಸಿಗೆ ಈ ತಾಲೂಕಿನಲ್ಲಿ ರೋಗಿಗಳಿಗೆ ಲಭ್ಯವಿದೆ. ೧೧ ಅಲೋಪತಿ ಆಸ್ಪತ್ರೆಗಳು, ೧೨ ಪ್ರಾಥಮಿಕ ಆರೋಗ್ಯ ಕೇಂದ್ರಗಳು, ೧ ಸಮೂಹವಾರು ಆರೋಗ್ಯ ಕೇಂದ್ರ, ೨೮ ಕುಟುಂಬ ಕಲ್ಯಾಣ ಕೇಂದ್ರಗಳು, ೮೦ ಉಪಕೇಂದ್ರಗಳಿವೆ. ೪೪೫ ಔಷಧಿ ಅಂಗಡಿಗಳು, ೨ ರಕ್ತನಿಧಿಗಳು ಬಳ್ಳಾರಿ ತಾಲ್ಲೂಕಿನಲ್ಲಿಯೇ ಇವೆ. ೧೮೧೨೮ ಡಿ.ಪಿ.ಟಿ., ೧೮೧೨೮ ಪೋಲಿಯೊ, ೧೯೮೯೮ ಬಿ.ಸಿ.ಜಿ, ೧೪೮೯೩ ದಡಾರ, ೨೦೦೬೨ ಮತ್ತು ೪–೧೩೧೨೭೪೪ಗಳಷ್ಟು ಲಸಿಕೆಗಳು ಪ್ರತಿ ವರ್ಷ ಬಳ್ಳಾರಿ ತಾಲ್ಲೂಕಿನಲ್ಲಿ ಬಳಕೆಯಾಗುತ್ತಿವೆ. ಈ ತಾಲ್ಲೂಕಿನಲ್ಲಿ ಒಟ್ಟು ೮೧೯ ಏಡ್ಸ್ ರೋಗಿಗಳನ್ನು ಗುರುತಿಸಿದ್ದಾರೆ. ೯೩ ಜನ ಕುಷ್ಠರೋಗಿಗಳನ್ನು ಗುರುತಿಸಿದ್ದಾರೆ. ೧೨೦೭ ಕ್ಷಯ ರೋಗಿಗಳನ್ನು ಈ ತಾಲ್ಲೂಕಿನಲ್ಲಿ ಗುರುತಿಸಿದ್ದು, ತಾಲ್ಲೂಕಿನ ಜನನ ಪ್ರಮಾಣ ಶೇ.೨೪ ಇದೆ. ಮರಣ ಪ್ರಮಾಣ ಶೇ. ೬, ಶಿಶುಮರಣ ಪ್ರಮಾಣ ಶೇ.೯ ಇದ್ದು, ಮಾತೃಸಂಬಂಧಿತ ಮರಣ ಶೇ.೧ರಷ್ಟು ಎಂದು ವರದಿಯಾಗಿದೆ.[೧೩]

**ತಾಲ್ಲೂಕಿನ ಆರ್ಥಿಕ ಮೂಲಾಧಾರಗಳು:** ಬಳ್ಳಾರಿ ತಾಲೂಕಿನಲ್ಲಿ ಕೃಷಿ ಸಾಗುವಳಿದಾರರು ೬೮೯೫೪ ಜನರಿದ್ದು ಅದರಲ್ಲಿ ಗ್ರಾಮೀಣ ಪ್ರದೇಶದ ಸಾಗುವಳಿದಾರರು ೬೨೬೬೨, ನಗರಪ್ರದೇಶ ಕೃಷಿ ಸಾಗುವಳಿದಾರರು ೨೯೨ ಜನ ಇದ್ದಾರೆ. ಅತಿ ಸಣ್ಣ ಭೂಹಿಡುವಳಿದಾರರು ತಾಲ್ಲೂಕಿನಲ್ಲಿ ೧೫೪೦೪ ಜನರಿದ್ದು ೮೮೮೫ ವಿಸ್ತೀರ್ಣ ಭೂಮಿಯನ್ನು ಒಳಗೊಂಡಿದ್ದಾರೆ. ಈ ತಾಲ್ಲೂಕಿನ ಒಟ್ಟು ೯೫೦೧೬ ಹೆಕ್ಟೇರ್‌ಗಳಲ್ಲಿ ಬಿತ್ತನೆಯಾಗಿದ್ದು ೧೨೦೫೯೧ ಹೆಕ್ಟೇರುಗಳಲ್ಲಿ ಆಹಾರಧಾನ್ಯಗಳನ್ನು ೧೫೫೦೦ ಇತರ ವಾಣಿಜ್ಯ ಬೆಳೆಗಳನ್ನು ಬೆಳೆಯಲಾಗುತ್ತದೆ. ಬಳ್ಳಾರಿ ಜಿಲ್ಲೆಯಲ್ಲಿ ಕೃಷಿ ಸಾಗುವಳಿ ದಾರರು ಒಟ್ಟು ೬೫೯೫೪ ಜನರು ಕಂಡುಬರುತ್ತಾರೆ. ಈ ತಾಲ್ಲೂಕಿನಲ್ಲಿ ಹೆಚ್ಚು ಕೃಷಿ ಕಾರ್ಮಿಕರು

ಇದ್ದು. ಕೈಗಾರಿಕೆಗಳಲ್ಲಿ ಕೆಲಸ ಮಾಡುವ ಕಾರ್ಮಿಕರೂ ಇದ್ದಾರೆ. ಒಟ್ಟು ತಾಲ್ಲೂಕಿನಲ್ಲಿ ೯೩, ೨೩೮ ಕೃಷಿ ಕಾರ್ಮಿಕರಿದ್ದಾರೆ. ಅದೇ ರೀತಿ ಕೃಷಿಯೇತರ ಕಾರ್ಮಿಕರು ೧೭೯೦ ಜನರಿದ್ದಾರೆ.[೧೪]

**ತಾಲೂಕಿನ ಪಂಚಾಯಿತಿ ವ್ಯವಸ್ಥೆ:** ಈ ತಾಲ್ಲೂಕಿನ ವ್ಯಾಪ್ತಿಯಲ್ಲಿ ಎರಡು ನಾಡಕಚೇರಿಗಳು ೮೦ ಗ್ರಾಮ ಲೆಕ್ಕಿಗರ ವೃತ್ತಗಳು, ೫ ಹೋಬಳಿಗಳು, ೪೦ ಗ್ರಾಮಪಂಚಾಯಿತಿಗಳು, ೮೦ ಗ್ರಾಮಗಳಲ್ಲಿ ೯೯ ಜನವಸತಿ ಇರುವ ಗ್ರಾಮ ಇದ್ದರೆ, ೪ ಜನವಸತಿ ಇಲ್ಲದ ಗ್ರಾಮಗಳು ಕಂಡುಬಂದಿವೆ. ಒಟ್ಟು ತಾಲ್ಲೂಕಿನಲ್ಲಿ ೧೦೮ ಗ್ರಾಮಗಳು ಕಂಡುಬರುತ್ತವೆ. ತಾಲ್ಲೂಕಿನ ೭೮೬ ಗ್ರಾಮಪಂಚಾಯಿತಿ ಸದಸ್ಯರ ಸ್ಥಾನಗಳು ಇದ್ದು, ಪರಿಶಿಷ್ಟ ಜಾತಿಯ ಚುನಾಯಿತ ಪಂಚಾಯಿತಿ ಸದಸ್ಯರ ಸಂಖ್ಯೆ ೧೪೬. ಪರಿಶಿಷ್ಟ ಪಂಗಡದಿಂದ ೧೯೧ ಜನ ಸದಸ್ಯರಿದ್ದಾರೆ. ೨೬೨ ಹಿಂದುಳಿದ ವರ್ಗದ ಸದಸ್ಯರು ಹಾಗೂ ೧೮೭ ಜನ ಸಾಮಾನ್ಯವರ್ಗಕ್ಕೆ ಸೇರಿದ ಸದಸ್ಯರು ಆಯ್ಕೆಯಾಗಿದ್ದಾರೆ.[೧೫] ಹಿಂದುಳಿದ ವರ್ಗದಿಂದ ಹೆಚ್ಚಿನ ಸಂಖ್ಯೆಯಲ್ಲಿ ಚುನಾಯಿತರಾಗಿರುವುದು ಕಂಡುಬರುತ್ತದೆ. ತಾಲ್ಲೂಕಿನಲ್ಲಿ ತಾಲ್ಲೂಕು ಪಂಚಾಯಿತಿಯ ಚುನಾಯಿತ ಸದಸ್ಯರ ಸಂಖ್ಯೆ ಒಟ್ಟು ೩೧. ಪರಿಶಿಷ್ಟ ಜಾತಿಯವರು ೬ ಸದಸ್ಯರಿದ್ದಾರೆ. ಪರಿಶಿಷ್ಟ ಪಂಗಡದವರು ೭ ಸದಸ್ಯರು, ಹಿಂದುಳಿದ ವರ್ಗದವರು ೧೦, ಸಾಮಾನ್ಯ ಸ್ಥಾನಗಳಲ್ಲಿ ೮ ಜನ ಸದಸ್ಯರು ಆಯ್ಕೆಯಾಗಿದ್ದಾರೆ. ತಾಲ್ಲೂಕು ಪಂಚಾಯಿತಿಯ ಹಂತದಲ್ಲಿ ಹಿಂದುಳಿದವರ್ಗದ ಜನರು ರಾಜಕೀಯ ಪಕ್ಷಗಳಲ್ಲಿ ಹೆಚ್ಚು ಹೆಚ್ಚು ಗುರುತಿಸಿಕೊಂಡಿದ್ದು, ಹೆಚ್ಚಿನ ಚುನಾಯಿತ ಸದಸ್ಯರಾಗಿದ್ದಾರೆ. ಹಾಗೆಯೇ ಜಿಲ್ಲಾ ಪಂಚಾಯಿತಿಯ ಚುನಾಯಿತ ಸದಸ್ಯರನ್ನು ಗಣನೆಗೆ ತೆಗೆದುಕೊಂಡರೆ, ಪರಿಶಿಷ್ಟ ಜಾತಿಯಿಂದ ಒಬ್ಬರು, ಪರಿಶಿಷ್ಟ ಪಂಗಡದಿಂದ ಇಬ್ಬರು, ಹಿಂದುಳಿದ ವರ್ಗದಿಂದ ಮೂರು ಜನ, ಸಾಮಾನ್ಯ ಸ್ಥಾನಗಳಿಂದ ಇಬ್ಬರು ಚುನಾಯಿತ ಸದಸ್ಯರು ಆಯ್ಕೆಯಾಗಿರುತ್ತಾರೆ. ತಾಲ್ಲೂಕಿನ ಲಿಂಗಾನುಪಾತ ಗಮನಿಸಿದರೆ ಪ್ರತಿ ಸಾವಿರ ಪುರುಷರಿಗೆ ೯೮೮ ಸ್ತ್ರೀಯರು ಇದ್ದಾರೆ. ತಾಲ್ಲೂಕಿನ ಒಟ್ಟು ಜನಸಂಖ್ಯೆಯಲ್ಲಿ ಪ್ರತಿಶತ ನಗರ ಜನಸಂಖ್ಯೆ ಶೇ. ೫೩.೨೪ರಷ್ಟಿದೆ ಮತ್ತು ಪರಿಶಿಷ್ಟ ಜಾತಿ ಪಂಗಡದವರ ಒಟ್ಟು ಜನಸಂಖ್ಯೆ ಶೇ.೩೫.೧೭ರಷ್ಟಿದೆ.[೧೬]

## ಸಂಗನಕಲ್ಲು ಗ್ರಾಮಪಂಚಾಯಿತಿ

**ಸಂಗನಕಲ್ಲು ಗ್ರಾಮಪಂಚಾಯಿತಿ:** ಈ ಗ್ರಾಮವು ಶಿಲಾಯುಗ ಕಾಲದ ಇತಿಹಾಸವನ್ನು ಹೊಂದಿದೆ. ಗ್ರಾಮಕ್ಕೆ ಈ ಹೆಸರು ಬರಲು ಗ್ರಾಮದ ಸುತ್ತಲೂ ಕಲ್ಲುಬಂಡೆಗಳಿಂದ ಆವೃತ್ತಗೊಂಡಿದ್ದು ಕಲ್ಲು ಬಂಡೆಗಳ ಮಧ್ಯದಲ್ಲಿರುವುದರಿಂದ ಸಂಗನಕಲ್ಲು ಎಂಬ ಹೆಸರು ಬಂದಿರಬಹುದು ಎಂತಲೂ ಪುರಾತನ ಕಾಲದಲ್ಲಿ ಈ ಪ್ರದೇಶದಲ್ಲಿ ಸಂಗಮೇಶ್ವರ ದೇವಸ್ಥಾನ ಇದ್ದು ಇದರ ಸುತ್ತ ಕಲ್ಲು ಬಂಡೆಯ ಗುಡ್ಡ ಇರುವುದರಿಂದ ಸಂಗನಕಲ್ಲು ಎಂಬ ಹೆಸರು ಬಂದಿರಬಹುದು ಎಂಬ ಮಾಹಿತಿ ಇದೆ. ಈ ಗ್ರಾಮ ಪಂಚಾಯಿತಿಯು ಬಳ್ಳಾರಿ ಜಿಲ್ಲೆಯಿಂದ ೬ ಕಿ.ಮೀ. ದೂರದಲ್ಲಿದ್ದು, ನಗರ

ಪ್ರದೇಶದ ಪ್ರಭಾವ  ಹೆಚ್ಚು ಕಂಡುಬರುತ್ತದೆ. ಗ್ರಾಮದಲ್ಲಿ ಬಹುಪಾಲು ಕೂಲಿ ಕಾರ್ಮಿಕರು, ಕೈ ಕಸುಬುದಾರರು ಇದ್ದಾರೆ. ಈ ಗ್ರಾಮ(ಪಂಚಾಯಿತಿಯ)ದಲ್ಲಿ ಪರಿಶಿಷ್ಟ ಜಾತಿಯವರು ಹೆಚ್ಚಿನ ಸಂಖ್ಯೆಯಲ್ಲಿ ಇದ್ದಾರೆ. ಒಟ್ಟು ಗ್ರಾಮದ ಜನಸಂಖ್ಯೆ ೧೨೦೪೩ ಇದೆ. ಅದರಲ್ಲಿ ಪರಿಶಿಷ್ಟ ಜಾತಿಯವರು ೩೯೫೯  ಇದ್ದರೆ, ಪರಿಶಿಷ್ಟ ಪಂಗಡದವರ ಸಂಖ್ಯೆ ೨೨೭೦. ಸರಿಸುಮಾರು ಅರ್ಧದಷ್ಟು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಜನರಿಂದ ಕೂಡಿದೆ.

ಈ ಗ್ರಾಮದಲ್ಲಿ ಗ್ರಾಮಪಂಚಾಯಿತಿಯ ಕಚೇರಿ, ಸರ್ಕಾರಿ ಪ್ರಾಥಮಿಕ ಶಾಲೆ, ಒಂದು ಪ್ರೌಢಶಾಲೆ, ಗ್ರಂಥಾಲಯ ಮತ್ತು ಕಂದಾಯ ಅಧಿಕಾರಿ ಕಚೇರಿ, ಒಂದು ಬಸ್‌ನಿಲ್ದಾಣ, ಆರ್.ಎಂ.ಪಿ. ವೈದ್ಯರು ಲಭ್ಯವಿದ್ದು ಒಂದು ಔಷಧಿ ಅಂಗಡಿ ಇದೆ. ಅಂಚೆ ಕಚೇರಿ ಕೆಲಸಕ್ಕೆ ಓರ್ವ ಯುವಕನನ್ನು ನೇಮಿಸಿದ್ದಾರೆ.[೧೭]

**ಕೋಷ್ಟಕ ೨.೧**

**ಸಂಗನಕಲ್ಲು ಗ್ರಾಮಪಂಚಾಯಿತಿಯ ಸಾಮಾಜಿಕ ವಿವರಗಳು**

| ವಿವರಗಳು | ಒಟ್ಟು | ಪುರುಷ | ಮಹಿಳೆ |
|---|---|---|---|
| ಜನಸಂಖ್ಯೆ | ೯,೧೮೪ | ೪,೬೭೯ | ೪,೫೭೫ |
| ಮಕ್ಕಳು | ೧,೩೨೬ | ೬೭೦ | ೬೫೬ |
| ಪರಿಶಿಷ್ಟ ಜಾತಿ | ೩,೫೭೬ | ೧,೭೯೬ | ೧,೭೮೦ |
| ಪರಿಶಿಷ್ಟ ಪಂಗಡ | ೪೬೪ | ೨೪೯ | ೨೧೫ |
| ಸಾಕ್ಷರತೆ | ೬೪.೫೨% | ೭೪.೫೧% | ೫೪.೪೮% |
| ಒಟ್ಟು ಕೆಲಸಗಾರರು ೪,೪೬೫ | ೨,೬೧೧ | ೧,೮೫೪ | |
| ಪ್ರಮುಖ ಕೆಲಸಗಾರರು | ೪,೩೧೯ | ೦ | ೦ |
| ತಳಮಟ್ಟದ/ಕೂಲಿ ಕೆಲಸಗಾರರು | ೧೪೬ | ೬೮ | ೭೮ |

**ಮೂಲ:** ೨೦೧೧ರ ಜನಗಣತಿ ವರದಿಯ ಅಂತರ್ಜಾಲದಿಂದ ಪಡೆದ ಮಾಹಿತಿ.

### ಮೋಕಾ ಗ್ರಾಮಪಂಚಾಯಿತಿ

**ಮೋಕಾ ಗ್ರಾಮಪಂಚಾಯಿತಿ:** ಮೋಕಾ ಗ್ರಾಮಪಂಚಾಯಿತಿ ಬಳ್ಳಾರಿ ತಾಲ್ಲೂಕಿನ ದೊಡ್ಡ ಗ್ರಾಮ ಪಂಚಾಯಿತಿಗಳಲ್ಲಿ ಒಂದಾಗಿದೆ. ಈ ಗ್ರಾಮವು ಜಿಲ್ಲಾ ಕೇಂದ್ರದಿಂದ ಸುಮಾರು ೧೮ ಕಿ.ಮಿ.

ದೂರದಲ್ಲಿದೆ. ಈ ಗ್ರಾಮವು ಐತಿಹಾಸಿಕ ಹಿನ್ನೆಲೆಯನ್ನು ಹೊಂದಿರುವ ಗ್ರಾಮವಾಗಿದೆ. ಈ ಗ್ರಾಮದ ಸುತ್ತಲೂ ಶರಾವತಿ ನದಿ ಅವರಿಸಿಕೊಂಡಿದ್ದು ಈ ನದಿ ದಡದಲ್ಲಿ ಕರ್ನಾಟಕದ ರಾಜಮನೆತನಗಳು ಆಳ್ವಿಕೆ ನಡೆಸಿರುವ ಪ್ರದೇಶಗಳೆಂದು ಗುರುತಿಸುವ ಕುರುಹುಗಳು ಈ ಗ್ರಾಮದಲ್ಲಿ ಸಿಕ್ಕಿವೆ. ಮೋಕಾ ಗ್ರಾಮ ಆದೋನಿ–ಬಳ್ಳಾರಿ ರಸ್ತೆಯ ಮಾರ್ಗ ಮಧ್ಯದಲ್ಲಿ ಬರುತ್ತದೆ. ಈ ಗ್ರಾಮವು ಆಂಧ್ರಪ್ರದೇಶದ ಗಡಿಯ ಹತ್ತಿರದಲ್ಲಿದೆ. ಗ್ರಾಮದಲ್ಲಿ ರಾಜ್ಯ ಹೆದ್ದಾರಿ ಸಾಗಿಹೋಗಿದೆ. ಈ ಗ್ರಾಮವು ಹೆಚ್ಚು ನೀರಾವರಿ ಹೊಂದಿರುವ ಪ್ರದೇಶವಾಗಿದೆ. ಈ ಗ್ರಾಮದಲ್ಲಿ ಪರಿಶಿಷ್ಟ ಪಂಗಡದ ಸಮುದಾಯದವರಾದ ನಾಯಕ ಜನಾಂಗದವರು ಹೆಚ್ಚಾಗಿದ್ದಾರೆ. ಈ ಗ್ರಾಮವು ಎಂ.ಎಲ್.ಎ. ಮೀಸಲು ಕ್ಷೇತ್ರದ ವ್ಯಾಪ್ತಿಯಲ್ಲಿ ಬರುತ್ತದೆ. ಈ ಗ್ರಾಮವು ಬಳ್ಳಾರಿ ತಾಲ್ಲೂಕು ಮತ್ತು ಬಳ್ಳಾರಿ ಜಿಲ್ಲೆಯ ವ್ಯಾಪ್ತಿಯಲ್ಲಿ ಬರುತ್ತದೆ. ಈ ಗ್ರಾಮಕ್ಕೆ ಬಳ್ಳಾರಿಯಿಂದ ಪ್ರವೇಶವಾದರೆ ಮೊದಲಿಗೆ ನಮಗೆ ಹೊಸ ಮೋಕಾ ಸಿಗುತ್ತದೆ. ನಂತರದಲ್ಲಿ ಹಳೆ ಮೋಕಾ ಸಿಗುತ್ತದೆ. ಗ್ರಾಮಕ್ಕೆ ಪ್ರವೇಶ ಗೊಂಡಂತೆ ವ್ಯಾಪಾರಿ ಮಳಿಗೆಗಳು ಸಿಗುತ್ತವೆ. ನಂತರದಲ್ಲಿ ಎಡಬದಿಯಲ್ಲಿ ಹರಿಜನ ಬೀದಿ ಸಿಗುತ್ತದೆ. ಬಲಭಾಗದಲ್ಲಿ ಗ್ರಾಮದೇವತೆಯ ದೇವಸ್ಥಾನ, ಅದರ ಪಕ್ಕದಲ್ಲಿ ಒ.ಪಿ. ಪೊಲೀಸ್ ಠಾಣೆ ಕಂಡುಬರುತ್ತದೆ. ಗ್ರಾಮದಲ್ಲಿ ಜಾತಿವಾರು ಬೀದಿಗಳು ಇವೆ. ಹರಿಜನ, ಮಾದಿಗ ಸಮುದಾಯಗಳ ಕೇರಿಗಳು ಪ್ರತ್ಯೇಕವಾಗಿವೆ. ಲಿಂಗಾಯತ, ನಾಯಕ, ಶೆಟರು, ನೇಕಾರರ ಬೀದಿ ಹೀಗೆ ಗ್ರಾಮದಲ್ಲಿ ಜಾತಿವಾರು ಬೀದಿಗಳನ್ನು ಗಮನಿಸಬಹುದಾಗಿದೆ. ಆಂಧ್ರದಿಂದ ವಲಸೆ ಬಂದು ಕ್ಯಾಂಪ್‌ಗಳನ್ನು ನಿರ್ಮಾಣ ಮಾಡಿಕೊಂಡು ಗ್ರಾಮದಿಂದ ಒಂದು ಕಿ.ಮೀ. ದೂರದಲ್ಲಿ ವಾಸವಿರುವ ಜನರಿದ್ದಾರೆ. ಈ ಗ್ರಾಮಕ್ಕೆ ಉತ್ತಮ ರಸ್ತೆ ಸಂಪರ್ಕವಿದೆ. ಗ್ರಾಮದಲ್ಲಿ ಪ್ರಧಾನವಾಗಿ ನಾಯಕರ ಸಮುದಾಯದವರು ಇರುವುದು ಕಂಡುಬಂದಿದೆ. ಇವರಲ್ಲಿ ಭೂಸ್ವಾಮ್ಯವಿದೆ. ಸ್ಥಳೀಯವಾಗಿ ನಾಯಕ ಸಮುದಾಯದ ತಾಲ್ಲೂಕು ಪಂಚಾಯಿತಿ ಅಧ್ಯಕ್ಷರು ಈ ಗ್ರಾಮದವರೇ ಇದ್ದರೂ ಇವರು ಅನಕ್ಷರಸ್ಥರಾಗಿದ್ದಾರೆ. ಇವರಿಗೆ ಗ್ರಾಮಪಂಚಾಯಿತಿಯ ಕರ್ತವ್ಯಗಳ ಮತ್ತು ಅಧ್ಯಕ್ಷರ ಕರ್ತವ್ಯ ಜವಾಬ್ದಾರಿಗಳ ಬಗ್ಗೆ ಅರಿವು ಇಲ್ಲ. ನೇಕಾರರು ವ್ಯಾಪಾರ ಮಾಡುತ್ತಿದ್ದಾರೆ. ಈ ಗ್ರಾಮದಲ್ಲಿ ಕೂಲಿ ಕಾರ್ಮಿಕರ ಸಂಖ್ಯೆ ಹೆಚ್ಚಾಗಿರುವುದು ಕಂಡುಬರುತ್ತದೆ. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಇತರೆ ಹಿಂದುಳಿದ ಮಹಿಳಾ ಕಾರ್ಮಿಕರು ಕೃಷಿ ಕೂಲಿಗೆ ಹೋಗಿ ದೈನಂದಿನ ಆಹಾರವನ್ನು ಖರೀದಿ ಮಾಡುವುದು ಕಂಡುಬರುತ್ತದೆ. ಇವರಿಗೆ ವರ್ಷದಲ್ಲಿ ೬ ತಿಂಗಳ ಕೆಲಸ ಸಿಗುವ ಸಾಧ್ಯತೆ ಗಳಿರುತ್ತವೆ. ಅರೆ ಉದ್ಯೋಗಕ್ಕಾಗಿ ಯುವಕರು ಪಕ್ಕದ ನಗರಪ್ರದೇಶಗಳಿಗೆ ಹೋಗುತ್ತಾರೆ. ಆಟೋ ಚಾಲಕರಾಗಿ, ಗಾರೆಕೆಲಸಗಾರರಾಗಿ ಕೂಲಿಗೆ ಹೋಗುವುದು ಕಂಡುಬರುತ್ತದೆ. ಗ್ರಾಮದ ಬಹುಪಾಲು ಆದಾಯವು ಕೃಷಿಯನ್ನು ಆಧರಿಸಿದೆ. ಭೂರಹಿತರು ಕೃಷಿ ಕೂಲಿ ಮತ್ತು ಇತರೆ ಕೂಲಿ ಕೆಲಸವನ್ನು ಆಧರಿಸಿ ಜೀವನ ನಡೆಸುವುದು ಈ ಗ್ರಾಮದಲ್ಲಿ ಕಂಡುಬರುತ್ತದೆ.

ಮೋಕಾ ಗ್ರಾಮ ೨೦೪೩ ಚ.ಕಿ.ಮೀ. ಭೌಗೋಳಿಕ ವಿಸ್ತೀರ್ಣವನ್ನು ಹೊಂದಿದೆ. ತುಂಗಭದ್ರ ಕಾಲುವೆ ಸುಮಾರು ೨ ಕಿ.ಮೀ.ರಷ್ಟು ಸಾಗಿ ಹೋಗಿದೆ. ಇಲ್ಲಿ ೧೫೮೫ ಕುಟುಂಬಗಳು ವಾಸವಾಗಿವೆ. ಸುಮಾರು ೩೪೭ ಪರಿಶಿಷ್ಟ ಜಾತಿ ಕುಟುಂಬಗಳಿವೆ. ೪೩೬ ಪರಿಶಿಷ್ಟ ಪಂಗಡ ಕುಟುಂಬಗಳಿವೆ. ಗ್ರಾಮದ ಒಟ್ಟು ಜನಸಂಖ್ಯೆ ೯೩೬೩ರಷ್ಟಿದೆ. ಈ ಮಾಹಿತಿಗಳು ೧೯೯೧ರ ಜನಗಣತಿ ವರದಿಯ ಪ್ರಕಾರವಾಗಿದೆ. ೨೦೧೧ರ ಜನಗಣತಿ ವರದಿಯನ್ನು ಅವಲೋಕಿಸಿದಾಗ ಮೋಕಾದಲ್ಲಿನ ಒಟ್ಟು ಮನೆಗಳ ಸಂಖ್ಯೆ ೨,೧೨೯, ಒಟ್ಟು ಜನಸಂಖ್ಯೆ ೧೧,೬೯೦. ಮಕ್ಕಳ ಸಂಖ್ಯೆ ೧,೭೨೦. ಪರಿಶಿಷ್ಟ ಜಾತಿಯವರು ೧,೩೭೮ ಮತ್ತು ಪರಿಶಿಷ್ಟ ಪಂಗಡದವರ ಜನಸಂಖ್ಯೆ ೫,೪೬೪, ಸರಾಸರಿ ಶೇ.೪೮. ಈ ಸಮುದಾಯದವರ ಜನಸಂಖ್ಯೆ ಇರುವುದು ಕಂಡುಬರುತ್ತದೆ.[೧೮]

**ಕೋಷ್ಟಕ ೨.೨**

**ಮೋಕಾ ಗ್ರಾಮಪಂಚಾಯಿತಿಯ ಸಾಮಾಜಿಕ ವಿವರಗಳು**

| ವಿವಿಧ ಗುಂಪಿನ ಜನರ ವಿವರಗಳು | ಒಟ್ಟು ವಿವಿಧ ಗುಂಪುಗಳ ವಿವರಗಳು | ಪುರುಷರ ಸಂಖ್ಯೆ | ಮಹಿಳೆಯರ ಸಂಖ್ಯೆ |
|---|---|---|---|
| ಜನಸಂಖ್ಯೆ | ೧೧,೬೯೦ | ೫,೮೧೦ | ೫,೮೮೦ |
| ಮಕ್ಕಳು | ೧,೭೨೦ | ೮೬೧ | ೮೫೯ |
| ಪರಿಶಿಷ್ಟ ಜಾತಿ | ೧,೩೭೮ | ೬೮೧ | ೬೯೭ |
| ಪರಿಶಿಷ್ಟ ಪಂಗಡ | ೫,೪೬೪ | ೨,೭೧೪ | ೨,೭೫೦ |
| ಸಾಕ್ಷರತೆ | ೫೪.೩೫% | ೬೫.೮೭% | ೪೩.೦೦% |
| ಒಟ್ಟು ಕೆಲಸಗಾರರು | ೫,೮೧೯ | ೩,೩೨೬ | ೨,೪೯೩ |
| ಪ್ರಮುಖ ಕೆಲಸಗಾರರು | ೫,೪೩೭ | ೦ | ೦ |
| ತಳಮಟ್ಟದ/ಕೂಲಿ ಕೆಲಸಗಾರರು | ೩೮೨ | ೧೪೫ | ೨೩೭ |

ಮೂಲ: ೨೦೧೧ರ ಜನಗಣತಿ ವರದಿಯ ಅಂತರ್ಜಾಲದಿಂದ ಪಡೆದ ಮಾಹಿತಿ

## ೨.೩. ಹೊಸಪೇಟೆ ತಾಲ್ಲೂಕಿನ ಸಾಮಾಜಿಕ ವಿವರಣೆಗಳು

ಹೊಸಪೇಟೆ ತಾಲ್ಲೂಕಿನ ಐತಿಹಾಸಿಕ ಹಿನ್ನೆಲೆಯು ಬಹು ಪ್ರಾಚೀನವಾಗಿದ್ದು ಹೊಸಪೇಟೆ ತಾಲ್ಲೂಕಿನ ಬಗ್ಗೆ ಮಹಾಕಾವ್ಯಗಳಾದ ರಾಮಾಯಣದಲ್ಲಿ ಉಲ್ಲೇಖಗಳು ಕಂಡುಬರುತ್ತವೆ. ಇಂದಿನ ಹಂಪಿಯ ಪರಿಸರದ ಕಿಷ್ಕಿಂದೆ ಪ್ರದೇಶದಲ್ಲಿ ರಾಮಾಯಣ ವಾಲಿ ಸುಗ್ರೀವ ಯುದ್ಧ ನಡೆದ ಐತಿಹಾಸಿಕ ಪ್ರದೇಶವೆಂದು ಪ್ರಸಿದ್ಧವಾಗಿದೆ. ಕಾಳಿದಾಸ ಹಾಗೂ ಬಾಣರು ತಮ್ಮ ಕೃತಿಗಳಲ್ಲಿ

ಹೇಮಕೂಟದ ಬಗ್ಗೆ ಪ್ರಸ್ತಾಪಸಿದ್ದಾರೆ. ವಿದ್ಯಾಧರ ವಂಶಿಕರ ರಾಜರ ಮೂಲಪುರುಷನು ಹಂಪೆಯ ಹೇಮಕೂಟ ರಾಜಧಾನಿಯಲ್ಲಿ ಆಳಿದವರೆಂದು ಹೇಳಲಾಗಿದೆ. ಕ್ರಿ.ಪೂ. ನಾಲ್ಕನೇ ಶತಮಾನದಲ್ಲಿ ನಂದರು ಬಳ್ಳಾರಿ ಪ್ರದೇಶವನ್ನು ಆಳ್ವಿಕೆ ಮಾಡಿದ್ದಾರೆಂದು ತಿಳಿದುಬರುತ್ತದೆ.

**ಮಧ್ಯಕಾಲೀನ ಚರಿತ್ರೆ:** ಕ್ರಿ.ಶ.೧೩೨೦ರಲ್ಲಿ ಮೂರನೆಯ ಬಲ್ಲಾಳನು ಕುಮ್ಮಟದ ಮೇಲೆ ಯುದ್ಧ ಮಾಡಿ ದೆಹರೆವಾಡಿ(ದರೋಜಿ) ಮತ್ತು ಹಂಪೆ ಪ್ರದೇಶಗಳನ್ನು ತನ್ನ ವಶಕ್ಕೆ ತೆಗೆದುಕೊಂಡನೆಂದು ತಿಳಿದುಬರುತ್ತದೆ. ಈ ಯುದ್ಧದಿಂದ ಬಲ್ಲಾಳ ಗೆದ್ದರೂ ಯಾವುದೇ ಪ್ರದೇಶಗಳನ್ನು ಪಡೆಯಲಿಲ್ಲ. ಕ್ರಿ.ಶ.೧೩೨೫ರ ನಂತರ ಹಲವು ಶಾಸನಗಳು ಹೇಳುವಂತೆ ಮುಮ್ಮಡಿ ಬಲ್ಲಾಳನು ಹೊಸಪಟ್ಟಣಕ್ಕೆ ವಿರೂಪಾಕ್ಷ, ಹೊಸಪಟ್ಟಣ, ವಿರೂಪಾಕ್ಷ... ಹೊಸದುರ್ಗ, ವಿರೂಪಾಕ್ಷಪುರ ಎಂಬ ಹೆಸರುಗಳಿಂದ ಕರೆಯಲಾಗುತ್ತಿದ್ದ ಹೊಸ ರಾಜಧಾನಿಯಲ್ಲಿ ಆಳ್ವಿಕೆ ನಡೆಸುತ್ತಿದ್ದದ್ದು ತಿಳಿದುಬರುತ್ತದೆ. ಈ ಹೊಸಪಟ್ಟಣವೇ ಹೊಸಪೇಟೆಯಾಗಿ ರೂಪಾಂತರಗೊಂಡಿದೆ.

**ಆಧುನಿಕ ಚರಿತ್ರೆ:** ವಿಜಯನಗರ ಸಾಮ್ರಾಜ್ಯ ಪತನದ ನಂತರ ಹೊಸಪಟ್ಟಣ ಪ್ರದೇಶವು ನಾಮಮಾತ್ರಕ್ಕೆ ಬಿಜಾಪುರ ಆದಿಲ್‌ಷಾಹಿ ಸುಲ್ತಾನರ ಅಧೀನದಲ್ಲಿತ್ತು. ವಾಸ್ತವವಾಗಿ ಸ್ಥಳೀಯ ಪಾಳೇಗಾರರು ಹರಪನಹಳ್ಳಿ ಪಾಳೇಗಾರರು ಈ ಪ್ರದೇಶದ ಪರಿಪಾಲನೆಯಲ್ಲಿದ್ದು ನಂತರ ಹೊಸಪೇಟೆಯು ಹರಪನಹಳ್ಳಿ ಪಾಳೇಗಾರರ ಉಪರಾಜಧಾನಿಯಾಗಿತ್ತು ಎಂದು ಚರಿತ್ರೆ ಹೇಳುತ್ತದೆ.

**ಹೊಸಪೇಟೆ ತಾಲ್ಲೂಕಿನ ಗಡಿ:** ಜಿಲ್ಲಾ ಕೇಂದ್ರ ಬಳ್ಳಾರಿಯಿಂದ ೬೫ ಕಿ.ಮೀ ದೂರದಲ್ಲಿದೆ. ಹೊಸಪೇಟೆ ತಾಲ್ಲೂಕಿನ ಪೂರ್ವಕ್ಕೆ ಬಳ್ಳಾರಿ ತಾಲ್ಲೂಕಿನ ಗಡಿಯಿದ್ದು. ತಾಲ್ಲೂಕಿನ ಉತ್ತರಕ್ಕೆ ಕೊಪ್ಪಳ ಜಿಲ್ಲೆಯಿದೆ. ಸಂಡೂರು ದಕ್ಷಿಣ ಭಾಗದ ಗಡಿಯಾಗಿದ್ದು, ಸಿರುಗುಪ್ಪ ಮತ್ತು ಬಳ್ಳಾರಿ ಪೂರ್ವಕ್ಕೆ ಇದೆ. ಕೊಪ್ಪಳ ಮತ್ತು ಹಗರಿಬೊಮ್ಮನಹಳ್ಳಿ ಪಶ್ಚಿಮ ದಿಕ್ಕಿಗೆ ತನ್ನ ಗಡಿಯನ್ನು ಹೊಂದಿದೆ.[೧೯]

**ತಾಲ್ಲೂಕಿನ ಸಂಕ್ಷಿಪ್ತ ಪರಿಚಯ:** ಹೊಸಪೇಟೆ ತಾಲ್ಲೂಕಿನ ಒಟ್ಟು ಭೌಗೋಳಿಕ ವಿಸ್ತೀರ್ಣ ೯೦೪, ೧೭ ಚ.ಕಿ.ಮೀ. ತಾಲ್ಲೂಕಿನಲ್ಲಿ ಒಟ್ಟು ೭೦.೭೧೯ ಕುಟುಂಬಗಳಿದ್ದು, ಜನಸಂಖ್ಯೆ ೩,೭೪.೯೪೯ ರಷ್ಟಿದೆ. ಗ್ರಾಮೀಣ ಪ್ರದೇಶದಲ್ಲಿ ೨೩೭,೭೬ ಕುಟುಂಬಗಳಿದ್ದು ಗ್ರಾಮೀಣ ಭಾಗದಲ್ಲಿ ೧೫.೩೩೪೯ ಜನಸಂಖ್ಯೆಯಿದೆ. ಗ್ರಾಮೀಣ ಪ್ರದೇಶದಲ್ಲಿ ಪರಿಶಿಷ್ಟ ಜಾತಿಯ ಜನಸಂಖ್ಯೆಯು ೪೦೩೬ರಷ್ಟಿದ್ದು ಪರಿಶಿಷ್ಟ ಪಂಗಡದವರ ಜನಸಂಖ್ಯೆ ೩೦೨೪೨. ನಗರಪ್ರದೇಶದಲ್ಲಿ ೫೭೫೮೨ ಕುಟುಂಬಗಳಿದ್ದು, ಒಟ್ಟು ಜನಸಂಖ್ಯೆ ೨೭೧೦೨೬. ನಗರಭಾಗದಲ್ಲಿ ಪರಿಶಿಷ್ಟ ಜಾತಿಯವರ ಜನಸಂಖ್ಯೆ ೪೯೬೩೪. ಅದೇ ರೀತಿಯಾಗಿ ಪರಿಶಿಷ್ಟ ಪಂಗಡದವರ ಜನಸಂಖ್ಯೆ ೩೭೨೭೮ಗಳಷ್ಟಿದೆ. ತಾಲ್ಲೂಕಿನ ಒಟ್ಟು ಜನಸಂಖ್ಯೆಯಲ್ಲಿ ಶೇ.೨೨.೮೧ರಷ್ಟು ಪರಿಶಿಷ್ಟ ಜಾತಿಯವರಿದ್ದಾರೆ. ಪರಿಶಿಷ್ಟ ಪಂಗಡವರು ಶೇ.೧೬.೩೨

ಜನಸಂಖ್ಯೆಯನ್ನು ಹೊಂದಿದ್ದಾರೆ. ಈ ತಾಲ್ಲೂಕಿನಲ್ಲಿ ಪ್ರತಿ ಚ.ಕಿ.ಮೀ. ೫೯೯ರಷ್ಟು ಜನಸಾಂದ್ರತೆ ಇದ್ದು, ಲಿಂಗಾನುಪಾತ ೧೦೦೬ರಷ್ಟಿರುವುದು ಕಂಡುಬಂದಿದೆ. ತಾಲ್ಲೂಕಿನಲ್ಲಿ ಒಟ್ಟು ಬಿ.ಪಿ.ಎಲ್. ಕುಟುಂಬಗಳ ಸಂಖ್ಯೆ ೧೪೦೭೦, ಎ.ಪಿ.ಎಲ್. ಕುಟುಂಬಗಳ ಸಂಖ್ಯೆ ೧೩೯೬೦. ಪ್ರತಿ ವರ್ಷದಿಂದ ವರ್ಷಕ್ಕೆ ಬಿ.ಪಿ.ಎಲ್.ಕುಟುಂಬಗಳ ಸಂಖ್ಯೆ ಹೆಚ್ಚಾಗುತ್ತಿದೆ. ಪರಿಶಿಷ್ಟಜಾತಿ ಮತ್ತು ಪಂಗಡ ಜನ ಸಂಖ್ಯೆ ಹೋಲಿಸಿದಾಗ ಪರಿಶಿಷ್ಟ ಜಾತಿಯ ಜನಸಂಖ್ಯೆ ಹೆಚ್ಚಿರುವುದು ಕಂಡುಬರುತ್ತದೆ.[೨೦]

**ಶಿಕ್ಷಣ ವ್ಯವಸ್ಥೆ:** ಬಳ್ಳಾರಿ ಜಿಲ್ಲೆಯ ಸಾಕ್ಷರತಾ ಪ್ರಮಾಣವು ಶೇ.೬೭.೮೫ ಇದ್ದು ರಾಜ್ಯದ ಪ್ರಮಾಣಕ್ಕಿಂತ ಶೇ.೭.೭೫ ಕಡಿಮೆಯಾಗಿರುತ್ತದೆ. ಅದೇ ರೀತಿಯಗಿ ಹೊಸಪೇಟೆ ತಾಲ್ಲೂಕಿನ ಸಾಕ್ಷರತಾ ಪ್ರಮಾಣವು ಶೇ.೭೦.೮೨ರಷ್ಟಿದೆ. ಬಳ್ಳಾರಿ ತಾಲ್ಲೂಕಿಗಿಂತ ಉತ್ತಮ ಸಾಕ್ಷರತೆಯನ್ನು ಹೊಂದಿದೆ. ಗ್ರಾಮೀಣ ಭಾಗದಲ್ಲಿ ಒಟ್ಟು ಶೇ.೬೦.೬೪ ಸಾಕ್ಷರತೆ ಇದ್ದರೆ, ಪುರುಷರ ಸಾಕ್ಷರತೆ ಪ್ರಮಾಣ ಶೇ.೭೦ರಷ್ಟಿದ್ದು ಮಹಿಳೆಯರ ಸಾಕ್ಷರತೆ ಶೇ.೫೦ರಷ್ಟು ಕಂಡುಬರುತ್ತದೆ. ಮಹಿಳೆಯರು ಶೇ.೫೦ರಷ್ಟು ಸಂಖ್ಯೆಯ ಜನರು ಶಿಕ್ಷಣದಿಂದ ಹೊರಗೆ ಉಳಿದಿರುವುದು ಕಂಡುಬರುತ್ತದೆ. ಹಾಗೆಯೇ ಶೇ.೩೦ರಷ್ಟು ಪುರುಷರು ಮತ್ತು ಒಟ್ಟಾರೆ ತಾಲ್ಲೂಕಿನ ಜನಸಂಖ್ಯೆಯಲ್ಲಿ ಶೇ.೩೦ರಷ್ಟು ಅನಕ್ಷರಸ್ಥರು ಇರುವುದು ವರದಿಯಾಗಿದೆ. ನಗರಪ್ರದೇಶದಲ್ಲಿ ಗಂಡುಮಕ್ಕಳ ಸಾಕ್ಷರತೆ ಶೇ.೮೫.೩೪, ಹೆಣ್ಣುಮಕ್ಕಳ ಸಾಕ್ಷರತೆ, ಶೇ.೭೦ರಷ್ಟಿದೆ. ಗ್ರಾಮೀಣ ಪ್ರದೇಶಕ್ಕೆ ಹೋಲಿಸಿದರೆ ನಗರಪ್ರದೇಶದಲ್ಲಿ ಗಂಡು ಮತ್ತು ಹೆಣ್ಣುಮಕ್ಕಳ ಸಾಕ್ಷರತೆ ಪ್ರಮಾಣ ಉತ್ತಮವಾಗಿದೆ. ಶೇ.೩೦ರಷ್ಟು ಹೆಣ್ಣುಮಕ್ಕಳು ಶೇ.೧೫ರಷ್ಟು ಗಂಡುಮಕ್ಕಳು ಅನಕ್ಷರಸ್ಥರಿದ್ದಾರೆ. ಹೊಸಪೇಟೆ ತಾಲ್ಲೂಕಿನಲ್ಲಿ ೧೧೯ ಕಿರಿಯ ಪ್ರಾಥಮಿಕ ಶಾಲೆಗಳು, ೧೯೩ ಹಿರಿಯ ಪ್ರಾಥಮಿಕ ಶಾಲೆಗಳು ಮತ್ತು ೮೮ ಪ್ರೌಢಶಾಲೆಗಳಿವೆ. ವಿದ್ಯಾರ್ಥಿ ಮತ್ತು ಶಿಕ್ಷಕರ ಅನುಪಾತ ೯೭:೦೮ರಷ್ಟು ಇದೆ. ೨೩ ಪದವಿಪೂರ್ವ ಕಾಲೇಜುಗಳು, ೩ ಸರ್ಕಾರಿ ಪದವಿ ಕಾಲೇಜುಗಳಿವೆ. ೩(ಖಾಸಗಿ ಪದವಿ ಕಾಲೇಜು ೩ ಈ ತಾಲ್ಲೂಕಿನಲ್ಲಿವೆ). ಈ ತಾಲ್ಲೂಕಿನಲ್ಲಿ ಶಿಕ್ಷಕರ ವಿದ್ಯಾರ್ಥಿಗಳ ಅನುಪಾತ ಅತ್ಯಂತ ಸೂಚನೀಯವಾಗಿ ಹಾಗೂ ಪದವಿ ಕಾಲೇಜುಗಳ ಸಂಖ್ಯೆ ಬಹಳ ಕಡಿಮೆ ಇರುವುದು ಕಂಡುಬಂದಿದ್ದು ಪದವಿಪೂರ್ವ ಶಿಕ್ಷಣ ಮುಗಿದ ವಿದ್ಯಾರ್ಥಿಗಳಿಗೆ ಅವಶ್ಯಕವಿರುವ ೩ ಸರ್ಕಾರಿ ಪದವಿ ಕಾಲೇಜುಗಳು ಕಂಡುಬರುತ್ತದೆ.[೨೧]

**ಆರೋಗ್ಯ:** ಹೊಸಪೇಟೆ ತಾಲ್ಲೂಕಿನಲ್ಲಿ ೮ ಹಾಸಿಗೆಯ ಅಲೋಪತಿ ಆಸ್ಪತ್ರೆಗಳು ೩ ಇವೆ. ೧೦ ಹಾಸಿಗೆಯ ೧ ಆಯುಷ್ ಆಸ್ಪತ್ರೆ ಇದೆ. ೪೦ ಹಾಸಿಗೆಯ ಖಾಸಗಿ ಆಸ್ಪತ್ರೆಗಳು ೪೧ ಇವೆ. ೫೬ ಹಾಸಿಗೆ ಪ್ರಾಥಮಿಕ ಆರೋಗ್ಯ ಕೇಂದ್ರಗಳು ೭ ಇವೆ. ಹೊಸಪೇಟೆಯ ಸಮುದಾಯ ಆರೋಗ್ಯ ಕೇಂದ್ರಗಳಲ್ಲಿ ೧೧ ಚಿಕಿತ್ಸಾಲಯಗಳಿವೆ. ೧೦ ಭಾರತೀಯ, ೧ ಅಲೋಪತಿ ಚಿಕಿತ್ಸಾಲಯಗಳಿದ್ದು, ಕುಟುಂಬ ಕಲ್ಯಾಣ ಕೇಂದ್ರಗಳು ೧೯ ಹಾಗೂ ಉಪಕೇಂದ್ರಗಳು ೩೮ ಇವೆ. ೪೦೬ ಔಷಧಿ

ಅಂಗಡಿಗಳು ತಾಲ್ಲೂಕಿನ ವ್ಯಾಪ್ತಿಯಲ್ಲಿ ಕಂಡುಬರುತ್ತವೆ. ೧೦೦ ಹಾಸಿಗೆಯ ಸರ್ಕಾರಿ ಆಸ್ಪತ್ರೆಯೂ ಒಂದು ಇದೆ. ಒಟ್ಟು ತಾಲ್ಲೂಕಿನಲ್ಲಿ ೮ ಸರ್ಕಾರಿ ಆಸ್ಪತ್ರೆಗಳಿವೆ. ೧೩ ಜನ ಸರ್ಕಾರಿ ವೈದ್ಯರಿದ್ದಾರೆ. ನರ್ಸಿಂಗ್ ಹೋಮ್‌ಗಳಲ್ಲಿ ೨೨ ಜನ, ಚಿಕಿತ್ಸಾಲಯಗಳಲ್ಲಿ ೨೩ ಜನ ಒಟ್ಟು ತಾಲ್ಲೂಕಿನಲ್ಲಿ ೫೮ ಜನ ವೈದ್ಯರು ಲಭ್ಯರಿದ್ದಾರೆ. ರೋಗಿಗಳಿಗೆ ೧೪೨ ಸರ್ಕಾರಿ ಹಾಸಿಗೆಗಳು, ೪೦ ಖಾಸಗಿ ಹಾಸಿಗೆಗಳು ಒಟ್ಟು ೧೮೨ ಹಾಸಿಗೆಗಳು ಮಾತ್ರ ತಾಲ್ಲೂಕಿನಲ್ಲಿ ಲಭ್ಯವಿವೆ. ಒಂದು ರಕ್ತನಿಧಿ ಕೇಂದ್ರವಿದೆ. ಈ ಮೇಲಿನ ಅಂಕಿಸಂಖ್ಯೆಗಳನ್ನು ಗಮನಿಸಿದರೆ. ತಾಲ್ಲೂಕಿನ ಜನಸಂಖ್ಯೆಗೆ ಸರಿಹೊಂದುವ ವೈದ್ಯರ ಕೊರತೆ ಹಾಗೂ ಲಭ್ಯವಿರುವ ಹಾಸಿಗೆ ನೋಡಿದರೆ ತಾಲ್ಲೂಕಿನಲ್ಲಿ ರೋಗಿಗಳಿಗೆ ಚಿಕಿತ್ಸೆ ನೀಡುವ ಸಮಸ್ಯೆಯನ್ನು ಅರ್ಥ ಮಾಡಿಕೊಳ್ಳಬಹುದು. ಬಳ್ಳಾರಿ ಜಿಲ್ಲೆಯಲ್ಲಿ ಏಡ್ಸ್ ರೋಗ ಪೀಡಿತರು ಬಳ್ಳಾರಿ ತಾಲ್ಲೂಕಿನಲ್ಲಿ ಹೆಚ್ಚು ಜನ ಕಂಡುಬಂದರೆ ಜಿಲ್ಲೆಯಲ್ಲಿ ಎರಡನೇ ಹೆಚ್ಚು ಏಡ್ಸ್ ರೋಗಪೀಡಿತರು ಇರುವ ತಾಲ್ಲೂಕು ಆಗಿದೆ. ಕುಷ್ಠರೋಗ ನಿಯಂತ್ರಣ ಕಾರ್ಯಕ್ರಮ ಕ್ಷಯರೋಗ ನಿಯಂತ್ರಣ, ಕ್ಯಾನ್ಸರ್ ರೋಗ ನಿಯಂತ್ರಣ ಕಾರ್ಯಕ್ರಮಗಳು ಈ ತಾಲ್ಲೂಕಿನಲ್ಲಿ ಜಾರಿಯಲ್ಲಿವೆ. ಅಭಿವೃದ್ಧಿಗೂ ಆರೋಗ್ಯಕ್ಕೂ ಅತ್ಯಂತ ನಿಕಟ ಸಂಬಂಧವಿರುವುದು ಪುರಾತನ ಕಾಲದಿಂದಲೂ ಕಂಡುಬಂದಿದೆ. ಸಾಮಾನ್ಯವಾಗಿ ಈ ತಾಲ್ಲೂಕಿನಲ್ಲಿ ನೋಡಿದಾಗ ಏಡ್ಸ್ ರೋಗಪೀಡಿತರಲ್ಲಿ ಅತಿ ಹೆಚ್ಚು ಜನರು ಮರಣವನ್ನು ಹೊಂದಿರುವುದು ಕಂಡುಬಂದಿದೆ. ೪೨೧ ಜನ ಏಡ್ಸ್ ರೋಗಪೀಡಿತರಲ್ಲಿ ೮೦ ಜನರು ಮರಣ ಹೊಂದಿದ್ದಾರೆ. ೨೮೨ ಜನರು ಕ್ಷಯರೋಗ ಪೀಡಿತರಿದ್ದು ಅದರಲ್ಲಿ ೨೧ ಜನ ಮರಣ ಹೊಂದಿದ್ದಾರೆ. ಈ ಸ್ಥಿತಿಯನ್ನು ಗಮನಿಸಿದಾಗ ತಾಲ್ಲೂಕಿನಲ್ಲಿ ಆರೋಗ್ಯ ಸೌಲಭ್ಯಗಳ ಸಮಸ್ಯೆಗಳು ಕಂಡುಬರುತ್ತವೆ. ತಾಲ್ಲೂಕಿನಲ್ಲಿ ಪ್ರತಿ ಹತ್ತು ಸಾವಿರ ಜನರಿಗೆ ಲಭ್ಯವಿರುವ ಆಸ್ಪತ್ರೆಗಳ ಹಾಸಿಗೆಗಳು ಕೇವಲ ೪ ಮಾತ್ರ ಪ್ರತಿ ಹತ್ತು ಸಾವಿರ ಜನರಿಗೆ ಒಬ್ಬ ವೈದ್ಯರು ಮಾತ್ರ ಲಭ್ಯವಿರುವುದು ತಾಲ್ಲೂಕಿನಲ್ಲಿರುವ ಆರೋಗ್ಯ ಸಮಸ್ಯೆಗಳಿಗೆ ಪರಿಹಾರ ಕೋರಿರುವುದು ಆಂತಕಕರವಾದ ಸ್ಥಿತಿಯು ಕಂಡುಬರುತ್ತದೆ.[೨೨]

**ಆರ್ಥಿಕ ಸ್ಥಿತಿಗತಿಗಳು:** ಹೊಸಪೇಟೆ ತಾಲ್ಲೂಕು ಉತ್ತಮ ನೀರಾವರಿ ಪ್ರದೇಶವಾಗಿದ್ದು, ಫಲವತ್ತಾದ ಭೂಮಿಯನ್ನು ಹೊಂದಿದೆ. ಪ್ರಮುಖ ಜೀವನಾಧಾರವಾಗಿ ಪುರಾತನ ಕಾಲದಿಂದಲೂ ವ್ಯವಸಾಯ ವನ್ನು ಅನುಸರಿಸುತ್ತಾ ಬಂದಿದ್ದಾರೆ. ಐತಿಹಾಸಿಕ ಪ್ರಸಿದ್ಧ ತಾಣವಾಗಿರುವುದರಿಂದ ಹೊಸಪೇಟೆ ಪ್ರವಾಸೋದ್ಯಮ ಮತ್ತು ಹೋಟೆಲ್ ಉದ್ಯಮ ಹಾಗೂ ಸಾರಿಗೆ ವ್ಯವಸ್ಥೆಗಳು ಜನರ ಜೀವನಕ್ಕೆ ಆಧಾರವಾಗಿವೆ. ಹಾಗೆಯೇ ಈ ತಾಲ್ಲೂಕು ಕಬ್ಬಿಣದ ಅದಿರು ಮತ್ತು ಗಣಿಗಾರಿಕೆಗೆ ಪ್ರಸಿದ್ಧವಾಗಿದ್ದು, ಹೊಸಪೇಟೆ ಸ್ಟೀಲ್ ಕಂಪನಿಯು ಸೇರಿದಂತೆ ತುಂಗಭದ್ರಾ ಜಲಾಶಯದಲ್ಲಿ ಮೀನುಗಾರಿಕೆ ಉದ್ಯಮಗಳು ಹೀಗೆ ಹಲವು ಉಪ ಉದ್ಯಮಗಳು ಜನರ ಜೀವನವಾಗಿರುವುದು ಕಂಡುಬರುತ್ತದೆ.

ಹೊಸಪೇಟೆಯಲ್ಲಿ ೨೩೯೬೩ ಜನ ಭೂಹಿಡುವಳಿದಾರರಲ್ಲಿ ೩೧೯೭೬೪೯ ವಿಸ್ತೀರ್ಣ ಭೂಮಿಯಿದೆ. ಇದು ಹಿಂದುಳಿದ ಸಮುದಾಯದವರಲ್ಲಿ ಇರುವ ಭೂ ಹಿಡುವಳಿಯಾದರೆ, ಪರಿಶಿಷ್ಟ ಜಾತಿಯ ಒಟ್ಟು ಭೂಹಿಡುವಳಿದಾರರು ೪೮೪೨ ಜನರಿದ್ದಾರೆ. ಅವರಲ್ಲಿ ೪೮೦೫.೬೮ರಷ್ಟು ವಿಸ್ತೀರ್ಣ ಭೂಮಿ ಇದೆ. ಪರಿಶಿಷ್ಟ ಪಂಗಡದವರ ೫೧೬೮ ಜನರಲ್ಲಿ ೫೧೬೩.೬೭ ಎಕರೆಗಳ ವಿಸ್ತೀರ್ಣ ಭೂಮಿ ಇದೆ. ಒಟ್ಟು ಹೊಸಪೇಟೆಯಲ್ಲಿ ೩೪೦೭೨ ಜನರು ಮತ್ತು ಸಂಘ–ಸಂಸ್ಥೆಗಳು ಸೇರಿದಂತೆ ೪೨೨೫೬.೩೬ ಹೆಕ್ಟೇರ್‌ಗಳ ಭೂಮಿಯನ್ನು ವ್ಯವಸಾಯ ಮತ್ತು ವ್ಯವಸಾಯೇತರ ಚಟುವಟಿಕೆಗಳಿಗೆ ಹಿಡುವಳಿದಾರರು ಬಳಸಿಕೊಳ್ಳುತ್ತಿದ್ದಾರೆ. ವ್ಯವಸಾಯದಲ್ಲಿ ಹೆಚ್ಚು ವಾಣಿಜ್ಯ ಬೆಳೆಗಳನ್ನು ಬೆಳೆಯುವಲ್ಲಿ ನಿರತರಾಗಿದ್ದು, ಕಬ್ಬು, ಭತ್ತ, ಬಾಳೆ, ಮೀನುಗಾರಿಕೆ, ತೆಂಗು ಸೇರಿದಂತೆ ದ್ವಿದಳ ಎಣ್ಣೆಕಾಳುಗಳನ್ನು ಹೆಚ್ಚು ಬೆಳೆಯುವುದರಿಂದ ಉತ್ತಮವಾದ ಆರ್ಥಿಕ ಸ್ಥಿತಿಯು ತಾಲ್ಲೂಕಿನಲ್ಲಿ ಕಂಡುಬರುತ್ತದೆ. ತಾಲ್ಲೂಕಿನಲ್ಲಿ ಮುಖ್ಯ ಕೆಲಸಗಾರರು ೧೬೭೩೧೪ ಜನರಿದ್ದು ಅರೆಕಾಲಿಕ ಕೆಲಸಗಾರರು ೨೨೩೯ ಜನರಿದ್ದಾರೆ. ೨೭೦೩೦೮ ಜನರು ಕೆಲಸಗಾರರಲ್ಲದವರೂ ಇದ್ದಾರೆ. ೫೭೯೮ ಜನ ಕೃಷಿಕಾರ್ಮಿಕರಿದ್ದಾರೆ. ತಾಲ್ಲೂಕಿನಲ್ಲಿ ಯಾವುದೇ ನಿಖರ ತರಬೇತಿ ಸಾಮರ್ಥ್ಯ ಹೊಂದಿರದ ಎರಡು ಲಕ್ಷಕ್ಕೂ ಅಧಿಕ ಜನರಿದ್ದಾರೆ. ಅದೇ ರೀತಿಯಾಗಿ ಅರೆಕಾಲಿಕ ಕೆಲಸಗಾರರು ಅಧಿಕವಾಗಿ ಕಂಡುಬರುತ್ತಾರೆ. ಈ ತಾಲ್ಲೂಕಿನಲ್ಲಿ ಕೃಷಿಕಾರ್ಮಿಕರು ಹೆಚ್ಚಾಗಿ ಕಂಡುಬರುತ್ತಾರೆ.

**ಹೊಸಪೇಟೆ ಆಡಳಿತ ಮತ್ತು ಪಂಚಾಯತ್ ವ್ಯವಸ್ಥೆ:** ಹೊಸಪೇಟೆಯ ತಾಲ್ಲೂಕಿನಲ್ಲಿ ಎರಡು ನಾಡ ಕಚೇರಿಗಳು ೪೪ ಗ್ರಾಮಲೆಕ್ಕಿಗರ ವೃತ್ತಗಳು ೪ ಹೋಬಳಿಗಳು ೨೩ ಗ್ರಾಮಪಂಚಾಯಿತಿಗಳು ೩ ನಗರ ಪಟ್ಟಣ ಪ್ರದೇಶಗಳು ಜನವಸತಿ ಇರುವ ೬೮ ಗ್ರಾಮಗಳು ಜನವಸತಿ ಇಲ್ಲದ ೬ ಗ್ರಾಮಗಳು ಒಟ್ಟು ತಾಲ್ಲೂಕಿನಲ್ಲಿ ೭೪ ಗ್ರಾಮಗಳು ಇವೆ. ನಗರಸಭೆಗಳು/ನಗರಪಾಲಿಕೆಗಳು ಒಟ್ಟು ೩. CMC–೧, TMC–೧, T.P–೧ರಂತೆ ೩ ನಗರಸಭೆಗಳಿದ್ದು ತಾಲ್ಲೂಕಿನಿಂದ ೪ ಜನರು ಜಿಲ್ಲಾ ಪಂಚಾಯಿತಿಗೆ ಆಯ್ಕೆಯಾಗಿದ್ದಾರೆ. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದ ವರ್ಗ ಮತ್ತು ಸಾಮಾನ್ಯ ವರ್ಗಕ್ಕೆ ಸೇರಿದಂತೆ ತಲಾ ಒಬ್ಬ ಸದಸ್ಯರಾಗಿ ಈ ಮೇಲ್ಕಂಡ ವರ್ಗಗಳಿಂದ ಆಯ್ಕೆಯಾಗಿದ್ದಾರೆ. ತಾಲ್ಲೂಕು ಪಂಚಾಯಿತಿಗೆ ೯ ಪುರುಷ ಹಾಗೂ ೭ ಮಹಿಳೆಯರು ಆಯ್ಕೆಯಾಗಿದ್ದಾರೆ. ಜಿಲ್ಲಾ ಪಂಚಾಯಿತಿಯ ಸದಸ್ಯರ ಆಯ್ಕೆಯಲ್ಲಿ ಒಬ್ಬರು ಮಹಿಳೆಯರು ಆಯ್ಕೆಯಾಗಿಲ್ಲ. ಒಟ್ಟು ತಾಲ್ಲೂಕು ಪಂಚಾಯಿತಿಗೆ ೧೬ ಜನರು ಆಯ್ಕೆಯಾಗಿದ್ದು ಪರಿಶಿಷ್ಟ ಜಾತಿಯ ಜನರು ೪ ಪರಿಶಿಷ್ಟ ಪಂಗಡದಿಂದ ೨ ಜನರು, ಹಿಂದುಳಿದ ವರ್ಗದಿಂದ ೬ ಜನರು ಸಾಮಾನ್ಯವರ್ಗದಿಂದ ೪ ಜನರು ಸದಸ್ಯರಾಗಿ ಆಯ್ಕೆಯಾಗಿದ್ದಾರೆ. ತಾಲ್ಲೂಕಿನಲ್ಲಿ ೩೯೫ ಜನ ಗ್ರಾಮ ಪಂಚಾಯಿತಿ ಸದಸ್ಯರು ಆಯ್ಕೆಯಾಗಿದ್ದಾರೆ. ಒಟ್ಟು ೨೩ ಗ್ರಾಮಪಂಚಾಯಿತಿಗಳಿಗೆ ಅದರಲ್ಲಿ ಪರಿಶಿಷ್ಟ ಜಾತಿಯ ಸದಸ್ಯರು ೧೦೫ ಮಂದಿ, ಪರಿಶಿಷ್ಟ ಪಂಗಡದಿಂದ ೮೧ ಜನ, ಹಿಂದುಳಿದ ವರ್ಗಗಳಿಂದ ೧೨೭ ಜನರು, ಹಾಗೆಯೇ

ಸಾಮಾನ್ಯ ವರ್ಗಗಳಿಂದ ೮೨ ಜನರು ಗ್ರಾಮಪಂಚಾಯಿತಿಯ ಸದಸ್ಯರಾಗಿ ಆಯ್ಕೆಯಾಗಿರುವುದು ಕಂಡುಬರುತ್ತದೆ. ಹೊಸಪೇಟೆ ನಗರಸಭೆಗೆ ೩೫ ಜನ ಸದಸ್ಯರು ಆಯ್ಕೆಯಾಗಿದ್ದು ೨೩ ಜನ ಪುರುಷರು, ೧೨ ಮಂದಿ ಹೆಂಗಸರು ಆಯ್ಕೆಯಾಗಿದ್ದಾರೆ. ಪರಿಶಿಷ್ಟ ಜಾತಿಯಿಂದ ೫, ಪರಿಶಿಷ್ಟ ಪಂಗಡದಿಂದ ೫, ಹಿಂದುಗಳಿದ ವರ್ಗಗಳಿಂದ ೧೨, ಸಾಮಾನ್ಯವರ್ಗದಿಂದ ೧೩ ಜನ ಸದಸ್ಯರು ಆಯ್ಕೆಯಾಗಿದ್ದಾರೆ, ಪುರಸಭೆಗೆ ೨೩ ಮಂದಿ ಆಯ್ಕೆಯಾಗಿದ್ದು, ೧೫ ಪುರುಷರು, ೮ ಮಹಿಳೆಯರು ಸೇರಿದಂತೆ ೪ ಪರಿಶಿಷ್ಟ ಜಾತಿಯ ಮಂದಿ, ೨ ಜನ ಪರಿಶಿಷ್ಟ ಪಂಗಡದವರು, ೮ ಜನ ಹಿಂದುಳಿದ ವರ್ಗದವರು, ೯ ಜನ ಸಾಮಾನ್ಯವರ್ಗದಿಂದ ಆಯ್ಕೆಯಾಗಿದ್ದಾರೆ. ಪಟ್ಟಣ ಪಂಚಾಯಿತಿಗೆ ೧೩ ಜನ ಪುರುಷರು, ೭ ಜನ ಮಹಿಳೆಯರು ಆಯ್ಕೆಯಾಗಿದ್ದಾರೆ. ಪರಿಶಿಷ್ಟ ಜಾತಿ ೫, ಪರಿಶಿಷ್ಟ ಪಂಗಡ ೪, ಹಿಂದುಳಿದ ವರ್ಗದವರು ೭, ಸಾಮಾನ್ಯವರ್ಗದವರು ೪ ಜನರು ಆಯ್ಕೆಯಾಗಿರುತ್ತಾರೆ.[೨೩]

**ಮಲಪನಗುಡಿ ಗ್ರಾಮಪಂಚಾಯಿತಿ**

ಮಲಪನಗುಡಿ ಗ್ರಾಮ ಪಂಚಾಯಿತಿಗೆ ಹೆಸರು ಬರಲು ಕಾರಣ ವಿಜಯನಗರ ಅರಸರ ಕಾಲಾವಧಿಯಲ್ಲಿ ಮಲ್ಲಪನಾಯಕ ಎನ್ನುವರಿಗೆ ಉಂಬಳಿಯಾಗಿ ಈ ಗ್ರಾಮವನ್ನು ನೀಡಲಾಗಿತ್ತು. ಮಲ್ಲಪನಾಯಕನ ಆಡಳಿತದಲ್ಲಿದ್ದ ಕಾರಣ ಕಾಲಾಂತರದಲ್ಲಿ ಮಲಪನಗುಡಿಯಾಗಿ ಗ್ರಾಮದ ಹೆಸರು ಬಂದಿದೆ ಎಂದು ತಿಳಿದುಬಂದಿದೆ. ಈ ಗ್ರಾಮವು ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕಿನ ವ್ಯಾಪ್ತಿಯಲ್ಲಿ ಬರುತ್ತದೆ. ಈ ಗ್ರಾಮವು ಕಂಪ್ಲಿ–ಹೊಸಪೇಟೆ ಮಾರ್ಗದಲ್ಲಿದೆ. ತಾಲ್ಲೂಕು ಕೇಂದ್ರದಿಂದ ೫ ಕಿ.ಮೀ. ದೂರದಲ್ಲಿದೆ. ಜಿಲ್ಲಾ ಕೇಂದ್ರದಿಂದ ೬೫ ಕಿ.ಮೀ ದೂರದಲ್ಲಿದೆ. ಗ್ರಾಮದ ವಿಸ್ತೀರ್ಣ ೧೦೪೨–೯೪ ಚ.ಕಿ.ಮೀ. ಇದೆ. ಗ್ರಾಮಠಾಣಾವು ೩೧.೭೫. ಚ.ಕಿ.ಮೀ. ಇದೆ. ಹೊಸಪೇಟೆ ತಾಲ್ಲೂಕು ಕೇಂದ್ರದಿಂದ ಮಲಪನಗುಡಿ ಗ್ರಾಮಕ್ಕೆ ಪ್ರವೇಶಿಸಿದಾಗ ಮೊದಲಿಗೆ ಬಲಭಾಗದಲ್ಲಿ ರಾಮನ ದೇವಸ್ಥಾನ ಕಂಡುಬರುತ್ತದೆ. ಗ್ರಾಮದ ಎಡಭಾಗದಲ್ಲಿ ಸರ್ಕಾರಿ ಹಿರಿಯ ಪ್ರಾಥಮಿಕ ಶಾಲೆ ಕಂಡುಬರುತ್ತದೆ. ಗ್ರಾಮದ ಮಧ್ಯದಲ್ಲಿ ಕಂಪ್ಲಿ–ಹೊಸಪೇಟೆ ರಸ್ತೆ ಸಾಗಿಹೋಗಿದೆ. ಗ್ರಾಮದ ಎಡ ಮತ್ತು ಬಲಭಾಗಗಳಲ್ಲಿ ಗ್ರಾಮವು ಹಬ್ಬಿದೆ. ಈ ಗ್ರಾಮದಲ್ಲಿ ಜಾತಿವಾರು ಬೀದಿಗಳಿವೆ. ನಗರಪ್ರದೇಶಕ್ಕೆ ಹತ್ತಿರದಲ್ಲಿರುವ ಗ್ರಾಮವಾಗಿರುವುದರಿಂದ ಈ ಗ್ರಾಮದಲ್ಲಿ ಹೆಚ್ಚಿನ ವ್ಯಾಪಾರ ಚಟುವಟಿಕೆಗಳು ಇಲ್ಲದಿರುವುದು ಕಂಡುಬಂದಿದೆ. ಈ ಗ್ರಾಮದಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಸಮುದಾಯಗಳಲ್ಲಿ ಅನಕ್ಷರತೆ ಹೆಚ್ಚಿರುವುದು ಕಂಡುಬರುತ್ತದೆ. ಈ ಗ್ರಾಮದಲ್ಲಿ ಕೃಷಿಯನ್ನು ಆಧರಿಸಿರುವ ಕುಟುಂಬಗಳು ಹೆಚ್ಚಿವೆ. ಹಾಗಾಗಿ ಕೃಷಿ ಕೂಲಿಯಲ್ಲಿ ತೊಡಗಿಕೊಂಡು ಶಿಕ್ಷಣ ಪಡೆಯದೆ ಕೂಲಿ ಹೋಗುವುದು ಕಂಡು ಬರುತ್ತದೆ. ಈ ಗ್ರಾಮದಲ್ಲಿ ಒಂದು ಬ್ಯಾಂಕ್ ಮತು ಸರ್ಕಾರಿ ಆಸ್ಪತ್ರೆ ಇದೆ. ಸಹಕಾರಿ ಸಂಘ ಇದೆ. ತುಂಗಭದ್ರಾ ಡ್ಯಾಮ್ ನೀರು ಕುಡಿಯುವುದಕ್ಕೆ

ಮತ್ತು ಕೃಷಿಗೆ ಲಭ್ಯತೆಯಿದೆ. ಇದು ನೀರಾವರಿ ಹೊಂದಿರುವ ಗ್ರಾಮವಾಗಿದೆ. ಹೊಸ ಮಲಪನಗುಡಿ, ಕಡ್ಡಿರಾಂಪುರ ತಾಂಡಾ, ಮಲಪನಗುಡಿ ತಾಂಡಾ, ಗಾಳೆಮ್ಮಗುಡಿ ಗ್ರಾಮಗಳು ಮಲಪನಗುಡಿ ಗ್ರಾಮಪಂಚಾಯಿತಿ ವ್ಯಾಪ್ತಿಯಲ್ಲಿ ಬರುತ್ತದೆ.

ಗ್ರಾಮದಲ್ಲಿ ಕುರುಬ, ವಡ್ಡ, ಹರಿಜನ, ನಾಯಕ, ಶೆಟ್ಟಿ, ಬ್ರಾಹ್ಮಣ, ಲಿಂಗಾಯತ, ಉಪ್ಪಾರ, ಕಂಬಾರ, ಕುಂಬಾರ, ಬಡಿಗೇರ, ಅಗಸ, ಕ್ಷೌರಿಕ, ಮರಾಠಿ, ಗೊಲ್ಲ, ಪಿಂಜಾರ, ರೆಡ್ಡಿ, ಕ್ರೈಸ್ತ, ಅಕ್ಕಸಾಲಿಗ, ಲಂಬಾಣಿ, ದಾಸ, ನೇಕಾರ, ಕಬ್ಬೇರ, ಗಾಣಿಗ, ಈಡಿಗ, ಕವುಡಿಕೆ, ಬಣಜಿಗ, ಕಟುಕ ಮೊದಲಾದ ಜಾತಿಗಳು ಇಲ್ಲಿ ವಾಸವಿವೆ. ಈ ಗ್ರಾಮದಲ್ಲಿ ಕನ್ನಡ, ತೆಲುಗು, ತಮಿಳು, ಮರಾಠಿ, ಮಲಯಾಳಂ, ಕೊರವ, ಲಂಬಾಣಿ ಭಾಷೆಗಳನ್ನು ಬಳಕೆ ಮಾಡುತ್ತಾರೆ. ಈ ಗ್ರಾಮದ ಕುರುಬರಲ್ಲಿ ಹೆಚ್ಚಿನ ಭೂಸ್ವಾಮ್ಯ ಇದೆ. ಹಾಗಾಗಿ ಗ್ರಾಮದಲ್ಲಿ ಇವರ ಮಾತು ಹೆಚ್ಚು ಪ್ರಭಾವಿತವಾಗಿರುತ್ತದೆ.

ಗ್ರಾಮದ ಮೂಲ ಆದಾಯ ಕೃಷಿಯಿಂದ ಸಿಗುತ್ತದೆ. ಕಬ್ಬು, ನೆಲ್ಲು ಮತ್ತು ಬಾಳೆ ಬೆಳೆ ಪ್ರಮುಖ ಕೃಷಿ ಬೆಳಗಳಾಗಿವೆ. ಕಬ್ಬು, ಗುಡಿಕೈಗಾರಿಕೆಗಳನ್ನು ನಿರ್ವಹಿಸುವುದರ ಮೂಲಕ ಗ್ರಾಮಸ್ಥರು ಆದಾಯವನ್ನು ಪಡೆಯುತ್ತಾರೆ.[೨೪]

**ಕೋಷ್ಟಕ ೨.೩**

**ಮಲಪನಗುಡಿ ಗ್ರಾಮಪಂಚಾಯಿತಿಯ ಸಾಮಾಜಿಕ ವಿವರಗಳು**

| ವಿವರಗಳು | ಒಟ್ಟು | ಪುರುಷರ | ಮಹಿಳೆಯರ |
|---|---|---|---|
| ಜನಸಂಖ್ಯೆ | ೧೦,೬೫೪ | ೫,೩೫೩ | ೫,೩೦೧ |
| ಮಕ್ಕಳು | ೧,೫೭೫ | ೮೦೭ | ೭೬೮ |
| ಪರಿಶಿಷ್ಟ ಜಾತಿ | ೩,೦೩೮ | ೧,೫೨೪ | ೧,೫೧೪ |
| ಪರಿಶಿಷ್ಟ ಪಂಗಡ | ೧,೩೯೮ | ೬೭೫ | ೭೨೩ |
| ಸಾಕ್ಷರತೆ | ೬೦.೪೪% | ೬೯.೧೬% | ೫೧.೬೯% |
| ಒಟ್ಟು ಕೆಲಸಗಾರರು | ೫,೩೫೧ | ೩,೦೮೪ | ೨,೨೬೭ |
| ಪ್ರಮುಖ ಕೆಲಸಗಾರರು | ೫,೧೨೨ | ೦ | ೦ |
| ತಳಮಟ್ಟದ/ಕೂಲಿಕೆಲಸಗಾರರು | ೨೨೯ | ೧೧೧ | ೧೧೮ |

ಮೂಲ: ೨೦೧೧ರ ಜನಗಣತಿ ವರದಿಯ ಅಂತರ್ಜಾಲದಿಂದ ಪಡೆದ ಮಾಹಿತಿ

## ಪಾಪಿನಾಯಕನಹಳ್ಳಿ ಗ್ರಾಮಪಂಚಾಯಿತಿ

ಪಾಪಿನಾಯಕನಹಳ್ಳಿ ಗ್ರಾಮಪಂಚಾಯಿತಿಯು ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲ್ಲೂಕು ವ್ಯಾಪ್ತಿಯಲ್ಲಿ ಬರುತ್ತದೆ. ಈ ಗ್ರಾಮದಲ್ಲಿ ಪಾಪನಾಯಕ ಎಂಬ ಕಂದಾಯ ವಸೂಲಿಗಾರನು ಇದ್ದು ಕಂದಾಯ ವಸೂಲಿ ಮಾಡುತ್ತಿದ್ದನೆಂದು ಕಾಲಾಂತರದಲ್ಲಿ ಅದೇ ಈ ಗ್ರಾಮದ ಹೆಸರಾಗಿ ಮಾರ್ಪಟ್ಟಿರುವುದನ್ನು ತಿಳಿಯಬಹುದಾಗಿದೆ. ಈ ಗ್ರಾಮ ಹೊಸಪೇಟೆ–ಬಳ್ಳಾರಿ ಮಾರ್ಗದಲ್ಲಿ ಸಿಗುತ್ತದೆ. ಕಮಲಾಪುರದಿಂದ ೮ ಕಿ.ಮೀ. ಅಂತರದಲ್ಲಿದೆ ಹಾಗೂ ತಾಲ್ಲೂಕು ಕೇಂದ್ರದಿಂದ ೧೫ ಕಿ.ಮೀ. ದೂರದಲ್ಲಿ ಈ ಗ್ರಾಮವಿದೆ. ಜಿಲ್ಲಾ ಕೇಂದ್ರ ಬಳ್ಳಾರಿಯಿಂದ ೫೧ ಕಿ.ಮೀ. ಅಂತರದಲ್ಲಿದೆ. ಗ್ರಾಮದ ವಿಸ್ತೀರ್ಣ ೮೬೬೪.೪೮ ಚ.ಕಿ.ಮೀ. ಗ್ರಾಮಠಾಣಾದ ವ್ಯಾಪ್ತಿ ವಿಸ್ತೀರ್ಣ ೮.೫೮.ಚ. ಕಿ.ಮೀ.ಗಳಾಗಿವೆ.

ಈ ಗ್ರಾಮಪಂಚಾಯಿತಿಗೆ ಹೊಸಪೇಟೆನಿಂದ ಪ್ರವೇಶ ಮಾಡುತ್ತಿದಂತೆಯೇ ಬಲಭಾಗದಲ್ಲಿ ಗ್ರಾಮಪಂಚಾಯಿತಿ ಕಛೇರಿ ಕಂಡುಬರುತ್ತದೆ. ಎಡಬದಿಯಲ್ಲಿ ಲಿಂಗಾಯತ ಬೀದಿಯಿದೆ. ಗ್ರಾಮದ ಮಧ್ಯದಲ್ಲಿ ಬಳ್ಳಾರಿ–ಹೊಸಪೇಟೆ ರಸ್ತೆ ಇದೆ. ಗ್ರಾಮವು ಎಡ ಮತ್ತು ಬಲಭಾಗದಲ್ಲಿ ಹಂಚಿಕೆಯಾಗಿದೆ. ಈ ಗ್ರಾಮದಲ್ಲಿ ಲಿಂಗಾಯತರು ಪ್ರಬಲರಾಗಿದ್ದು, ಇವರಲ್ಲಿ ಹೆಚ್ಚಿನ ಭೂಮಿ ಇದೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಜನರು ಮತ್ತು ಇತರೆ ಹಿಂದುಳಿದಜಾತಿಯವರು ಇವರ ಹೊಲಗಳಿಗೆ ಕೂಲಿಗೆ ಹೋಗುತ್ತಾರೆ. ಲಿಂಗಾಯತರು ರೈತಗಾರಿಕೆ ಮಾಡುತ್ತಾರೆ ಮತ್ತು ಗ್ರಾಮದ ಸಣ್ಣ ವ್ಯಾಪಾರಿಗಳಾಗಿದ್ದಾರೆ. ಈ ಗ್ರಾಮವು ಹೊಸಪೇಟೆ ವಿಧಾನಸಭಾ ಕ್ಷೇತ್ರದಲ್ಲಿದೆ. ಸಾಮಾನ್ಯವರ್ಗದ ಅಭ್ಯರ್ಥಿಯು ಶಾಸಕರಾಗಿದ್ದಾರೆ. ನಗರ ಪ್ರದೇಶಕ್ಕೆ ಹತ್ತಿರ ಇರುವುದರಿಂದ ವ್ಯಾಪಾರಗಳು ಸ್ಥಳೀಯವಾಗಿ ಅಭಿವೃದ್ಧಿ ಹೊಂದಿಲ್ಲ. ಈ ಗ್ರಾಮವು ಕೃಷಿಗೆ ಕೊಳವೆಬಾವಿಗಳನ್ನು ಮತ್ತು ಮಳೆಯನ್ನು ಆಧರಿಸಿದೆ. ಹಾಗಾಗಿ ಇಲ್ಲಿಯ ಕೃಷಿ ಕೂಲಿಯು ತೀರಾ ಕಡಿಮೆ ಇರುವುದು ಕಂಡುಬರುತ್ತದೆ. ಮಹಿಳೆಯರು, ಯುವಕರು ತೋರಣಗಲ್ಲಿನ ಕೈಗಾರಿಕೆಯಲ್ಲಿ ಕೂಲಿ ಕೆಲಸಕ್ಕೆ ಹೋಗುತ್ತಾರೆ. ಇಲ್ಲಿ ಚಾಲಕ ವೃತ್ತಿಯನ್ನು ಮಾಡುವವರು ಹೆಚ್ಚಾಗಿದ್ದಾರೆ. ಸರ್ಕಾರಿ ಆಸ್ಪತ್ರೆ ತಾಲ್ಲೂಕಿನಲ್ಲಿದೆ.

ಇಲ್ಲಿನ ಶ್ರೀಮಂತವರ್ಗ ಮೈನಿಂಗ್ ವ್ಯಾಪಾರದಲ್ಲಿ ಮತ್ತು ಲಾರಿಗಳನ್ನು ಇಟ್ಟುಕೊಂಡು ಸರಕು ಸಾಗಾಣಿಕೆಯ ವ್ಯಾಪಾರವನ್ನು ಮಾಡುತ್ತಿದ್ದಾರೆ. ಪಕ್ಕದ ನಗರಪ್ರದೇಶಕ್ಕೆ ಕೂಲಿ ಮಾಡುವ ಮತ್ತು ಗಾರೆ ಕೆಲಸಗಾರರು ಹೋಗುತ್ತಾರೆ. ಮಹಿಳೆಯರಿಗೆ ಗ್ರಾಮದ ಕೃಷಿ ಕೆಲಸ ಬಿಟ್ಟರೆ ಬೇರೆ ಕೆಲಸ ಸಿಗದೇ ಇರುವುದು ಕಂಡುಬರುತ್ತದೆ. ನರೇಗಾ ಯೋಜನೆ ಬಂದ ನಂತರ ಗ್ರಾಮದ ಬಡವರಿಗೆ ಕೂಲಿ ಕೆಲಸ ಸಿಕ್ಕಿ ಬೇಸಿಗೆಯಲ್ಲಿ ಜೀವನ ಸುಧಾರಿಸಿದೆ ಎಂದು ಹೇಳಬಹುದು.

**ಗ್ರಾಮದ ಸಾಮಾಜಿಕ ಸ್ಥಿತಿಗತಿ:** ಗ್ರಾಮದಲ್ಲಿ ಜಂಗಮ, ಲಿಂಗಾಯತ, ಕುರುಬ, ನಾಯಕ, ಮುಸ್ಲಿಂ, ವಡ್ಡ, ಹರಿಜನ, ಬ್ರಾಹ್ಮಣ, ಕೋಮಟಿಗ ಮೊದಲಿಯಾರ್, ರೆಡ್ಡಿ, ಅಗಸ, ಹಜಾಮ, ಬಡಿಗೇರ,

ಕಂಬಾರ, ಕುಂಬಾರ, ಅಕ್ಕಸಾಲಿಗ, ಈಡಿಗ, ಉಪ್ಪಾರ ಸಮುದಾಯದವರು ಇಲ್ಲಿಯ ನಿವಾಸಿಗಳಾಗಿದ್ದಾರೆ. ವೀರಶೈವ ಸಮುದಾಯದವರು ಈ ಗ್ರಾಮದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿರುವುದು ಕಂಡುಬಂದಿದೆ. ಈ ಗ್ರಾಮದಲ್ಲಿ ಜಾತಿವಾರು ಬೀದಿಗಳನ್ನು ಗಮನಿಸಬಹುದು.

ಗ್ರಾಮದ ಭೂಸ್ವಾಮ್ಯವು ಲಿಂಗಾಯತ ಜಾತಿ ಸಮುದಾಯದವರಲ್ಲಿ ಹೆಚ್ಚಿದೆ. ಕುರುಬರು, ನಾಯಕರು, ಹರಿಜನರು, ವಡ್ಡರು ಹೆಚ್ಚಾಗಿ ಕೃಷಿ ಕಾರ್ಮಿಕರು ಇರುವುದು ಕಂಡುಬಂದಿದೆ. ಸಟೇಗೆರಿಹಳ್ಳ ಮತ್ತು ಪಾಪಿನಾಯಕನಹಳ್ಳಿ ಕೆರೆಗಳು ಗ್ರಾಮದ ನೀರಾವರಿ ಮೂಲಗಳಿವೆ. ಗ್ರಾಮಕ್ಕೆ ಕುಡಿಯುವ ನೀರನ್ನು ಈ ಕೆರೆಗಳಿಂದ ಸರಬರಾಜು ಮಾಡಲಾಗುತ್ತದೆ. ಈ ಕೆರೆಗಳಿಗೆ ಮಳೆಗಾಲದಲ್ಲಿ ಮಾತ್ರ ನೀರು ಹರಿಯುತ್ತದೆ. ಬೇಸಿಗೆಯಲ್ಲಿ ನೀರಿನ ಬವಣೆ ಉಂಟಾಗುತ್ತದೆ.[೨೫]

**ಕೋಷ್ಟಕ ೨.೪**

**ಪಾಪಿನಾಯಕನಹಳ್ಳಿ ಗ್ರಾಮಪಂಚಾಯಿತಿಯ ಸಾಮಾಜಿಕ ವಿವರಗಳು**

| ವಿವರಗಳು | ಒಟ್ಟು | ಪುರುಷರ | ಮಹಿಳೆಯರ |
|---|---|---|---|
| ಜನಸಂಖ್ಯೆ | ೬,೯೫೭ | ೩,೪೭೨ | ೩,೪೮೫ |
| ಮಕ್ಕಳು | ೧,೧೯೮ | ೬೦೪ | ೫೯೪ |
| ಪರಿಶಿಷ್ಟ ಜಾತಿ | ೨,೦೫೩ | ೧,೦೩೬ | ೧,೦೧೭ |
| ಪರಿಶಿಷ್ಟ ಪಂಗಡ | ೧,೨೪೮ | ೬೧೬ | ೬೩೨ |
| ಸಾಕ್ಷರತೆ | ೬೪.೯೮% | ೭೬.೪೬% | ೫೩.೫೮% |
| ಒಟ್ಟು ಕೆಲಸಗಾರರು | ೨,೭೨೬ | ೧,೮೫೬ | ೮೭೦ |
| ಪ್ರಮುಖ ಕೆಲಸಗಾರರು | ೨,೨೭೬ | ೦ | ೦ |
| ತಳಮಟ್ಟದ/ಕೂಲಿ ಕೆಲಸಗಾರರು | ೪೫೦ | ೧೭೪ | ೨೭೬ |

ಮೂಲ: ೨೦೧೧ರ ಜನಗಣತಿ ವರದಿಯ ಅಂತರ್ಜಾಲದಿಂದ ಪಡೆದ ಮಾಹಿತಿ

## ೨.೪. ಕೂಡ್ಲಿಗಿ ತಾಲ್ಲೂಕಿನ ಸಾಮಾಜಿಕ ವಿವರಣೆಗಳು

### ಭೌಗೋಳಿಕ ವಿಸ್ತೀರ್ಣ

ಬಳ್ಳಾರಿ ಜಿಲ್ಲೆಯ ಹಿಂದುಳಿದ ತಾಲ್ಲೂಕುಗಳಲ್ಲಿ ಕೂಡ್ಲಿಗಿ ತಾಲ್ಲೂಕು ಒಂದಾಗಿದೆ. ಈ ತಾಲ್ಲೂಕು ಬಳ್ಳಾರಿ ಜಿಲ್ಲೆಯಿಂದ ಸುಮಾರು ೫೬ ಕಿ.ಮೀ ದೂರದಲ್ಲಿದೆ. ಈ ತಾಲ್ಲೂಕಿನಲ್ಲಿ ರಾಜ್ಯ ಹೆದ್ದಾರಿ, ರಾಷ್ಟ್ರೀಯ ಹೆದ್ದಾರಿಯು ಹಾದುಹೋಗಿದೆ. ಕೂಡ್ಲಿಗಿ ತಾಲ್ಲೂಕು ೧೬೧೯ ಚ.ಕಿ.ಮೀಟರ್

ಭೌಗೋಳಿಕ ವಿಸ್ತೀರ್ಣ ಹೊಂದಿದೆ. ತಾಲ್ಲೂಕಿನ ಒಟ್ಟು ಜನಸಂಖ್ಯೆ ೩೦೮೯೦೧. ತಾಲ್ಲೂಕಿನಲ್ಲಿ ೧೫೭೪೦೩ ಪುರುಷರು, ೧೫೧೪೯೮ ಮಹಿಳೆಯರು ಇದ್ದಾರೆ. ಕೂಡ್ಲಿಗೆ ತಾಲ್ಲೂಕಿನ ನಗರ ಜನಸಂಖ್ಯೆಯು ೫೮೨೫೭ರಷ್ಟಿದೆ. ನಗರ ಜನಸಂಖ್ಯೆಯಲ್ಲಿ ೧೦೪೫೫ ಪುರುಷರು ಮತ್ತು ೪೭೮೦೨ ಮಹಿಳೆಯರಿದ್ದಾರೆ. ಪ್ರತಿ ಹತ್ತು ವರ್ಷಕ್ಕೆ ಕೂಡ್ಲಿಗಿ ತಾಲ್ಲೂಕು ಜನಸಂಖ್ಯೆ ಬೆಳವಣಿಗೆಯು ೧೩.೪೯ರಷ್ಟು ಇದೆ.

ಕೂಡ್ಲಿಗಿ ತಾಲ್ಲೂಕಿನಲ್ಲಿ ನಗರ ಜನಸಂಖ್ಯೆಯು ೫೯೬೯ರಷ್ಟಿದೆ. ಗ್ರಾಮೀಣ ಜನಸಂಖ್ಯೆಯು ೨೫೯೫೩೨ರಷ್ಟಿದೆ. ಕೂಡ್ಲಿಗಿ ತಾಲ್ಲೂಕಿನಲ್ಲಿ ನಗರ ಪರಿಶಿಷ್ಟ ಜಾತಿ ಜನಸಂಖ್ಯೆಯು ೯೬೯೮ರಷ್ಟು ಹೊಂದಿದ್ದು ಗ್ರಾಮೀಣ ಪ್ರದೇಶ ಪರಿಶಿಷ್ಟ ಜಾತಿಯ ಜನಸಂಖ್ಯೆ ೫೯೬೮೨ರಷ್ಟಿದೆ. ಒಟ್ಟು ತಾಲ್ಲೂಕಿನಲ್ಲಿ ಪರಿಶಿಷ್ಟ ಜಾತಿ ಜನಸಂಖ್ಯೆಯ ಪ್ರತಿಶತ ೨೨.೪೬ರಷ್ಟಿರುವುದು ಕಂಡುಬಂದಿದೆ. ಹಾಗೆಯೇ ತಾಲ್ಲೂಕಿನ ಒಟ್ಟು ಜನಸಂಖ್ಯೆಯಲ್ಲಿ ಪರಿಶಿಷ್ಟ ಪಂಗಡಗಳ ಜನಸಂಖ್ಯೆಯು ಪ್ರತಿಶತ ೨೭.೮೭ರಷ್ಟು ಇದೆ. ಈ ತಾಲ್ಲೂಕು ಶೇಕಡ ೫೦.೩೩ರಷ್ಟು ಪ್ರತಿಶತ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಜನಸಂಖ್ಯೆಯನ್ನು ಹೊಂದಿದೆ. ತಾಲ್ಲೂಕಿನ ಪ್ರತಿ ಚ.ಕಿ. ಮೀಟರ್‌ನಲ್ಲಿ ೧೯೧ ಜನ ಸಾಂದ್ರತೆ ಇದೆ. ಜಿಲ್ಲೆಯಲ್ಲಿ ಅತಿ ಕಡಿಮೆ ಜನಸಾಂದ್ರತೆ ಹೊಂದಿರುವ ತಾಲ್ಲೂಕು ಇದಾಗಿದೆ.[೨೬]

**ಶಿಕ್ಷಣ ವ್ಯವಸ್ಥೆ :** ತಾಲ್ಲೂಕಿನಲ್ಲಿ ಒಟ್ಟು ಅಕ್ಷರಸ್ಥರ ಸಂಖ್ಯೆ ೧೮೬೧೫೧ರಷ್ಟುಇದೆ. ಇದರಲ್ಲಿ ಗ್ರಾಮೀಣ ಅಕ್ಷರಸ್ಥರು ಶೇಕಡ ೬೯ರಷ್ಟಿದ್ದಾರೆ. ೧೪೮೪೫೬ ಜನ ಗ್ರಾಮೀಣ ಅಕ್ಷರಸ್ಥರು ಇದ್ದಾರೆ. ಗ್ರಾಮೀಣ ಪುರುಷರು ೮೬೯೬೧ರಷ್ಟು, ಮಹಿಳೆಯರು ೬೧೪೯೫ರಷ್ಟು ಅಕ್ಷರಸ್ಥರಾಗಿದ್ದಾರೆ. ನಗರ ಅಕ್ಷರಸ್ಥರ ಜನಸಂಖ್ಯೆ ೩೭೬೯೫೨ರಷ್ಟಿದೆ. ಅದರಲ್ಲಿ ೨೦೪೪೬ ಪುರುಷ ಮತ್ತು ೧೭೨೪೯ರಷ್ಟು ಮಹಿಳಾ ಅಕ್ಷರಸ್ಥರು ಇದ್ದಾರೆ. ಗ್ರಾಮೀಣ ಅಕ್ಷರಸ್ಥರ ಜನಸಂಖ್ಯೆಯು ನಗರ ಜನಸಂಖ್ಯೆಗಿಂತ ಕಡಿಮೆ ಇದೆ. ಗ್ರಾಮೀಣ ಜನಸಂಖ್ಯೆಯಲ್ಲಿ ಶೇಕಡ ೬೬.೮೨ರಷ್ಟು ಸಾಕ್ಷರತೆ ಪ್ರಮಾಣ ಕಂಡು ಬಂದಿದೆ. ನಗರ ಜನಸಂಖ್ಯೆಯಲ್ಲಿ ಶೇಕಡ ೮೦.೬೯ರಷ್ಟು ಪ್ರತಿಶತ ಸಾಕ್ಷರತೆ ಪ್ರಮಾಣವನ್ನು ಹೊಂದಿದೆ. ಕೂಡ್ಲಿಗಿ ತಾಲ್ಲೂಕುನಲ್ಲಿ ೧೪೬ ಕಿರಿಯ ಪ್ರಾಥಮಿಕ ಶಾಲೆಗಳು ಮತ್ತು ೧೯೧ ಹಿರಿಯ ಪ್ರಾಥಮಿಕ ಶಾಲೆಗಳು ೬೫ ಪ್ರೌಢಶಾಲೆಗಳಿವೆ. ಈ ಶಾಲೆಗಳ ದಾಖಲಾತಿಗಳು ಶೇಕಡ ೯೦ರಷ್ಟು ಇರುವುದು ಕಂಡುಬಂದಿದೆ. ತಾಲ್ಲೂಕಿನಲ್ಲಿ ೪೮೦ ಪ್ರಾಥಮಿಕ ಶಾಲೆ ಶಿಕ್ಷಕರಿದ್ದಾರೆ. ಪ್ರೌಢಶಾಲೆಗಳಲ್ಲಿ ೧೨೫೩ ಶಿಕ್ಷಕರ ಸಂಖ್ಯೆ ಇದೆ. ಪ್ರಾಥಮಿಕ ಶಿಕ್ಷಕರ ವಿದ್ಯಾರ್ಥಿಗಳ ಅನುಪಾತ ೬೪.೬೨ರಷ್ಟಿದೆ. ಪ್ರೌಢಶಾಲಾ ಹಂತದಲ್ಲಿ ೩೩.೫೭ರಷ್ಟು ವಿದ್ಯಾರ್ಥಿ ಶಿಕ್ಷಕರ ಅನುಪಾತವಿದೆ. ೬ರಿಂದ ೧೪ ವಯಸ್ಸಿನ ೯೫ ಮಕ್ಕಳು ಶಾಲೆಯಿಂದ ಹೊರಗುಳಿದಿದ್ದಾರೆ. ಈ ತಾಲ್ಲೂಕಿನಲ್ಲಿ ೨೬

ಪದವಿಪೂರ್ವ ಕಾಲೇಜುಗಳಲ್ಲಿ ೨೦೨ ಉಪನ್ಯಾಸಕರಿದ್ದಾರೆ. ೪೯೩೭ರಷ್ಟು ಪದವಿಪೂರ್ವ ವಿದ್ಯಾರ್ಥಿಗಳು ವ್ಯಾಸಂಗ ಮಾಡುತ್ತಿದ್ದಾರೆ. ಕೂಡ್ಲಿಗಿಯಲ್ಲಿ ೧ ಸಾಮಾನ್ಯ ಪದವಿ ಕಾಲೇಜು, ೧ ಖಾಸಗಿ ಪದವಿ ಕಾಲೇಜಿದ್ದು ೧ ಸರ್ಕಾರಿ ಪಾಲಿಟೆಕ್ನಿಕ್ ಮತ್ತು ೧ ಖಾಸಗಿ ಪಾಲಿಟೆಕ್ನಿಕ್ ಕಾಲೇಜಿದೆ. ವೈದ್ಯಕೀಯ ಮತ್ತು ಇಂಜಿನಿಯರಿಂಗ್ ಕಾಲೇಜುಗಳು ಈ ತಾಲ್ಲೂಕಿನಲ್ಲಿ ಕಂಡುಬರುವುದಿಲ್ಲ. ಸರ್ಕಾರಿ ಮೆಟ್ರಿಕ್‌ಪೂರ್ವ ವಿದ್ಯಾರ್ಥಿ ನಿಲಯ, ಪರಿಶಿಷ್ಟಜಾತಿ ಪರಿಶಿಷ್ಟ ಪಂಗಡಗಳ ವಿದ್ಯಾರ್ಥಿನಿಲಯಗಳು ೭ ಇವೆ. ೨ ಪರಿಶಿಷ್ಟ ಜಾತಿ ಪರಿಶಿಷ್ಟ ಪಂಗಡ ಸರ್ಕಾರಿ ಮೆಟ್ರಿಕ್ ನಂತರದ ವಿದ್ಯಾರ್ಥಿ ನಿಲಯಗಳಿವೆ. ೧ ಅನುದಾನಿತ ಮೆಟ್ರಿಕ್‌ಪೂರ್ವ ವಿದ್ಯಾರ್ಥಿನಿಲಯವಿದೆ. ಇವೆ. ೩ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಸರ್ಕಾರಿ ಮೆಟ್ರಿಕ್‌ಪೂರ್ವ, ಸರ್ಕಾರಿ ಮೆಟ್ರಿಕ್ ನಂತರ ೯ ಹಿಂದುಳಿದ ವರ್ಗದ ವಿದ್ಯಾರ್ಥಿನಿಲಯಗಳು ೫ ಸರ್ಕಾರಿ ಹಿಂದುಳಿದ ವರ್ಗಗಳ ಸರ್ಕಾರಿ ಮೆಟ್ರಿಕ್ ನಂತರ ವಿದ್ಯಾರ್ಥಿ ನಿಲಯಗಳಿವೆ. ೧ ಕಿತ್ತೂರು ರಾಣಿ ಚೆನ್ನಮ್ಮ ಬಾಲಕ ವಸತಿ ಶಾಲೆ, ೧ ಮುರಾರ್ಜಿ ದೇಸಾಯಿ ವಸತಿ ಶಾಲೆಗಳಿವೆ.[೨೭]

**ಸಾಮಾಜಿಕ ವ್ಯವಸ್ಥೆ:** ಕೂಡ್ಲಿಗಿ ತಾಲ್ಲೂಕಿನಲ್ಲಿ ಒಟ್ಟು ೫೮೨೫೭ ಕುಟುಂಬಗಳಿವೆ. ಒಟ್ಟು ತಾಲ್ಲೂಕಿನಲ್ಲಿ ೪೯೬೪೦ ಬಡತನ ರೇಖೆಗಿಂತ ಕೆಳಗಿರುವ ಕುಟುಂಬಗಳಿವೆ. ಈ ಕುಟುಂಬಗಳಲ್ಲಿ ಗ್ರಾಮೀಣ ಪ್ರದೇಶದಲ್ಲಿ ೧೧೨೨೨ ಬಿ.ಪಿ.ಎಲ್.ಗಳು ಅಂತ್ಯೋದಯ ಯೋಜನೆಯನ್ನು ಹೊಂದಿವೆ. ೪೯೭ ಅಕ್ಷರ ಸಿಲಿಂಡರ್‌ಸಹಿತ ಮತ್ತು ೩೦೪೫೦ ಅಕ್ಷರ ಸಿಲಿಂಡರ್‌ರಹಿತ ಕುಟುಂಬಗಳಿವೆ. ನಗರ ಪ್ರದೇಶದಲ್ಲಿಯೂ ೧೨೬೦ ಅಂತೋದಯ ಕುಟುಂಬಗಳು ೧೩೦೭೭ ಕುಟುಂಬಗಳು ಅಕ್ಷಯ ಸಿಲಿಂಡರ್ ಸಹಿತ ಮತ್ತು ೫೨೭೩ ಅಕ್ಷರ ಸಿಲಿಂಡರ್‌ರಹಿತ ಕುಟುಂಬಗಳು ಈ ತಾಲ್ಲೂಕಿನಲ್ಲಿವೆ ೫೭೫೪೪೮. ಬಿ.ಪಿ.ಎಲ್.ಗಳಿವೆ. ಗ್ರಾಮೀಣ ಪ್ರದೇಶಗಳಲ್ಲಿ ೧೫೬ ಸಿಲಿಂಡರ್‌ಸಹಿತ ೫೧೨೪ ಸಿಲಿಂಡರ್‌ರಹಿತ ಒಟ್ಟು ೪೭೨೩೮ ಗ್ರಾಮೀಣ ಪ್ರದೇಶದಲ್ಲಿ ಬಿ.ಪಿ.ಎಲ್. ಕುಟುಂಬಗಳಿವೆ. ಕೂಡ್ಲಿಗಿ ನಗರಭಾಗದಲ್ಲಿ ೧೭೦೭ ಸಿಲಿಂಡರ್‌ಸಹಿತ, ಸಿಲಿಂಡರ್‌ರಹಿತ ಕುಟುಂಬಗಳು ಸೇರಿದಂತೆ ಒಟ್ಟು ೧೦೩೧೦ ಬಿ.ಪಿ.ಎಲ್. ಕುಟುಂಬಗಳು ಈ ತಾಲ್ಲೂಕಿನಲ್ಲಿವೆ. ಕೃಷಿ ಕಾರ್ಮಿಕರು ತಾಲ್ಲೂಕಿನಲ್ಲಿ ಒಟ್ಟು ೬೧೮೯೨ರಷ್ಟಿದ್ದು ಅದರಲ್ಲಿ ಗ್ರಾಮೀಣ ಕೃಷಿ ಕಾರ್ಮಿಕರು ೫೮೨೧೪ರಷ್ಟಿದ್ದಾರೆ. ನಗರ ಭಾಗದಲ್ಲಿ ೩೬.೧೫ ಕುಟುಂಬ ಕೃಷಿ ಕಾರ್ಮಿಕರಿದ್ದಾರೆ. ಪುರುಷ ಕೃಷಿ ಕಾರ್ಮಿಕರು ೨೪೮೬೧ ರಷ್ಟಿದ್ದರೆ ಮಹಿಳಾ ಕೃಷಿ ಕಾರ್ಮಿಕರು ೩೯೬೮ರಷ್ಟು ಇದ್ದಾರೆ. ಮಹಿಳಾ ಕೃಷಿ ಕಾರ್ಮಿಕರು ತಾಲ್ಲೂಕಿನಲ್ಲಿ ಹೆಚ್ಚಾಗಿ ಕಂಡುಬರುತ್ತಾರೆ.[೨೮]

**ಕೂಡ್ಲಿಗಿ ತಾಲ್ಲೂಕಿನ ಪಂಚಾಯಿತಿ ವ್ಯವಸ್ಥೆ:** ಜಿಲ್ಲಾಪಂಚಾಯಿತಿಗೆ ಈ ತಾಲ್ಲೂಕಿನಿಂದ ಒಟ್ಟು ೬ ಸದಸ್ಯರು ಆಯ್ಕೆಯಾಗುತ್ತಾರೆ. ಅದರಲ್ಲಿ ೪ ಪುರುಷ ಮತ್ತು ೨ ಮಹಿಳಾ ಸದಸ್ಯರು ಒಬ್ಬರು ಪರಿಶಿಷ್ಟ ಜಾತಿಯ ಪುರುಷ ಸದಸ್ಯರು ಆಯ್ಕೆಯಾಗಿದ್ದಾರೆ. ಒಂದು ಪರಿಶಿಷ್ಟ ಪಂಗಡ ಮಹಿಳಾ ಅಭ್ಯರ್ಥಿ ಮತ್ತು ಎರಡು ಹಿಂದೂಗಳ ವರ್ಗದ ಸದಸ್ಯರು ಆಯ್ಕೆಯಾಗಿದ್ದಾರೆ. ಅದರಲ್ಲಿ ಸಾಮಾನ್ಯ ವರ್ಗದ ೧ ಮಹಿಳಾ ಸದಸ್ಯರು ಮತ್ತು ೧ ಪುರುಷ ಸದಸ್ಯರು ಆಯ್ಕೆಯಾಗಿದ್ದಾರೆ. ಕೂಡ್ಲಿಗಿ ತಾಲ್ಲೂಕು ಪಂಚಾಯಿತಿ ಸದಸ್ಯರ ಸಂಖ್ಯೆ ಒಟ್ಟು ೨೩. ಅದರಲ್ಲಿ ೧೪ ಪುರುಷ, ೯ ಮಹಿಳಾ ಸದಸ್ಯರು ಆಯ್ಕೆಯಾಗಿದ್ದಾರೆ. ಪರಿಶಿಷ್ಟ ಜಾತಿಯವರಿಗೆ ೫ ಸ್ಥಾನಗಳು ಮೀಸಲಾಗಿವೆ. ಇದರಲ್ಲಿ ೩ ಪುರುಷ ಸದಸ್ಯರು ಮತ್ತು ೨ ಮಹಿಳಾ ಸದಸ್ಯರು ಆಯ್ಕೆಯಾಗಿದ್ದಾರೆ. ಹಾಗೆಯೇ ಪರಿಶಿಷ್ಟ ಪಂಗಡದವರು ೫ ಜನರು ತಾಲ್ಲೂಕು ಪಂಚಾಯತ್ ಸದಸ್ಯರಾಗಿ ಆಯ್ಕೆಯಾಗಿದ್ದಾರೆ. ಅವರಲ್ಲಿ ೩ ಮಹಿಳಾ ಸದಸ್ಯರು ಮತ್ತು ೨ ಪುರುಷ ಸದಸ್ಯರು ಆಯ್ಕೆಯಾಗಿದ್ದಾರೆ. ಹಿಂದುಳಿದ ವರ್ಗದ ೮ ಜನ ಸದಸ್ಯರು ತಾಲ್ಲೂಕು ಪಂಚಾಯಿತಿಗೆ ಆಯ್ಕೆಯಾಗಿದ್ದಾರೆ. ಇದರಲ್ಲಿ ೫ ಜನ ಪುರುಷ ಸದಸ್ಯರು ಮತ್ತು ೩ ಮಹಿಳಾ ಸದಸ್ಯರು ಆಯ್ಕೆಯಾಗಿದ್ದಾರೆ. ಸಾಮಾನ್ಯ ವರ್ಗದ ೫ ಜನ ಸದಸ್ಯರು ತಾಲ್ಲೂಕು ಪಂಚಾಯತ್ ಸದಸ್ಯರಾಗಿ ಆಯ್ಕೆಯಾಗಿದ್ದಾರೆ. ಒಂದು ಪಟ್ಟಣ ಪಂಚಾಯಿತಿಗೆ ೨೫ ಸದಸ್ಯರ ಸ್ಥಾನಗಳಿವೆ. ಅದರಲ್ಲಿ ೫ ಪರಿಶಿಷ್ಟ ಜಾತಿ ಸದಸ್ಯರು, ೭ ಪರಿಶಿಷ್ಟ ಪಂಗಡ ಸದಸ್ಯರು ಮತ್ತು ೭ ಹಿಂದುಳಿದ ವರ್ಗದ ಸದಸ್ಯರು ಮತ್ತು ೪ ಸಾಮಾನ್ಯ ವರ್ಗದ ಅಭ್ಯರ್ಥಿಗಳು ಪಟ್ಟಣ ಪಂಚಾಯಿತಿಯ ಸದಸ್ಯರಾಗಿ ಆಯ್ಕೆಯಾಗಿದ್ದಾರೆ.

ಕೂಡ್ಲಿಗಿ ತಾಲ್ಲೂಕಿನಲ್ಲಿ ೩೩ ಗ್ರಾಮಪಂಚಾಯಿತಿಗಳಿವೆ. ೯೧ ಗ್ರಾಮಗಳಿವೆ. ಜನವಸತಿ ಇರುವ ಗ್ರಾಮಗಳು ೮೯. ಹಾಗೆಯೇ ಜನವಸತಿ ಇಲ್ಲದ ಗ್ರಾಮಗಳು ೨. ನಾಡ ಕಛೇರಿಗಳು ೩, ಗ್ರಾಮ ಲೆಕ್ಕಿಗರ ವೃತ್ತಗಳು ೪೬ ಇವೆ. ೪ ಹೋಬಳಿಗಳಿವೆ. ೫೮೭ ಗ್ರಾಮಪಂಚಾಯಿತಿ ಸದಸ್ಯರಿದ್ದಾರೆ. ಅವರಲ್ಲಿ ೧೧೭ ಸದಸ್ಯರು ಪರಿಶಿಷ್ಟ ಜಾತಿಗೆ ಸೇರಿದವರು. ೧೭೦ ಸದಸ್ಯರು ಪರಿಶಿಷ್ಟ ಪಂಗಡಕ್ಕೆ ಸೇರಿದವರು. ೧೮೫ ಸದಸ್ಯರು ಹಿಂದುಳಿದ ವರ್ಗದವರು. ೧೧೨ ಸಾಮಾನ್ಯವರ್ಗಕ್ಕೆ ಸೇರಿದ ಸದಸ್ಯರು ಗ್ರಾಮಪಂಚಾಯಿತಿಗಳಿಗೆ ಚುನಾಯಿತ ಸದಸ್ಯರಾಗಿ ಆಯ್ಕೆಯಾಗಿದ್ದಾರೆ.

**ಆರೋಗ್ಯ ವ್ಯವಸ್ಥೆ:** ೧ ತಾಲ್ಲೂಕು ಕೇಂದ್ರದ ಆಸ್ಪತ್ರೆ ಇದೆ. ಇದು ೧೦೦ ಹಾಸಿಗೆಗಳನ್ನು ಹೊಂದಿದೆ. ತಾಲ್ಲೂಕಿನಲ್ಲಿ ೧೧ ಸರ್ಕಾರಿ ಆಸ್ಪತ್ರೆಗಳಿವೆ. ೧ ಖಾಸಗಿ ನರ್ಸಿಂಗ್ ಹೋಂ ಮತ್ತು ೫ ಖಾಸಗಿ ಚಿಕಿತ್ಸಾಲಯಗಳು ಸೇರಿ ಒಟ್ಟು ೧೭ ಆಸ್ಪತ್ರೆಗಳು ಇವೆ. ೧೮ ಜನ ಸರ್ಕಾರಿ ವೈದ್ಯರು ಮತ್ತು ೪೫ ಖಾಸಗಿ ವೈದ್ಯರು ಸೇವೆ ಸಲ್ಲಿಸುತ್ತಿದ್ದಾರೆ. ಸರ್ಕಾರಿ ಆಸ್ಪತ್ರೆಗಳಲ್ಲಿ ೨೩೨ ಹಾಸಿಗೆಗಳು ಲಭ್ಯತೆಯಲ್ಲಿವೆ. ಖಾಸಗಿ ಆಸ್ಪತ್ರೆಯಲ್ಲಿ ಹತ್ತು ಹಾಸಿಗೆಗಳು ರೋಗಿಗಳಿಗೆ ಲಭ್ಯತೆಯಲ್ಲಿವೆ. ತಾಲ್ಲೂಕಿನಲ್ಲಿ ೭ ಪ್ರಾಥಮಿಕ

ಆರೋಗ್ಯ ಕೇಂದ್ರಗಳಿವೆ. ೫೬ ಹಾಸಿಗೆಗಳು ರೋಗಿಗಳಿಗೆ ಲಭ್ಯವಿವೆ. ೩ ಸಮೂಹವಾರು ಆರೋಗ್ಯ ಕೇಂದ್ರಗಳಿವೆ. ಅವುಗಳಲ್ಲಿ ೯೦ ಹಾಸಿಗೆಗಳು ಲಭ್ಯವಿವೆ. ತಾಲ್ಲೂಕಿನಲ್ಲಿ ೬೫ ಔಷಧಿ ಅಂಗಡಿಗಳು ಸೇವೆ ಸಲ್ಲಿಸುತ್ತಿವೆ. ಜನನ ಪ್ರಮಾಣ ೧೫ರಷ್ಟಿದೆ. ಮರಣ ಪ್ರಮಾಣ ೬ರಷ್ಟಿದೆ. ಶಿಶು ಮರಣ ೧೧ ಮಾತೃ ಸಂಬಂಧವಾದ ಮರಣ ಇವೆ.[೨೯]

**ಗುಡೆಕೋಟೆ ಗ್ರಾಮಪಂಚಾಯಿತಿ**

ಗುಡೆಕೋಟೆ ಗ್ರಾಮಪಂಚಾಯಿತಿಯು ಬಳ್ಳಾರಿ ಜಿಲ್ಲೆಯಿಂದ ೫೪ ಕಿ.ಮೀ. ದೂರದಲ್ಲಿದೆ. ಈ ಗ್ರಾಮವು ಚಿತ್ರದುರ್ಗ ಜಿಲ್ಲೆಯ ಸಮೀಪದಲ್ಲಿದೆ. ಗುಡೆಕೋಟೆ ಗ್ರಾಮಪಂಚಾಯಿತಿ ವ್ಯಾಪ್ತಿಯ ಉಪಗ್ರಾಮಗಳು ಬರುತ್ತವೆ. ಈ ಗ್ರಾಮ ಪಂಚಾಯಿತಿಯಲ್ಲಿ ಒಂದು ಪೊಲೀಸ್ ಠಾಣೆ, ಒಂದು ಪ್ರೌಢಶಾಲೆ, ಒಂದು ಪದವಿಪೂರ್ವ ಕಾಲೇಜು ಹಾಗೂ ಒಂದು ಅಂಚೆ ಕಛೇರಿಗಳು ಇವೆ. ಈ ಗ್ರಾಮದ ಮಧ್ಯದಲ್ಲಿ ರಸ್ತೆ ಹಾದು ಹೋಗುತ್ತದೆ. ರಸ್ತೆಯ ಎಡಭಾಗಕ್ಕೆ ಮತ್ತು ಬಲಭಾಗಕ್ಕೆ ಗ್ರಾಮವು ವಿಸ್ತರಿಸಿದೆ. ಈ ಗ್ರಾಮವು ಸುತ್ತಲೂ ಗುಡ್ಡಗಾಡುಗಳಿಂದ ಮತ್ತು ಬೆಟ್ಟಗಳಿಂದ ಕೂಡಿದೆ. ಕರಡಿಧಾಮವು ಈ ಗ್ರಾಮದ ವ್ಯಾಪ್ತಿಯಲ್ಲಿದೆ. ಈ ಗ್ರಾಮವು ಪ್ರದಾನವಾಗಿ ಕೃಷಿಯಾಧಾರಿತ ಗ್ರಾಮವಾಗಿದೆ. ಕೃಷಿಯನ್ನು ಆಧರಿಸಿದ ಗ್ರಾಮದಲ್ಲಿ ಒಂದು ಕೆರೆಯಿದೆ. ಕೃಷಿಯ ಬೇಸಾಯಕ್ಕೆ ಮಳೆಯನ್ನು ಆಧರಿಸಿದೆ. ಕೃಷಿಕೂಲಿಯನ್ನು ಗ್ರಾಮದ ಜನರು ಹೆಚ್ಚಾಗಿ ಆಧರಿಸಿದ್ದಾರೆ. ಇತರೆ ಕೂಲಿ ಕಾರ್ಮಿಕರು ಜಿಲ್ಲಾ ಕೇಂದ್ರಕ್ಕೆ ಕೂಲಿ ಕೆಲಸಕ್ಕೆ ಹೋಗುತ್ತಾರೆ. ಗ್ರಾಮದ ಬೆಟ್ಟಗಳಲ್ಲಿ ಸಿತಾಫಲ ಗಿಡ ಸಂಪತ್ತು ಇದೆ. ಈ ಹಣ್ಣುಗಳನ್ನು ರಾಜ್ಯದ ಇತರೆ ಭಾಗಗಳಿಗೆ ಸಾಗಿಸಲಾಗುತ್ತದೆ.

ಗುಡೆಕೋಟೆ ಗ್ರಾಮ ಪಂಚಾಯಿತಿಯ ವ್ಯಾಪ್ತಿಯಲ್ಲಿ ೧೧೭೮ ಕುಟುಂಬಗಳು ವಾಸವಾಗಿವೆ. ಈ ಕುಟುಂಬಗಳಲ್ಲಿ ೬೪೩೬ ಜನರು ವಾಸವಾಗಿದ್ದಾರೆ. ಅದರಲ್ಲಿ ೩.೩೭೩ ಪುರುಷರು ಮತ್ತು ೩೦೬೩ ಮಹಿಳೆಯರು ಇದ್ದಾರೆ. ಗ್ರಾಮದಲ್ಲಿ ೮೦೭ ಮಕ್ಕಳ ಜನಸಂಖ್ಯೆ ಹೊಂದಿದ್ದು. ಈ ಗ್ರಾಮದಲ್ಲಿ ೧೨೭೭ ಪರಿಶಿಷ್ಟ ಜಾತಿ ಮತ್ತು ೨೧೮೫ ಪರಿಶಿಷ್ಟ ಪಂಗಡದವರ ಜನಸಂಖ್ಯೆ ಇದೆ. ಈ ಗ್ರಾಮವು ಒಟ್ಟು ಶೇಕಡ ೬೯.೭೫ ಸಾಕ್ಷರತೆ ಹೊಂದಿದೆ. ಪುರುಷರ ಸಾಕ್ಷರತೆ ಶೇಕಡ ೮೦.೧೬ರಷ್ಟು, ಮಹಿಳೆಯರ ಸಾಕ್ಷರತೆ ಶೇಕಡ ೫೮.೨೪ರಷ್ಟಿರುವುದು ಕಂಡುಬಂದಿದೆ. ಗ್ರಾಮದಲ್ಲಿ ಶೇ.೪೦ಕ್ಕೂ ಅಧಿಕ ಕೂಲಿ ಕಾರ್ಮಿಕರಿದ್ದಾರೆ. ಇವರು ಕೃಷಿಯನ್ನು ಆಧರಿಸಿ ಜೀವನ ನಡೆಸುವುದು ಹೆಚ್ಚಾಗಿ ಕಂಡುಬರುತ್ತದೆ.[೩೦]

**ಕೋಷ್ಟಕ ೨.೫.**

**ಗುಡೆಕೋಟೆ ಗ್ರಾಮಪಂಚಾಯಿತಿಯ ಸಾಮಾಜಿಕ ವಿವರಗಳು**

| ವಿವರಗಳು | ಪುರುಷರು | ಮಹಿಳೆಯರು | ಒಟ್ಟು |
|---|---|---|---|
| ಜನಸಂಖ್ಯೆ | ೩೩೭೩ | ೩.೦೬೩ | ೬೪೩೬ |
| ಪರಿಶಿಷ್ಟ ಜಾತಿ | ೬೮೪ | ೫೯೩ | ೧೨೭೭ |
| ಪರಿಶಿಷ್ಟ ಪಂಗಡ | ೧೦೯೦ | ೧೦೯೫ | ೨೧೮೫ |
| ಸಾಕ್ಷರತೆ | ೮೦.೧೬% | ೫೮.೨೪% | ೨೮.೭೭% |
| ಒಟ್ಟು ಕೆಲಸಗಾರರು | | | |

ಮೂಲ: ೨೦೧೧ರ ಜನಗಣತಿ ವರದಿಯ ಅಂತರ್ಜಾಲದಿಂದ ಪಡೆದ ಮಾಹಿತಿ

### ಅಪ್ಪಯ್ಯನಹಳ್ಳಿ ಗ್ರಾಮಪಂಚಾಯಿತಿ

ಅಪ್ಪಯ್ಯನಹಳ್ಳಿ ಗ್ರಾಮಪಂಚಾಯಿತಿಯು ಕೂಡ್ಲಿಗಿ ತಾಲ್ಲೂಕಿನ ಚಿಕ್ಕ ಗ್ರಾಮಪಂಚಾಯಿತಿಗಳಲ್ಲಿ ಒಂದಾಗಿದೆ. ಈ ಗ್ರಾಮವು ಬಳ್ಳಾರಿ–ಚಿತ್ರದುರ್ಗ ರಸ್ತೆಯಿಂದ ಮತ್ತು ರಾಂಪುರ ಗ್ರಾಮದಿಂದ ಗುಡೆಕೋಟೆ ಗ್ರಾಮಕ್ಕೆ ಹೋಗುವ ರಸ್ತೆಯ ಭಾಗದಲ್ಲಿ ಸಿಗುತ್ತದೆ. ಈ ಗ್ರಾಮಪಂಚಾಯಿತಿಯಲ್ಲಿ ಒಂದು ಹಿರಿಯ ಪ್ರಾಥಮಿಕ ಶಾಲೆಯಿದೆ. ಗ್ರಾಮಪಂಚಾಯಿತಿ ಕಛೇರಿ ಮತ್ತು ಪಶುವೈದ್ಯಕೀಯ ಆಸ್ಪತ್ರೆ ಇದೆ. ಇನ್ನುಳಿದ ಯಾವ ಇಲಾಖೆಯ ಕಛೇರಿಗಳು ಈ ಗ್ರಾಮದಲ್ಲಿಲ್ಲ. ಗ್ರಾಮದ ಬಹುಪಾಲು ಜನರ ಜೀವನೋಪಾಯ ಬೇಸಾಯವಾಗಿದೆ. ಹೆಚ್ಚು ಬಯಲು ಪ್ರದೇಶದ ಒಣ ಬೇಸಾಯ ಪದ್ಧತಿ ಇಲ್ಲಿದೆ. ಮಳೆ ಬಂದರೆ ಮಾತ್ರ ಬೇಸಾಯದ ಕೆಲಸ ಇಲ್ಲವಾದರೆ ಕೂಲಿಕೆಲಸಕ್ಕೆ ಪಕ್ಕದ ನಗರ ಪ್ರದೇಶಗಳಿಗೆ ಹೋಗುವುದು ಗ್ರಾಮಸ್ಥರ ಸ್ಥಿತಿಯಾಗಿದೆ. ಮಹಾತ್ಮ ಗಾಂಧೀ ರಾಷ್ಟ್ರೀಯ ಉದ್ಯೋಗ ಯೋಜನೆಯು ಈ ಗ್ರಾಮದ ಸ್ವಲ್ಪ ಜನರಿಗೆ ಕೂಲಿಕೆಲಸ ನೀಡಿದೆ. ಹಾಗಾಗಿ ಮಹಿಳೆಯರು ಮತ್ತು ಕೂಲಿಕಾರ್ಮಿಕರು ಈ ಯೋಜನೆಯ ಉಪಯೋಗವನ್ನು ಪಡೆಯುತ್ತಿದ್ದಾರೆ. ಕೆಲವರು ಬೋರ್‌ವೆಲ್ ಮೂಲಕ ಕೃಷಿ ಮಾಡುವುದನ್ನು ಗಮನಿಸಬಹುದು. ಕುರಿ, ಕೋಳಿ, ಸಾಕಾಣಿಕೆ ಉಪ ಕಸುಬುಗಳನ್ನು ಜೀವನೋಪಾಯಕ್ಕೆ ಬಳಸಿಕೊಳ್ಳುತ್ತಾರೆ. ಮುಖ್ಯರಸ್ತೆಯಿಂದ ೨ ಕಿ.ಮೀ. ಒಳಗೆ ಹೋದರೆ ಬಲಭಾಗದಲ್ಲಿ ಗ್ರಾಮಪಂಚಾಯಿತಿ ಕಾರ್ಯಾಲಯವು ಸಿಗುತ್ತದೆ.[೩೧]

**ಕೋಷ್ಟಕ ೨.೬**

**ಅಪ್ಪಯ್ಯನಹಳ್ಳಿ ಗ್ರಾಮಪಂಚಾಯಿತಿಯ ಸಾಮಾಜಿಕ ವಿವರಗಳು**

| ವಿವರಗಳು | ಪುರುಷರು | ಮಹಿಳೆಯರು | ಒಟ್ಟು |
|---|---|---|---|
| ಜನಸಂಖ್ಯೆ | ೧೪೯೬ | ೧೫೫೯ | ೩೦೧೫ |
| ಪರಿಶಿಷ್ಟ ಜಾತಿ | ೬೪೫ | ೬೪೭ | ೧೨೯೨ |
| ಪರಿಶಿಷ್ಟ ಪಂಗಡ | ೫೮೮ | ೬೧೨ | ೧೨೦೦ |
| ಸಾಕ್ಷರತೆ | ೭೬.೦೯% | ೪೭.೫೬% | ೬೧.೬೬% |
| ಒಟ್ಟು ಕೆಲಸಗಾರರು | ೮೩೫ | ೭೮೨ | ೧೬೧೭ |

ಮೂಲ: ೨೦೧೧ರ ಜನಗಣತಿ ವರದಿಯ ಅಂತರ್ಜಾಲದಿಂದ ಪಡೆದ ಮಾಹಿತಿ

## ೨.೫. ಸಂಡೂರು ತಾಲ್ಲೂಕಿನ ಸಾಮಾಜಿಕ ವಿವರಣೆಗಳು

### ಭೌಗೋಳಿಕ ವಿಸ್ತೀರ್ಣ

ಸಂಡೂರು ತಾಲ್ಲೂಕು ಜಿಲ್ಲೆಯ ಹಿಂದುಳಿದ ತಾಲ್ಲೂಕುಗಳಲ್ಲಿ ಒಂದು. ಈ ತಾಲ್ಲೂಕಿನಲ್ಲಿ ರಾಜಮನೆತನದವರು ವಾಸವಾಗಿದ್ದಾರೆ. ಈ ತಾಲ್ಲೂಕು ೧೧೫೨ ಚದರ ಕಿ.ಮೀಟರ್ ಭೌಗೋಳಿಕ ವಿಸ್ತೀರ್ಣವನ್ನು ಹೊಂದಿದೆ. ಸಂಡೂರು ತಾಲ್ಲೂಕಿನ ಒಟ್ಟು ಭೂಹಿಡುವಳಿದಾರರ ಭೂಮಿ ೭೩೧೦೭.೦೩ ಹೆಕ್ಟೇರ್ ಒಟ್ಟಾರೆ ತಾಲ್ಲೂಕಿನ ಸಾಗುವಳಿ ಭೂಮಿ ೩೭೩೧೯.೫೧ರಷ್ಟಿದೆ. ಸಂಡೂರು ತಾಲ್ಲೂಕು ಒಟ್ಟು ೨೬೦೨೧೩ರಷ್ಟು ಜನಸಂಖ್ಯೆಯನ್ನು ಹೊಂದಿದೆ.

**ಸಾಮಾಜಿಕ ವ್ಯವಸ್ಥೆ:** ಸಂಡೂರು ತಾಲ್ಲೂಕು ಒಟ್ಟು ೨೬೦೨೧೩ ಜನಸಂಖ್ಯೆಯನ್ನು ಹೊಂದಿದ್ದು, ಈ ತಾಲ್ಲೂಕಿನಲ್ಲಿ ೧೩೪೦೩೪ ಪುರುಷರು ಮತ್ತು ೧೨೬೧೭೯ ಮಹಿಳೆಯರಿದ್ದಾರೆ. ಇಲ್ಲಿ ೫೧೦೫೪ ಕುಟುಂಬಗಳಿದ್ದು, ಇದರಲ್ಲಿ ೧೬೭೭೬ ನಗರ ಕುಟುಂಬಗಳಿವೆ ಮತ್ತು ೩೪೨೫೮ ಗ್ರಾಮೀಣ ಕುಟುಂಬಗಳಿವೆ. ತಾಲ್ಲೂಕಿನಲ್ಲಿ ಗ್ರಾಮೀಣ ಜನಸಂಖ್ಯೆ ೧೮೮೧೯೭ರಷ್ಟಿದೆ. ನಗರ ಜನಸಂಖ್ಯೆಯು ೭೯೧೧೬ರಷ್ಟಿದೆ. ಪರಿಶಿಷ್ಟ ಜಾತಿಯ ನಗರ ಜನಸಂಖ್ಯೆ ೧೦೫೫೮ರಷ್ಟು ಹೊಂದಿದ್ದು, ಗ್ರಾಮೀಣ ಪರಿಶಿಷ್ಟಜಾತಿ ಜನಸಂಖ್ಯೆ ೩೫೮೧೩ರಷ್ಟು ಹೊಂದಿದ್ದಾರೆ. ನಗರ ಪರಿಶಿಷ್ಟಪಂಗಡ ೧೨೦೬೩ ರಷ್ಟಿದೆ. ಗ್ರಾಮೀಣ ಪರಿಶಿಷ್ಟ ಪಂಗಡ ಜನಸಂಖ್ಯೆಯು ೫೬೧೨೬ರಷ್ಟಿದೆ. ಈ ತಾಲ್ಲೂಕಿನಲ್ಲಿ ಪರಿಶಿಷ್ಟ ಜಾತಿಯವರ ಜನಸಂಖ್ಯೆ ಒಟ್ಟು ಜನಸಂಖ್ಯೆಯಲ್ಲಿ ಶೇಕಡ ೧೭.೮೪ ಪ್ರತಿಶತ ಜನಸಂಖ್ಯೆ

ಇದೆ. ಶೇಕಡ ೨೬.೨೧ರಷ್ಟು ಪ್ರತಿಶತ ಪರಿಶಿಷ್ಟ ಪಂಗಡ ಜನಸಂಖ್ಯೆ ಈ ತಾಲ್ಲೂಕಿನಲ್ಲಿ ವಾಸವಾಗಿದ್ದಾರೆ. ಪ್ರತಿ ಚ.ಕಿ.ಮೀ.ಗೆ ಜನಸಾಂದ್ರತೆ ೨೨೬ರಷ್ಟು ಜನರು ಇದೆ. ಲಿಂಗಾನುಪಾತ ೯೪೧ರಷ್ಟು ಕಂಡು ಬಂದಿದೆ. ಒಟ್ಟು ವ್ಯವಸಾಯೇತರ ಕೆಲಸಗಾರರ ಸಂಖ್ಯೆ ೫೭೬೮೦, ತಾಲ್ಲೂಕಿನ ಒಟ್ಟು ಕೆಲಸಗಾರರ ಸಂಖ್ಯೆ ೧೦೮೬೪೦. ಒಟ್ಟು ಕೃಷಿ ಕಾರ್ಮಿಕರು ೨೪೧೨೪ ಮತ್ತು ೯೧೯೦೭ ಮುಖ್ಯ ಕೆಲಸಗಾರರು ತಾಲ್ಲೂಕಿನಲ್ಲಿದ್ದಾರೆ. ಶೇಕಡ ೨೬.೨೫ ಪ್ರತಿಶತ ಜನರು ಕಾರ್ಮಿಕರಾಗಿದ್ದಾರೆ. ೬೩೩೫ ಬಿ.ಪಿ.ಎಲ್. ಅಂತ್ಯೋದಯ ಕುಟುಂಬಗಳಿವೆ. ಸಿಲಿಂಡರ್‌ರಹಿತ ಕುಟುಂಬಗಳು ತಾಲ್ಲೂಕಿನಲ್ಲಿವೆ.[೩೨]

**ಶಿಕ್ಷಣ ವ್ಯವಸ್ಥೆ:** ಸಂಡೂರು ತಾಲ್ಲೂಕಿನಲ್ಲಿ ೧೪೬೫೦೮ ಜನರು ಅಕ್ಷರಸ್ಥರಿದ್ದಾರೆ. ಗ್ರಾಮೀಣ ಜನಸಂಖ್ಯೆ ೯೩೮೦೭ ಅಕ್ಷರಸ್ಥರಿದ್ದಾರೆ. ೫೨೭೦೧ರಷ್ಟು ನಗರ ಅಕ್ಷರಸ್ಥರಿದ್ದಾರೆ. ಒಟ್ಟು ಅಕ್ಷರಸ್ಥರಲ್ಲಿ ೮೬೭೭೨ ಮತ್ತು ಪುರುಷರು ೫೯೭೩೬ರಷ್ಟು ಮಹಿಳೆಯರು ಅಕ್ಷರಸ್ಥರಿದ್ದಾರೆ. ತಾಲ್ಲೂಕಿನಲ್ಲಿ ನಗರ ಸಾಕ್ಷರತೆ ೭೭.೮೪ರಷ್ಟಿದೆ. ಗ್ರಾಮೀಣ ಸಾಕ್ಷರತೆ ೬೧.೮೮ ರಷ್ಟಿದೆ. ಗ್ರಾಮೀಣ ಭಾಗದಲ್ಲಿ ಕಡಿಮೆ ಸಾಕ್ಷರತೆ ನಮೂದಾಗಿದೆ. ಸಂಡೂರು ತಾಲ್ಲೂಕಿನಲ್ಲಿ ೭೨ ಕಿರಿಯ ಪ್ರಾಥಮಿಕ ಶಾಲೆಗಳು, ೧೩೨ ಹಿರಿಯ ಪ್ರಾಥಮಿಕ ಶಾಲೆಗಳು, ೪೭ ಪ್ರೌಢಶಾಲೆಗಳು ಇವೆ. ಹಿರಿಯ ಪ್ರಾಥಮಿಕ ಶಾಲೆಗಳ ದಾಖಲಾತಿಗಳು ಶೇಕದ ೯೪ ಪ್ರತಿಶತ ಕಂಡುಬಂದರೆ, ಪ್ರೌಢಶಾಲೆಗಳಲ್ಲಿ ಶೇಕಡ ೮೮ರಷ್ಟು ಶಾಲೆಯ ದಾಖಲಾತಿ ನಮೂದಾಗಿದೆ. ಪ್ರಾಥಮಿಕ ಶಾಲಾ ಶಿಕ್ಷಕರ ಸಂಖ್ಯೆ ೨೨೮ ಇದ್ದರೆ, ಈ ತಾಲ್ಲೂಕಿನ ಪ್ರಾಥಮಿಕ ಶಾಲಾ ಶಿಕ್ಷಕರ ವಿದ್ಯಾರ್ಥಿಗಳ ಅನುಪಾತ, ೧೨೪:೧೬. ಪ್ರೌಢಶಾಲೆಗಳಲ್ಲಿ ೯೦೭ ಶಿಕ್ಷಕರು ಕಾರ್ಯ ನಿರ್ವಹಿಸುತ್ತಿದ್ದು ವಿದ್ಯಾರ್ಥಿ ಶಿಕ್ಷಕರ ಅನುಪಾತ ೪೧:೩೬ ಇದೆ. ೨೩ ಮಕ್ಕಳು ಶಾಲೆಯಿಂದ ಹೊರಗೆ ಉಳಿದಿದ್ದಾರೆ. ಸಂಡೂರು ತಾಲ್ಲೂಕಿನಲ್ಲಿ ೧೦ ಪದವಿಪೂರ್ವ ಕಾಲೇಜುಗಳು, ಒಂದು ೧ ಪದವಿ ಕಾಲೇಜು ಇದೆ. ಒಂದು ಖಾಸಗಿ ಪದವಿ ಕಾಲೇಜು ಇದೆ. ಒಂದು ಖಾಸಗಿ ಪಾಲಿಟೆಕ್ನಿಕ್ ಮತ್ತು ಒಂದು ಸರ್ಕಾರಿ ಪಾಲಿಟೆಕ್ನಿಕ್ ಕಾಲೇಜುಗಳಿವೆ. ವೈದ್ಯಕೀಯ ಮತ್ತು ಇಂಜಿನಿಯರ್ ಕಾಲೇಜುಗಳು ಈ ತಾಲ್ಲೂಕಿನಲ್ಲಿ ಕಂಡುಬರುವುದಿಲ್ಲ.[೩೩]

**ಆರೋಗ್ಯ ವ್ಯವಸ್ಥೆ :** ತಾಲ್ಲೂಕಿನಲ್ಲಿ ಒಂದು ತಾಲ್ಲೂಕು ಕೇಂದ್ರ ಆಸ್ಪತ್ರೆ ಇದೆ. ಅದು ೧೦೦ ಹಾಸಿಗೆ ಆಸ್ಪತ್ರೆಯಾಗಿದೆ. ತಾಲ್ಲೂಕಿನಲ್ಲಿ ೬ ಸರ್ಕಾರಿ ಆಸ್ಪತ್ರೆಗಳು, ೩ ನರ್ಸಿಂಗ್ ಹೋಂಗಳು, ೮ ಚಿಕಿತ್ಸಾಲಯ ಗಳು ಒಟ್ಟು ೧೭ ಆಸ್ಪತ್ರೆಗಳಿವೆ. ಸರ್ಕಾರಿ ವೈದ್ಯರು ೮ ಜನ, ಒಟ್ಟು ೨೦ ವೈದ್ಯರಿದ್ದಾರೆ. ೧೬೦೮ ಹಾಸಿಗೆಗಳು ಈ ತಾಲ್ಲೂಕಿನಲ್ಲಿ ಲಭ್ಯವಿವೆ. ೪ ಪ್ರಾಥಮಿಕ ಆರೋಗ್ಯ ಕೇಂದ್ರಗಳು, ಸಮೂಹವಾರು ಆರೋಗ್ಯ ಕೇಂದ್ರ ಸೇರಿ ಒಟ್ಟು ೫೪ ಹಾಸಿಗೆಗಳು ಲಭ್ಯವಿವೆ. ೮ ಕುಟುಂಬ ಕಲ್ಯಾಣ ಕೇಂದ್ರಗಳು, ೪೦ ಕುಟುಂಬ ಕಲ್ಯಾಣ ಉಪಕೇಂದ್ರಗಳಿವೆ. ೫೮ ಔಷಧಿ ಅಂಗಡಿಗಳು ಸಾರ್ವಜನಿಕ ಸೇವೆಯಲ್ಲಿವೆ.

## ಚೋರನೂರು ಗ್ರಾಮಪಂಚಾಯಿತಿ

ಚೋರನೂರು ಗ್ರಾಮವು ಸಂಡೂರು ತಾಲ್ಲೂಕು ಕೇಂದ್ರದಿಂದ ೨೪ ಕಿ.ಮೀ. ದೂರದಲ್ಲಿದೆ. ಈ ಗ್ರಾಮಪಂಚಾಯಿತಿಯು ಐದು ಗ್ರಾಮಗಳನ್ನೊಳಗೊಂಡಿದೆ. ಈ ಗ್ರಾಮಕ್ಕೆ ಪ್ರವೇಶಿಸುತ್ತಿದಂತೆ ದೊಡ್ಡದಾದ ಕೆರೆ ಸಿಗುತ್ತದೆ. ಕೆರೆಯ ಕಟ್ಟೆಯ ಮೇಲಿನ ರಸ್ತೆಯಿಂದ ಚೋರನೂರು ಗ್ರಾಮಕ್ಕೆ ಪ್ರವೇಶಿಸಲಾಗುತ್ತದೆ. ಗ್ರಾಮಪಂಚಾಯಿತಿಯ ವ್ಯಾಪ್ತಿಯಲ್ಲಿ ಒಂದು ಉಪ ಪೋಲಿಸ್ ಠಾಣೆ ಇದೆ. ಒಂದು ಪ್ರೌಢಶಾಲೆ ಮತ್ತು ಕಿರಿಯ ಹಿರಿಯ ಪ್ರಾಥಮಿಕ ಶಾಲೆ ಇದೆ. ಹಾಗೆಯೇ ಒಂದು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡದ ಮೆಟ್ರಿಕ್‌ಪೂರ್ವ ಹಾಸ್ಟೆಲ್ ಇದೆ. ಪಶು ವೈದ್ಯಕೀಯ ಆಸ್ಪತ್ರೆ ಮತ್ತು ನಾಡ ಕಛೇರಿಯು ಈ ಗ್ರಾಮಪಂಚಾಯಿತಿಯಲ್ಲಿದೆ. ಗ್ರಾಮಪಂಚಾಯಿತಿಯ ವ್ಯಾಪ್ತಿಯಲ್ಲಿ ಒಟ್ಟು ೧೩೪೯ ಕುಟುಂಬಗಳಿವೆ. ಇದು ಒಟ್ಟು ೭೪೨೧ ಜನಸಂಖ್ಯೆ ಹೊಂದಿದೆ. ೩೬೯೨ ಪುರುಷ ಮತ್ತು ೩೭೨೯ ಮಹಿಳೆಯರ ಜನಸಂಖ್ಯೆ ಇದೆ. ಇಲ್ಲಿ ೧೧೭೭ ಮಕ್ಕಳ ಜನಸಂಖ್ಯೆ ಹೊಂದಿದೆ. ಒಟ್ಟು ಜನಸಂಖ್ಯೆ ೯೪೬. ೩೦೭೭ ಪರಿಶಿಷ್ಟಜಾತಿ ಮತ್ತು ಪರಿಶಿಷ್ಟ ಪಂಗಡಗಳ ಜನಸಂಖ್ಯೆ ಕಂಡುಬರುತ್ತದೆ. ಗ್ರಾಮದ ಸಾಕ್ಷರತೆ ೫೭.೯೪ರಷ್ಟಿದೆ. ಪುರುಷರ ಸಾಕ್ಷರತೆ ೬೪.೯೮%ರಷ್ಟಿದೆ. ಮಹಿಳೆಯರ ಸಾಕ್ಷರತೆ ಕೇವಲ ೫೦.೯೩%ರಷ್ಟಿದೆ.

ಚೋರನೂರು ಗ್ರಾಮಪಂಚಾಯಿತಿಯ ವ್ಯಾಪ್ತಿಯಲ್ಲಿ ಪರಿಶಿಷ್ಟ ಪಂಗಡಗಳ ಜನಸಂಖ್ಯೆ ಹೆಚ್ಚಾಗಿ ಕಂಡುಬರುತ್ತದೆ. ಈ ಭಾಗದಲ್ಲಿ ನಾಯಕರು ಅಥವಾ ವಾಲ್ಮೀಕಿ ಜಾತಿಯವರು, ಗೊಲ್ಲರು, ಕುರುಬರು, ಲಿಂಗಾಯತರು ಜಾತಿಯ ಜನರನ್ನು ಹೆಚ್ಚಾಗಿ ಗುರುತಿಸಲಾಗಿದೆ. ಈ ಗ್ರಾಮಗಳಲ್ಲಿ ಹಿಂದುಳಿದ ಸಾಮಾಜಿಕ ಸ್ಥಿತಿಯು ಕಂಡುಬರುತ್ತದೆ. ವೈದ್ಯಕೀಯ ಸೇವೆಗೆ ಪಕ್ಕದ ಕೂಡ್ಲಿಗಿ ಮತ್ತು ಸಂಡೂರು ತಾಲ್ಲೂಕುಗಳಿಗೆ ಬರಬೇಕು. ಸಾರಿಗೆ ವ್ಯವಸ್ಥೆಯು ಸಾಧಾರಣವಾಗಿದೆ. ವ್ಯವಸಾಯ ಆಧರಿತ ಕೃಷಿ ಕುಟುಂಬಗಳು ಮತ್ತು ಕೃಷಿ ಕೂಲಿಗಳು ಹೆಚ್ಚು ಕಂಡುಬರುತ್ತಾರೆ. ಕೂಲಿಯನ್ನು ಆಧರಿಸಿದ ಆದಾಯವನ್ನು ಹೊಂದಿದ್ದಾರೆ. ಬಳ್ಳಾರಿ ಮತ್ತು ಹೊಸಪೇಟೆ ತಾಲ್ಲೂಕುಗಳ ತಲಾ ಆದಾಯವು ಸಂಡೂರು ತಾಲ್ಲೂಕಿನಲ್ಲಿಲ್ಲ. ತಲಾ ಆದಾಯ ಹೆಚ್ಚಿಸುವಂತಹ ಸಂಪನ್ಮೂಲಗಳ ಲಭ್ಯತೆ ಇಲ್ಲದಿರುವುದರಿಂದ ಕಡಿಮೆ ಆದಾಯವನ್ನು ಹೊಂದಿದ ಕೂಲಿ ಕಾರ್ಮಿಕ ಕುಟುಂಬಗಳೇ ಹೆಚ್ಚಾಗಿವೆ.[೩೪]

**ಕೋಷ್ಟಕ ೨.೭**

**ಚೋರನೂರು ಗ್ರಾಮಪಂಚಾಯಿತಿಯ ಸಾಮಾಜಿಕ ವಿವರಗಳು**

| ವಿವರಗಳು | ಪುರುಷರು | ಮಹಿಳೆಯರು | ಒಟ್ಟು |
|---|---|---|---|
| ಜನಸಂಖ್ಯೆ | ೩೬೯೨ | ೩೭೨೯ | ೭೪೨೧ |
| ಪರಿಶಿಷ್ಟ ಜಾತಿ | ೪೮೩ | ೪೬೩ | ೯೪೬ |
| ಪರಿಶಿಷ್ಟ ಪಂಗಡ | ೧೪೮೯ | ೧೫೮೮ | ೩೦.೭೭ |
| ಸಾಕ್ಷರತೆ | ೬೪.೯೮% | ೫೦.೯೩% | ೫೭.೯೪% |
| ಒಟ್ಟು ಕೆಲಸಗಾರರು | ೧೯೫೦ | ೯೫೭ | ೨೯೦೭ |

**ಮೂಲ:** ೨೦೧೧ರ ಜನಗಣತಿ ವರದಿಯ ಅಂತರ್ಜಾಲದಿಂದ ಪಡೆದ ಮಾಹಿತಿ

### ಸೊವೇನಹಳ್ಳಿ ಗ್ರಾಮಪಂಚಾಯಿತಿ

ಸೊವೇನಹಳ್ಳಿ ಗ್ರಾಮಪಂಚಾಯಿತಿಯು ಸಂಡೂರು ತಾಲ್ಲೂಕು ಪ್ರದೇಶದಿಂದ ೩೦ ಕಿ.ಮೀ. ದೂರದಲ್ಲಿದೆ. ಜಿಲ್ಲಾ ಕೇಂದ್ರದಿಂದ ೫೮ ಕಿ.ಮೀ. ದೂರದಲ್ಲಿದೆ. ಕೂಡ್ಲಿಗಿ ತಾಲ್ಲೂಕಿನಿಂದ ೧೬ ಕಿ.ಮೀ. ದೂರದಲ್ಲಿದೆ. ಈ ಗ್ರಾಮಪಂಚಾಯಿತಿ ಸಂಡೂರು ತಾಲ್ಲೂಕಿನಲ್ಲಿ ಅತೀ ಚಿಕ್ಕ ಗ್ರಾಮಪಂಚಾಯಿತಿಯಾಗಿದೆ. ಈ ಪಂಚಾಯಿತಿಗೆ ಕೂಡ್ಲಿಗಿ ತಾಲ್ಲೂಕಿನಿಂದ ಪ್ರವೇಶಿಸಬಹುದಾಗಿದೆ. ಬಳ್ಳಾರಿ ರಸ್ತೆಯಿಂದ ಮತ್ತೊಂದು ಮಾರ್ಗ ಚೋರನೂರು ಕ್ರಾಸ್ ರಸ್ತೆಯಿಂದ ಸೊವೇನಹಳ್ಳಿ ಗ್ರಾಮಪಂಚಾಯಿತಿಗೆ ಹೋಗಬಹುದು. ಈ ಗ್ರಾಮಪಂಚಾಯಿತಿಯಲ್ಲಿ ಕುಡಿಯುವ ನೀರಿನ ಘಟಕವನ್ನು ನಿರ್ಮಿಸಲಾಗಿದೆ. ಗ್ರಾಮದ ಪೂರ್ವ ಭಾಗದಲ್ಲಿ ಕೆರೆ ಇದೆ. ಉತ್ತರ ಭಾಗದಲ್ಲಿ ಗ್ರಾಮಪಂಚಾಯಿತಿ ಕಛೇರಿ ಇದೆ. ಪ್ರಸ್ತುತ ಚೋರನೂರು ಗ್ರಾಮಪಂಚಾಯಿತಿ ಪಿ.ಡಿ.ಓ. ಈ ಗ್ರಾಮಪಂಚಾಯಿತಿಯಲ್ಲಿಯೂ ಕಾರ್ಯ ನಿರ್ವಹಿಸುತ್ತಿದ್ದಾರೆ.

ಸೊವೇನಹಳ್ಳಿ ಗ್ರಾಮಪಂಚಾಯಿತಿಯಲ್ಲಿ ಒಟ್ಟು ೬೭೫ ಕುಟುಂಬಗಳ ವಾಸವಾಗಿದೆ. ಈ ಗ್ರಾಮಪಂಚಾಯಿತಿ ಒಟ್ಟು ೩೫೭೭ ಜನಸಂಖ್ಯೆ ಹೊಂದಿದ್ದಾರೆ. ೧೮೪೯ ಪುರುಷರು, ೧೭೨೮ ಮಹಿಳೆಯರ ಜನಸಂಖ್ಯೆ ಹೊಂದಿದೆ. ಇವರಲ್ಲಿ ೫೧೭ ಮಕ್ಕಳು ಇದ್ದಾರೆ. ಪರಿಶಿಷ್ಟಜಾತಿಯವರ ಜನಸಂಖ್ಯೆಯು ೮೪೫ ಮತ್ತು ಪರಿಶಿಷ್ಟ ಪಂಗಡ ಜನಸಂಖ್ಯೆ ೫೭೯ ಇದೆ. ಈ ಗ್ರಾಮದಲ್ಲಿ ಒಟ್ಟು ಶೇ.೫೪.೬೧ ಸಾಕ್ಷರತೆ ಹೊಂದಿದ್ದು, ಪುರುಷ ಸಾಕ್ಷರತೆ ಶೇ.೬೪.೦೦. ಮಹಿಳೆಯರ ಸಾಕ್ಷರತೆ

೪೪.೩೫ ಹೊಂದಿದೆ. ಈ ಗ್ರಾಮದಲ್ಲಿ ೧೮೦೨ ಜನರು ಕೂಲಿ ಕಾರ್ಮಿಕರಿದ್ದಾರೆ. ಈ ಗ್ರಾಮವು ರಸ್ತೆಯ ಎಡಭಾಗ ಮತ್ತು ಬಲಭಾಗದಲ್ಲಿ ವಿಸ್ತರಿಸಿದೆ. ಈ ಗ್ರಾಮದಲ್ಲಿ ಕೃಷಿ ಆಧರಿತ ಜನರು ಹೆಚ್ಚಾಗಿದ್ದಾರೆ. ಪಕ್ಕದ ಕೂಡ್ಲಿಗಿಗೆ ಗಾರೆ ಕೆಲಸ ಮತ್ತು ಕೂಲಿ ಕೆಲಸಕ್ಕೆ ಜನರು ಹೋಗುತ್ತಾರೆ. ಈ ಗ್ರಾಮದಲ್ಲಿ ಕೃಷಿ ಕಾರ್ಮಿಕರು ಹೆಚ್ಚಾಗಿದ್ದಾರೆ. ಸ್ವಂತ ಕೃಷಿ ಮತ್ತು ಕೃಷಿ ಆಧರಿತ ಕೆಲಸಗಳಲ್ಲಿ ತೊಡಗಿಸಿಕೊಂಡಿದ್ದಾರೆ.[೩೫]

**ಕೋಷ್ಟಕ ೨.೮**

**ಸೊವೇನಹಳ್ಳಿ ಗ್ರಾಮಪಂಚಾಯಿತಿಯ ಸಾಮಾಜಿಕ ವಿವರಗಳು**

| ವಿವರಗಳು | ಪುರುಷರು | ಮಹಿಳೆಯರು | ಒಟ್ಟು |
|---|---|---|---|
| ಜನಸಂಖ್ಯೆ | ೧೮೪೯ | ೧೭೨೮ | ೩೫೭೭ |
| ಪರಿಶಿಷ್ಟ ಜಾತಿ | ೪೨೮ | ೪೧೭ | ೮೪೫ |
| ಪರಿಶಿಷ್ಟ ಪಂಗಡ | ೩೨೪ | ೨೫೫ | ೫೭೯ |
| ಸಾಕ್ಷರತೆ | ೬೪.೦೯% | ೪೪.೩೫% | ೫೪.೬೧% |
| ಒಟ್ಟು ಕೆಲಸಗಾರರು | ೧೦೧೦ | ೭೯೨ | ೧೮೦೨ |

ಮೂಲ: ೨೦೧೧ರ ಜನಗಣತಿ ವರದಿಯ ಅಂತರ್ಜಾಲದಿಂದ ಪಡೆದ ಮಾಹಿತಿ

## ಕೊನೆ ಟಿಪ್ಪಣಿಗಳು

೧. ಕರ್ನಾಟಕ ಕೈಪಿಡಿ, ಕರ್ನಾಟಕ ಗ್ಯಾಜೆಟಿಯರ್ ಇಲಾಖೆ, ಕಚೇರಿ ಭವನ, ೮ನೇ ಮಹಡಿ ಕರ್ನಾಟಕ ಸರ್ಕಾರ, ೧೯೯೬, ಪು.೧೬೩–೧೬೬

೨. ಬಳ್ಳಾರಿ ಜಿಲ್ಲೆಯ ಸ್ವಾತಂತ್ರ್ಯ ಹೋರಾಟ (ಸಂ) ಬಿ. ಶೇಷಾದ್ರಿ ಮತ್ತು ಟಿ.ಆರ್. ಚಂದ್ರಶೇಖರ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೫, ಪು.೨೪–೨೬

೩. ಬಳ್ಳಾರಿ ಜಿಲ್ಲಾ ದರ್ಶನ(ಸಂ), ಡಾ.ಕೆ.ರವೀಂದ್ರನಾಥ ಬಸವರಾಜ ಸಬರದ, ಪ್ರಸಾರಾಂಗ ಗುಲ್ಬರ್ಗಾ ವಿಶ್ವವಿದ್ಯಾಲಯ, ೨೦೦೫, ಪು.೫೩,೫೪,೫೬

೪. ಕರ್ನಾಟಕ ಕೈಪಿಡಿ, ಕರ್ನಾಟಕ ಗ್ಯಾಜೆಟಿಯರ್ ಇಲಾಖೆ, ಕಚೇರಿ ಭವನ, ೮ನೇ ಮಹಡಿ ಕರ್ನಾಟಕ ಸರ್ಕಾರ, ೧೯೯೬, ಪು.೧೮೯–೧೯೧

೫. ಅದೇ, ಪು.೯೧-೯೪

೬. ಎನ್.ಚಿನ್ನಸ್ವಾಮಿ ಸೋಸಲೆ, ವಸಾಹತು ಕಾಲಘಟ್ಟದ ಮೈಸೂರು ಸಂಸ್ಥಾನ, ಪ್ರಸಾರಾಂಗ ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೧೦, ಪು.೫, ೪೦, ೪೧

೭. ಅದೇ, ಪು.೮೦-೮೧

೮. ಬಳ್ಳಾರಿ ಜಿಲ್ಲೆ ಅಂಕಿ-ಅಂಶಗಳ ನೋಟ ೨೦೧೨-೧೩, ಪ್ರಕಟಣೆ ಜಿಲ್ಲಾ ಸಾಂಖ್ಯಿಕ ಅಧಿಕಾರಗಳ ಕಛೇರಿ, ಬಳ್ಳಾರಿ, ೨೦೧೩, ಪು.೮-೧೦

೯. ಮಾನವ ಅಭಿವೃದ್ಧಿ ವರದಿ, ೨೦೦೫ ಕರ್ನಾಟಕ ಸರ್ಕಾರ, ವಿನ್ಯಾಸ ಮತ್ತು ಮುದ್ರಣ ನ್ಯೂಕಾನ್ಸಪ್ಟ್ ಇನ್‌ಫರ್ಮೇಶನ್ ಸಿಸ್ಟಮ್ ಲಿಮಿಟೆಡ್ ನವದೆಹಲಿ, ೨೦೦೬, ಪು.೧೪-೧೭

೧೦. ಬಳ್ಳಾರಿ ಜಿಲ್ಲೆ ಅಂಕಿ-ಅಂಶಗಳ ನೋಟ ೨೦೧೨-೧೩, ಪ್ರಕಟಣೆ ಜಿಲ್ಲಾ ಸಾಂಖ್ಯಿಕ ಅಧಿಕಾರಗಳ ಕಛೇರಿ, ಬಳ್ಳಾರಿ, ೨೦೧೩, ಪು.೧೬-೧೮

೧೧. ಬಳ್ಳಾರಿ ಜಿಲ್ಲೆಯ ೨೦೧೧-೧೨ನೇ ಸಾಲಿನ ಜಿಲ್ಲೆಯ ಸಾಮಾಜಿಕ, ಆರ್ಥಿಕ, ಅವಲೋಕನ ವರದಿ, ಪ್ರಕಟಣೆ ಜಿಲ್ಲಾಧಿಕಾರಿಗಳ ಕಛೇರಿ ಅವರಣ ಬಳ್ಳಾರಿ, ೨೦೧೨, ಪು.೩೯-೪೦

೧೨. ಅದೇ, ಪು.೪೧-೪೨

೧೩. ಅದೇ, ಪು.೫೬-೫೮

೧೪. ಅದೇ, ಪು.೪೮-೪೯

೧೫. ಅದೇ, ಪು.೩೯-೪೦

೧೬. ಅದೇ, ಪು.೩೯

೧೭. ಡಬ್ಲ್ಯು.ಡಬ್ಲ್ಯು.ಡಬ್ಲ್ಯು.ಪಂಚತಂತ್ರ.ಸಂಗನಕಲ್ಲು.ಕೆಎಆರ್.ಇನ್

೧೮. ಡಬ್ಲ್ಯು.ಡಬ್ಲ್ಯು.ಡಬ್ಲ್ಯು.ಪಂಚತಂತ್ರ.ಮೋಕಾ.ಕೆಎಆರ್.ಇನ್

೧೯. ಸಿ.ಮಹದೇವ, ಎ. ಸುಬ್ಬಣ್ಣ ರೈ ಮಾಧವ ಪೆರಾಜೆ, ಹೊಸಪೇಟೆ ತಾಲ್ಲೂಕು ದರ್ಶನ ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨, ಪು.೫, ೫೩-೫೪

೨೦. ಅದೇ, ಪು.೫೫-೫೬

೨೧. ಬಳ್ಳಾರಿ ಜಿಲ್ಲೆಯ ೨೦೧೧-೧೨ನೇ ಸಾಲಿನ ಜಿಲ್ಲೆಯ ಸಾಮಾಜಿಕ, ಆರ್ಥಿಕ, ಅವಲೋಕನ ವರದಿ, ಪ್ರಕಟಣೆ ಜಿಲ್ಲಾಧಿಕಾರಿಗಳ ಕಛೇರಿ ಅವರಣ ಬಳ್ಳಾರಿ, ೨೦೧೨, ಪು.೬೦

೨೨. ಅದೇ, ಪು.೫೦

೨೩. ಅದೇ, ಪು.೫೪

೨೪. ಡಬ್ಲ್ಯೂ.ಡಬ್ಲ್ಯೂ.ಡಬ್ಲ್ಯೂ.ಪಂಚತಂತ್ರ.ಪಾಪಿನಾಯಕನಹಳ್ಳಿ.ಕೆಎಆರ್.ಇನ್

೨೫. ಡಬ್ಲ್ಯೂ.ಡಬ್ಲ್ಯೂ.ಡಬ್ಲ್ಯೂ.ಪಂಚತಂತ್ರ.ಮಲಪನಗುಡಿ.ಕೆಎಆರ್.ಇನ್

೨೬. ಬಳ್ಳಾರಿ ಜಿಲ್ಲೆ ಅಂಕಿ–ಅಂಶಗಳ ನೋಟ ೨೦೧೨–೧೩, ಪ್ರಕಟಣೆ ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳ ಕಛೇರಿ, ಬಳ್ಳಾರಿ, ೨೦೧೩, ಪು.೨೨–೩೪

೨೭. ಅದೇ, ಪು.೪೪

೨೮. ಅದೇ, ಪು.೫೭

೨೯. ಅದೇ, ಪು.೧೩೯–೧೪೭

೩೦. ಡಬ್ಲ್ಯೂ.ಡಬ್ಲ್ಯೂ.ಡಬ್ಲ್ಯೂ.ಪಂಚತಂತ್ರ.ಚೋರನೂರು.ಕೆಎಆರ್.ಇನ್

೩೧. ಡಬ್ಲ್ಯೂ.ಡಬ್ಲ್ಯೂ.ಡಬ್ಲ್ಯೂ.ಪಂಚತಂತ್ರ.ಸೋವೇನಹಳ್ಳಿ.ಕೆಎಆರ್.ಇನ್

೩೨. ಬಳ್ಳಾರಿ ಜಿಲ್ಲೆಯ ೨೦೧೧–೧೨ನೇ ಸಾಲಿನ ಜಿಲ್ಲೆಯ ಸಾಮಾಜಿಕ, ಆರ್ಥಿಕ, ಅವಲೋಕನ ವರದಿ, ಪ್ರಕಟಣೆ ಜಿಲ್ಲಾಧಿಕಾರಿಗಳ ಕಛೇರಿ ಅವರಣ ಬಳ್ಳಾರಿ, ೨೦೧೨, ಪು.೫೯–೬೪

೩೩. ಅದೇ, ಪು.೬೪–೬೮

೩೦. ಡಬ್ಲ್ಯೂ.ಡಬ್ಲ್ಯೂ.ಡಬ್ಲ್ಯೂ.ಪಂಚತಂತ್ರ.ಗುಡೇಕೋಟೆ.ಕೆಎಆರ್.ಇನ್

೩೧. ಡಬ್ಲ್ಯೂ.ಡಬ್ಲ್ಯೂ.ಡಬ್ಲ್ಯೂ.ಪಂಚತಂತ್ರ.ಅಪ್ಪಯ್ಯನಹಳ್ಳಿ.ಕೆಎಆರ್.ಇನ್

# ಅಧ್ಯಾಯ ಮೂರು

## ಪಂಚಾಯತ್‌ರಾಜ್ ಸಂಸ್ಥೆಗಳ ಕಾರ್ಯಾನುಷ್ಠಾನಗಳು

೩.೧. ಪಂಚಾಯತ್‌ರಾಜ್ ಸಂಸ್ಥೆಗಳು ಬೆಳೆದು ಬಂದ ಹಾದಿ

೩.೨. ಪಂಚಾಯಿತಿ ಸಾಮಾಜಿಕ ಜಮಾಬಂದಿಯ ಇತಿಹಾಸ ಮತ್ತು ಅನುಷ್ಠಾನದ ವಿಶ್ಲೇಷಣೆ

೩.೩. ಮಾಹಿತಿ ಹಕ್ಕು ಕಾಯ್ದೆ ವಿಶ್ಲೇಷಣೆ(೨೦೧೫)

# ಅಧ್ಯಾಯ ಮೂರು

# ಪಂಚಾಯತ್‌ರಾಜ್ ಸಂಸ್ಥೆಗಳ ಕಾರ್ಯನುಷ್ಠಾನಗಳು

## ಪೀಠಿಕೆ

ಗ್ರಾಮಪಂಚಾಯತ್ ಸಂಸ್ಥೆಗಳ ವಿಕೇಂದ್ರೀಕರಣದಿಂದ ರಾಷ್ಟ್ರದ ಅಭಿವೃದ್ಧಿಯನ್ನು ಸಾಧಿಸುವ ಗುರಿಯನ್ನು ಭಾರತ ಸರ್ಕಾರವು ಹೊಂದಿದೆ. ಅದಕ್ಕೆ ಹಲವಾರು ಆಡಳಿತಾತ್ಮಕ ಸುಧಾರಣೆಗಳನ್ನು ಜಾರಿಗೆ ತರಲಾಯಿತು. ಹಲವು ಕಾಯ್ದೆಗಳನ್ನು ಜಾರಿಗೆ ತರಲಾಗಿದೆ . ಅದರ ಫಲವಾಗಿ ಗ್ರಾಮಪಂಚಾಯಿತಿ ಮಟ್ಟದಲ್ಲಿ ನಡೆಯುವ ಗ್ರಾಮಸಭೆಯಲ್ಲಿ ಗ್ರಾಮಸ್ಥರ ಭಾಗವಹಿಸುವಿಕೆಯ ಮುಖಾಂತರ ಗ್ರಾಮಪಂಚಾಯಿತಿಯಿಂದ ಸಿಗುವ ಹಲವು ಯೋಜನೆಗಳಿಂದ ಗ್ರಾಮೀಣ ಸಮುದಾಯಗಳು ಅಭಿವೃದ್ಧಿ ಹೊಂದುವ ರೀತಿಯಲ್ಲಿ ಗ್ರಾಮಪಂಚಾಯಿತಿಗಳಿಗೆ ಅಧಿಕಾರವನ್ನು ನೀಡಲಾಯಿತು. ಅದರೆ ಗ್ರಾಮಸ್ಥರಿಗೆ ಗ್ರಾಮಪಂಚಾಯಿತಿಯ ಯೋಜನೆಗಳ ಬಗ್ಗೆ ಅರಿವಿಲ್ಲದೆ ಇರುವುದರಿಂದ ಯೋಜನೆಗಳ ಫಲಾನುಭವಿಗಳಾಗಲು ಅವಕಾಶಗಳು ಇಲ್ಲದಾಗಿರುವುದು ಹಲವು ಅಧ್ಯಯನಗಳಿಂದ ತಿಳಿದುಬಂದಿದೆ.

ಗ್ರಾಮಪಂಚಾಯಿತಿಯ ಆಡಳಿತ ಹೆಚ್ಚು ಪಾರದರ್ಶಕವಾಗಿ ನಡೆಯುವಂತೆ ಮಾಡಿ ಗ್ರಾಮಸ್ಥರಿಗೆ ಗ್ರಾಮಪಂಚಾಯಿತಿಯ ಗ್ರಾಮಸಭೆಗಳು ಕೇವಲ ಫಲಾನುಭವಿಗಳನ್ನು ಆಯ್ಕೆ ಮಾಡಲು ಸೀಮಿತವಾಗದ ಹಾಗೆ ೨೦೦೪ರ ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಅನುಷ್ಠಾನ ಅಧಿನಿಯಮ ಜಾರಿಗೆ ತರಲಾಯಿತು. ಆ ಮೂಲಕ ಗ್ರಾಮಪಂಚಾಯಿತಿಯ ಆಡಳಿತ ಹೆಚ್ಚು ಪಾರದರ್ಶಕವಾಗಿರುವಂತೆ ಮಾಡುವುದು ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಪ್ರಮುಖ ಕಾರ್ಯವಾಗಿರುತ್ತದೆ.

ಈ ಅಧ್ಯಾಯದಲ್ಲಿ ಪಂಚಾಯತ್‌ರಾಜ್ ಸಂಸ್ಥೆಗಳ ಬೆಳವಣಿಗೆ ಮತ್ತು ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಐತಿಹಾಸಿಕ ಹಿನ್ನೆಲೆಯನ್ನು ಮತ್ತು ವ್ಯಾಖ್ಯಾನಗಳನ್ನು

ಕುರಿತು ಚರ್ಚಿಸಿಲಾಗಿದೆ. ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಅನುಷ್ಠಾನದ ವಿಧಾನಗಳ ಕುರಿತು ವಿವರಿಸಲಾಗಿದೆ. ಗ್ರಾಮಪಂಚಾಯಿತಿಯ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಅಧಿಕಾರಿಗಳ ಜವಾಬ್ದಾರಿಗಳ ಕುರಿತು ಮತ್ತು ಸಾಮಾಜಿಕ ಜಮಾಬಂದಿಯ ತಂಡದವರ ಪ್ರಾಥಮಿಕ ಕಾರ್ಯಗಳ ಕುರಿತು ವಿವರಗಳನ್ನು ಈ ಅಧ್ಯಾಯದಲ್ಲಿ ನೀಡಲಾಗಿದೆ. ಸಾಮಾಜಿಕ ಜಮಾಬಂದಿಯ ಗ್ರಾಮಸಭೆಯಲ್ಲಿ ಸಾರ್ವಜನಿಕರಿಗೆ ಯಾವ ರೀತಿಯ ಅನುಕೂಲಗಳಾಗುತ್ತಿವೆ ಎಂದು ವಿವರಿಸಲಾಗಿದೆ.

## ೩.೧. ಪಂಚಾಯತ್‌ರಾಜ್ ಸಂಸ್ಥೆಗಳು ಬೆಳೆದು ಬಂದ ಹಾದಿ

**ಪ್ರಾಚೀನ ಕಾಲ:** ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ರಾಜ್ಯವನ್ನು ಭಾಗಗಳಾಗಿ ಮಾಡಿ ೧೦೦ರಿಂದ ೫೦೦ ಜನಸಂಖ್ಯೆಯನ್ನು ಹೊಂದಿರುವ ಒಂದು ಪ್ರದೇಶಕ್ಕೆ ಗ್ರಾಮ ಎಂದು ಗುರುತಿಸಿಕೊಂಡು ಆಡಳಿತ ಸಾಗಿಸುತ್ತಿದ್ದ ಪುರಾವೆಗಳು ಕಂಡುಬಂದಿವೆ. ಚಂದ್ರಗುಪ್ತರ ಕಾಲದಲ್ಲಿ ಗ್ರಾಮಗಳು ಅತ್ಯಂತ ಚಿಕ್ಕ ಕೊನೆಯ ಆಡಳಿತ ಘಟಕಗಳಾಗಿದ್ದು ಈ ಗ್ರಾಮಗಳಲ್ಲಿ ಅಧಿಕಾರ ವಿಕೇಂದ್ರೀಕರಣ ಪದ್ಧತಿಯನ್ನು ಹೊಂದಿರುವುದು ಕಂಡುಬರುತ್ತದೆ. ಗ್ರಾಮೀಣ ಎಂಬ ಮುಖ್ಯಸ್ಥನು ಗ್ರಾಮಾಡಳಿತವನ್ನು ಆ ಸಮಿತಿಗಳ ಸಹಾಯದೊಂದಿಗೆ ನಿರ್ವಹಿಸುತ್ತಿದ್ದನು. ಇವರ ಕಾಲದಲ್ಲಿ 'ಗ್ರಾಮಸಭಾ' ಅಂದರೆ 'ಜನಪದ' ಮತ್ತು ಪಂಚಮಂಡಲಿಗಳೆಂದು ನಡೆಸಲಾಗುತ್ತಿತ್ತು. ದಕ್ಷಿಣ ಭಾರತದಲ್ಲಿ ಶಾತವಾಹನರ ಆಡಳಿತದಲ್ಲಿ ಗ್ರಾಮಗಳು ಉತ್ತಮ ಅಧಿಕಾರವನ್ನು ಹೊಂದಿರುವಂಥ ಸಂಸ್ಥೆಗಳಾಗಿದ್ದು ರಾಜ್ಯದಲ್ಲಿ ಸಂಸ್ಥೆಗಳು ಸ್ವತಂತ್ರ ಅಧಿಕಾರ ಹೊಂದಿದ್ದು, ಅತ್ಯವಶ್ಯಕತೆ ಸಮಯಗಳಲ್ಲಿ ರಾಜರು ಗ್ರಾಮಪಂಚಾಯಿತಿ ಸಂಸ್ಥೆಗಳ ಅಧಿಕಾರದಲ್ಲಿ ತೊಡಗಿಸಿಕೊಂಡು ಆಡಳಿತವನ್ನು ಸುಗಮಗೊಳಿಸುತ್ತಿದ್ದರು.

**ಮಧ್ಯಯುಗ:** ಈ ಮಧ್ಯಯುಗ ಕಾಲದಲ್ಲಿ ಸುಲ್ತಾನರು ದೆಹಲಿಗೆ ಬಂದು ಭಾರತದ ಆಡಳಿತ ಕೇಂದ್ರಗಳನ್ನು ತಮ್ಮ ವಶಕ್ಕೆ ಪಡೆದರು. ಇವರ ಅವಧಿಯಲ್ಲಿ ಆಡಳಿತಾತ್ಮಕ ಹಣಕಾಸು ಮತ್ತು ನ್ಯಾಯಯುತ ಅಧಿಕಾರಗಳನ್ನು ಬೇರ್ಪಡಿಸಿದರು. ಆಡಳಿತ ನಿರ್ವಹಣೆ ಪಠವರಿ ತೆರಿಗೆ ಸಂಗ್ರಹಣೆ, ಚೌದರಿಗಳಿಗೆ ನ್ಯಾಯಿಕ ತೀರ್ಮಾನಕ್ಕೆ ಅಧಿಕಾರ ವಹಿಸಿಕೊಟ್ಟರು. ಈ ಮೂರು ಜನರು ಗ್ರಾಮಗಳ ಆಡಳಿತ, ಹಣಕಾಸು ಮತ್ತು ನ್ಯಾಯಿಕ ಅಧಿಕಾರ ಹೊಂದಿದ್ದರು. ಈ ಗ್ರಾಮಪಂಚಾಯಿತಿಗಳಲ್ಲಿ ಜನತಾ ಅಧಿಕಾರ ನಡೆಯದೇ ರಾಜ ನೇಮಿಸಿದ ಅಧಿಕಾರಿಗಳ ಅಧೀನದಲ್ಲಿ ಗ್ರಾಮಗಳು ನಲುಗಿದವು.[೧]

**ಬ್ರಿಟಿಷರ ಕಾಲ:** ಬ್ರಿಟಿಷರ ಕಾಲಾವಧಿಯಲ್ಲಿ ಇವರು ವ್ಯಾಪಾರ ಮತ್ತು ತಮ್ಮ ಸಾಮ್ರಾಜ್ಯದ ವಿಸ್ತರಣೆ ಅಧಿಕಾರಗಳಲ್ಲಿ ತೊಡಗಿಕೊಂಡಿದ್ದು ಅದೇ ಅವರ ಮುಖ್ಯ ಗುರಿಯಾಗಿತ್ತು. ಎಸ್.ಆರ್.ಮಹೇಶ್ವರ ಅವರ ಪ್ರಕಾರ ೧೬೮೭ರಲ್ಲಿ ಅಂದರೆ ಮದ್ರಾಸ್ ಸಿಟಿ ಕಾರ್ಪೋರೇಷನ್ ಸ್ಥಾಪನೆ ಸಮಯದಲ್ಲಿ ೧೬೮೭ರಲ್ಲಿ ಸ್ಥಳೀಯ ಸರ್ಕಾರಗಳ ರಚನೆಯಾಯಿತು. ೧೮೬೩ರಲ್ಲಿ

Metcalf the Governor General of India ಭಾರತದ ಗ್ರಾಮಸಮುದಾಯಗಳು ಚಿಕ್ಕ ಗಣರಾಜ್ಯಗಳೆಂದು ಕರೆದಿದ್ದಾರೆ.[೨]

**ರಾಯಲ್ ಕಮಿಷನ್(೧೯೦೯):** ಸ್ಥಳೀಯ ಗ್ರಾಮಪಂಚಾಯಿತಿಗಳಿಗೆ ವಿಕೇಂದ್ರೀಕರಣ ಆಡಳಿತ ಅಧಿಕಾರವನ್ನು ನೀಡುವಂತೆ ಶಿಫಾರಸ್ಸು ಮಾಡಿತ್ತು. ಸ್ಥಳೀಯ ಜಾತಿಯ ಮತ್ತು ಧಾರ್ಮಿಕ ಸಮಸ್ಯೆಗಳನ್ನು ಬಗೆಹರಿಸುವ ಅಧಿಕಾರ, ಸ್ಥಳೀಯ ಸಮಸ್ಯೆ ಕುರಿತಾದ ಆಡಳಿತಾತ್ಮಕ ಅಧಿಕಾರವನ್ನು ಗ್ರಾಮಪಂಚಾಯಿತಿಗಳಿಗೆ ನೀಡುವಂತೆ ಶಿಫಾರಸ್ಸು ಮಾಡಿತ್ತು. ಗ್ರಾಮಪಂಚಾಯಿತಿಗಳ, ಸ್ಥಳೀಯ ಸಂಸ್ಥೆಗಳ ಚುನಾವಣೆಯನ್ನು ಉನ್ನತೀಕರಿಸಲಾಯಿತು. ರಾಜಕೀಯ ಅಧಿಕಾರಿಗಳ ಸ್ಥಳೀಯ ಸಂಸ್ಥೆಗಳ ಆಡಳಿತ ನೀಡಿತ್ತು. ಸ್ವಾತಂತ್ರ್ಯನಂತರ ಪಂಚಾಯಿತಿಗಳಿಗೆ ಭಾರತ ಸಂವಿಧಾನದಲ್ಲಿ ಸ್ಥಾನ ಕಲ್ಪಿಸಿ ವಿಧಿ ೪೦ರಲ್ಲಿ ಗ್ರಾಮಪಂಚಾಯಿತಿ ಕುರಿತು ಆಶಯವನ್ನು ಹೊಂದಿದೆ. ಗ್ರಾಮಪಂಚಾಯಿತಿಗಳು ಸಾಮಾಜಿಕ ವ್ಯವಹಾರಕ್ಕೆ ಮತ್ತು ಅಭಿವೃದ್ಧಿ ಯೋಜನೆಗಳ ಕಾರ್ಯಾನುಷ್ಠಾನದಲ್ಲಿ ಪಂಚಾಯಿತಿ ಸಂಸ್ಥೆಗಳ ಪಾತ್ರ ಮಹತ್ವದ್ದಾಗಿರುತ್ತದೆ.

೧೮೮೪ರಲ್ಲಿ ಬ್ರಿಟಿಷರು ಸ್ಥಳೀಯ ಸಂಸ್ಥೆ ಅಥವಾ ಸರ್ಕಾರಕ್ಕೆ ಆಡಳಿತಾತ್ಮಕ ರೂಪ ಕೊಡುವ ಪ್ರಯತ್ನ ಮಾಡಿದರು. ಜಿಲ್ಲಾ ಹಂತದಲ್ಲಿ ಆಡಳಿತ ಘಟಕವಾಗಿ "ಲೋಕಲ್ ಫಂಡ್ ಸಮಿತಿ"ಯನ್ನು ರಚಿಸಲಾಯಿತು. ಈ ಸಮಿತಿಗೆ ಜಿಲ್ಲಾ ಕಮಿಷನರ್ ಅಧ್ಯಕ್ಷರಾಗಿದ್ದರು. ಅಧಿಕಾರಿಗಳು ಇನಾಂದಾರರೂ ಆಗಿದ್ದರು.

ಕರ್ನಾಟಕದಲ್ಲಿ "ದಿ ಮೈಸೂರು ಲೋಕಲ್ ಬೋರ್ಡ್ ರೆಗ್ಯುಲೇಷನ್" ಕಾಯ್ದೆಯನ್ನು ೧೯೦೩ರಲ್ಲಿ ಜಾರಿಗೆ ತಂದು ಮೂರು ಹಂತಗಳ ಸ್ಥಳೀಯ ಆಡಳಿತ ವ್ಯವಸ್ಥೆ ಅಂದರೆ ಜಿಲ್ಲಾ ಮಂಡಳಿ, ತಾಲ್ಲೂಕು ಬೋರ್ಡ್, ಮೂರನೇ ಹಂತದಲ್ಲಿ ಪಂಚಾಯಿತಿ ಸಂಘಟನೆಯನ್ನು ಜಾರಿಗೆ ತರಲಾಯಿತು. ನಂತರದಲ್ಲಿ ೧೯೧೯ರಲ್ಲಿ ಮೈಸೂರು ಸರ್ಕಾರವು "ದಿ ಮೈಸೂರು ಲೋಕಲ್ ಬೋರ್ಡ್ ಮತ್ತು ವಿಲೇಜ್ ಪಂಚಾಯತ್ ಕಾಯ್ದೆಯನ್ನು ಜಾರಿಗೆ ತಂದಿತು. ಈ ಕಾಯ್ದೆಯು ಪಂಚಾಯತ್ ಸಂಸ್ಥೆಗಳ ಅಧಿಕಾರ ವಿಕೇಂದ್ರೀಕರಣಕ್ಕೆ ಹೆಚ್ಚು ಒತ್ತು ನೀಡಿತು.[೩]

ಮೈಸೂರು ಜಿಲ್ಲಾ ಮಂಡಳಿಗಳು ೧೯೨೬–೧೯೨೭ರಂದು ಕಾಯ್ದೆಗಳನ್ನು ಜಾರಿಗೆ ತಂದಿತ್ತು. ಆ ಕಾಯ್ದೆಯ ಪ್ರಕಾರ ಗ್ರಾಮಪಂಚಾಯತ್ ಕನಿಷ್ಠ ಏಳರಿಂದ ಗರಿಷ್ಠ ಹನ್ನೆರಡು ಜನ ಸದಸ್ಯರನ್ನು ಹೊಂದಿರಬೇಕು. ಚುನಾವಣೆಯಿಂದ ಸದಸ್ಯರು ಆಯ್ಕೆಯಾಗುತ್ತಿದ್ದರು. ೧೯೩೦ರ ಹೊತ್ತಿಗೆ ಸುಮಾರು ದೇಶದಲ್ಲಿ ೭೦೦೦ ಗ್ರಾಮಪಂಚಾಯಿತಿಗಳು ಜಾರಿಯಲ್ಲಿದ್ದವು. ೧೯೪೭ರಲ್ಲಿ ಗ್ರಾಮಗಳ ಸುಧಾರಣೆಗಾಗಿ ಮೈಸೂರು ಸರ್ಕಾರ ಹೊಸ ಕಾಯ್ದೆಯನ್ನು ಜಾರಿಗೆ ತಂದಿತ್ತು. ಈ ಕಾಯ್ದೆಯ ಮೂಲಕ ಹೋಬಳಿ ಅಭಿವೃದ್ಧಿ ಯೋಜನೆಯನ್ನು ಕಾರ್ಯಾನುಷ್ಠಾನಗೊಳಿಸಿತು. ಈ ಯೋಜನೆಯನ್ವಯ

ಹೋಬಳಿಗಳಲ್ಲಿ ಗ್ರಾಮ ಸುಧಾರಕರೆಂಬ ಸಿಬ್ಬಂದಿಯನ್ನು ನೇಮಿಸಲಾಯಿತು. ೧೯೪೮ರಲ್ಲಿ ಸರ್ಕಾರ ಅಭಿವೃದ್ಧಿ ಯೋಜನೆಗಳನ್ನು ಗ್ರಾಮಗಳಲ್ಲಿ ಅನುಷ್ಠಾನಗೊಳಿಸುವುದಕ್ಕಾಗಿ ತಾಲ್ಲೂಕು ಮತ್ತು ಜಿಲ್ಲಾ ಅಭಿವೃದ್ಧಿ ಸಮಿತಿಗಳನ್ನು ರಚಿಸಿತು. ರಾಜ್ಯಮಟ್ಟದಲ್ಲಿ ಗ್ರಾಮಾಂತರ ಅಭಿವೃದ್ಧಿ ಇಲಾಖೆಯ ಮುಖ್ಯ ಅಧಿಕಾರಿ ಹುದ್ದೆಗೆ ಡೆವಲಪ್‌ಮೆಂಟ್ ಕಮೀಷನರನ್ನು ನೇಮಿಸಿತು.[೪]

೧೯೪೯ರಲ್ಲಿ ವಿ.ವೆಂಕಟಪ್ಪನವರ ಪಂಚಾಯತ್‌ರಾಜ್ ಅಧ್ಯಯನ ಸಮಿತಿಯನ್ನು ರಚಿಸಲಾಯಿತು. ಈ ಸಮಿತಿಯು ಅಧ್ಯಯನ ವರದಿಯ ಶಿಫಾರಸ್ಸನ್ನು ಸಲ್ಲಿಸಿತು. ಈ ವರದಿಯ ಪ್ರಕಾರ ಜಿಲ್ಲಾಮಟ್ಟದಲ್ಲಿ ಜಿಲ್ಲಾ ಕೌನ್ಸಿಲ್‌ಗಳನ್ನು ಜಿಲ್ಲಾ ಸಲಹಾ ಸಮಿತಿಗಳನ್ನು ರೂಪಿಸಿ ಸದಸ್ಯರುಗಳನ್ನು ಗ್ರಾಮಪಂಚಾಯಿತಿಗಳ ಅಧ್ಯಕ್ಷರನ್ನು ಆಯ್ಕೆ ಮಾಡುವಂತಾಗಬೇಕು. ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕು ಮಂಡಳಿಗಳನ್ನು ರಚಿಸಿ ತಾಲ್ಲೂಕು ಮಟ್ಟದಲ್ಲಿ ಸಲಹೆಗಳನ್ನು ನೀಡುವ ಅಧಿಕಾರಿಗಳನ್ನು ನೇಮಿಸಲಾಗಿತ್ತು. ಗ್ರಾಮಮಟದಲ್ಲಿ ಗ್ರೂಪ್ ಪಂಚಾಯಿತಿಗಳನ್ನು ಜಾರಿಗೆ ತರಲಾಯಿತು. ಈ ಸಂಸ್ಥೆಗಳಿಗೆ ಹೆಚ್ಚಿನ ಹಣಕಾಸಿನ ನೆರವನ್ನು ನೀಡಲಾಗಿತ್ತು. ೧೯೫೨ರಲ್ಲಿ ಮೈಸೂರು ಗ್ರಾಮಪಂಚಾಯಿತಿಗಳು ಮತ್ತು ಜಿಲ್ಲಾಮಂಡಲಿಗಳ ಅಧಿನಿಯಮವನ್ನು ಜಾರಿಗೆ ತಂದಿತ್ತು. ೧೯೫೨ರನ್ವಯ ಗ್ರೂಪ್ ಪಂಚಾಯಿತಿಗಳಿಗೆ ೧೧ರಿಂದ ೨೦ ಮಂದಿ ಸದಸ್ಯರನ್ನು ಮೀರದಂತೆ ಚುನಾಯಿತ ಸದಸ್ಯರನ್ನು ಆಯ್ಕೆ ಮಾಡಬೇಕು. ಜಿಲ್ಲಾಮಂಡಳಿಗಳಿಗೆ ೩೦ರಿಂದ ೪೦ ಸದಸ್ಯರು ಪರೋಕ್ಷ ಚುನಾವಣೆಯ ಮೂಲಕ ಆಯ್ಕೆಯಾಗುತ್ತಿದ್ದರು. ಪರಿಶಿಷ್ಟಜಾತಿ ಮತ್ತು ಪರಿಶಿಷ್ಟ ಪಂಗಡಗಳಿಗೆ, ಹಿಂದುಳಿದ ವರ್ಗಗಳಿಗೆ ಹಾಗೂ ಮಹಿಳೆಯರಿಗೆ ಮೀಸಲಾತಿಯನ್ನು ನೀಡಲಾಗಿತ್ತು. ಸ್ಥಾಯಿ ಸಮಿತಿಗಳಿಗೆ ಅವಕಾಶ ಕಲ್ಪಿಸಲಾಯಿತು.[೫]

೧೯೫೩ರಲ್ಲಿ ಡಿ.ಎಚ್.ಚಂದ್ರಶೇಖರಯ್ಯ ಅವರ ಅಧ್ಯಕ್ಷತೆಯಲ್ಲಿ ಅಧ್ಯಯನ ಸಮಿತಿಯನ್ನು ರಚಿಸಲಾಯಿತು. ಈ ಸಮಿತಿಯ ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕು ಬೋರ್ಡ್‌ಗಳ ಸ್ಥಾಪನೆ, ಜಿಲ್ಲಾ ಹಂತದಲ್ಲಿ ಜಿಲ್ಲಾ ಬೋರ್ಡ್‌ಗಳ ಸ್ಥಾಪನೆ, ಗ್ರಾಮಮಟ್ಟದಲ್ಲಿ ಗ್ರಾಮಪಂಚಾಯಿತಿ ಸಂಸ್ಥೆಗಳನ್ನು ಮುಂದುವರಿಸುವಂತೆ ಶಿಫಾರಸ್ಸು ನೀಡಿತು. ಪ್ರತಿ ೪೦೦ ಜನಸಂಖ್ಯೆಗೆ ಒಬ್ಬ ಗ್ರಾಮಪಂಚಾಯಿತಿ ಸದಸ್ಯರನ್ನು ಆಯ್ಕೆ ಮಾಡಬೇಕು. ತಾಲ್ಲೂಕು ಬೋರ್ಡ್‌ಗಳಿಗೆ ೩/೨ ಸದಸ್ಯರನ್ನು ನೇರವಾಗಿ, ೩/೧ ಭಾಗದ ಸದಸ್ಯರನ್ನು ಪರೋಕ್ಷವಾಗಿ ಆಯ್ಕೆ ಮಾಡುವುದಂತೆ ಶಿಫಾರಸ್ಸು ಮಾಡಲಾಯಿತು.

೧೯೫೭ರ ಬಲವಂತರಾಯ್ ಮೆಹ್ತಾ ಅಧ್ಯಯನ ಸಮಿತಿ ಈ ಸಮಿತಿಯ ಪಂಚಾಯತ್ ಸಂಸ್ಥೆಗಳಿಗೆ ಮೂರು ಹಂತಗಳಲ್ಲಿ ಸಂಸ್ಥೆಗಳನ್ನು ರಚಿಸುವಂತೆ ಶಿಫಾರಸ್ಸು ಮಾಡಿತ್ತು ಗ್ರಾಮ ಹಂತದಲ್ಲಿ ಗ್ರಾಮಪಂಚಾಯಿತಿಗಳನ್ನು ತಾಲ್ಲೂಕು ಮತ್ತು ಜಿಲ್ಲಾ ಹಂತದಲ್ಲಿ ಪಂಚಾಯಿತಿ ಸಮಿತಿಗಳನ್ನು, ಜಿಲ್ಲಾ ಪರಿಷತ್ತುಗಳನ್ನು ರಚಿಸಬೇಕೆಂದು ಪ್ರತಿ ಕಂದಾಯ ಗ್ರಾಮಗಳ ಸಮುದಾಯದ ಜನಸಂಖ್ಯೆ

ಸೇರಿ ಗ್ರಾಮಸಭೆಯನ್ನು ನಡೆಸಬೇಕು. ವಯಸ್ಕರನ್ನು ಚುನಾವಣೆಯಿಂದ ಗ್ರಾಮಪಂಚಾಯಿತಿಯ ಸದಸ್ಯರನ್ನು ಆಯ್ಕೆ ಮಾಡುವಂತೆ ಗ್ರಾಮಸಮುದಾಯದ ಜನಸಂಖ್ಯೆ ೧೫೦೦೦ರಿಂದ ೧೬೦೦೦ಕ್ಕೆ ಮೀರದಂತೆ ಗ್ರಾಮಸಭೆ ನಿರ್ವಹಿಸಬೇಕು. ಕೇಂದ್ರ ಸರ್ಕಾರದಿಂದ ಆರ್ಥಿಕ ಸಂಪನ್ಮೂಲ ನೀಡುವಂತೆ ಹಲವು ಶಿಫಾರಸ್ಸುಗಳನ್ನು ಈ ಅಧ್ಯಯನ ಸಮಿತಿ ಮಾಡಿತು.

ಬಲವಂತರಾಯ್ ಮೆಹ್ತಾ ಸಮಿತಿ(೧೯೫೭)

೧. ಅಭಿವೃದ್ಧಿ ಯೋಜನೆಗಳ ಅನುಷ್ಠಾನಕ್ಕೆ ಆಡಳಿತ ವಿಕೇಂದ್ರೀಕರಣವನ್ನು ಜಾರಿ ಮಾಡುವಂತೆ ಕೇಳಿತು.

೨. ರಾಜಕೀಯ ಪ್ರತಿನಿಧಿಗಳು ಜನರ ಅಧಿಕಾರವನ್ನು ವಿಕೇಂದ್ರೀಕರಿಸುವುದು.

೩. ದೊಡ್ಡ ಗ್ರಾಮಗಳ ಗುಂಪನ್ನು ತಾಲ್ಲೂಕು ಮತ್ತು ಜಿಲ್ಲಾಮಟ್ಟದ ಸಂಸ್ಥೆಗಳಿಗೆ ಅಧೀನವಾಗಿ ನೀಡುವುದು.

೪. ಪಂಚಾಯಿತಿಗಳು, ಪಂಚಾಯಿತಿಯ ಸಮಿತಿಗಳ ಅಧೀನದಲ್ಲಿ ಮೇಲ್ವಿಚಾರಣೆಯಲ್ಲಿ ಕಾರ್ಯ ನಿರ್ವಹಿಸಬೇಕು.

೫. ರಾಜಕೀಯ ಜನಪ್ರತಿನಿಧಿಗಳಿಗೆ ಪರಿಣಾಮಕಾರಿಯಾದ ತರಬೇತಿಯನ್ನು ನೀಡಬೇಕು.

ಈ ರೀತಿಯಾಗಿ ಹಲವು ಶಿಫಾರಸ್ಸುಗಳನ್ನು ನೀಡಿದ ಈ ಅಧ್ಯಯನ ಸಮಿತಿಯು ಗ್ರಾಮಪಂಚಾಯಿತಿ ಅಧಿಕಾರ ವಿಕೇಂದ್ರೀಕರಣ ಕುರಿತು ಮಾತನಾಡುತ್ತದೆ. ಗ್ರಾಮಪಂಚಾಯಿತಿ ಸಂಸ್ಥೆ ಅದರಲ್ಲಿ ರಾಜಕೀಯ ಜನಪ್ರತಿನಿಧಿಗಳ ಸಬಲೀಕರಣಕ್ಕೆ ಹೆಚ್ಚು ಆದ್ಯತೆ ನೀಡಿದ್ದು, ಗ್ರಾಮದ ಜನರಲ್ಲಿ ಇರಬೇಕಾದ ಮತ್ತು ಸಬಲೀಕರಣಗೊಳಿಸುವ ಅಧಿಕಾರಗಳ ಬಗ್ಗೆ ಹೆಚ್ಚು ಗಮನ ವಹಿಸುವುದು ಕಂಡುಬರುವುದು.[೬]

## ಅಶೋಕ ಮೆಹ್ತಾ ಸಮಿತಿ, ೧೯೭೭

ಅಶೋಕ ಮೆಹ್ತಾ ಸಮಿತಿ ಜನತಾ ಸರ್ಕಾರ ರಚಿಸಿದ ಪಂಚಾಯತ್‌ರಾಜ್ ಅಧ್ಯಯನ ಸಮಿತಿಯಾಗಿತ್ತು. ಈ ಸಮಿತಿಯು ಮೂರು ಹಂತದ ಪಂಚಾಯತ್‌ರಾಜ್ ವ್ಯವಸ್ಥೆಗೆ ಬದಲಾಗಿ ಎರಡು ಹಂತದ ಪಂಚಾಯತ್‌ರಾಜ್ ಸಂಸ್ಥೆಗಳ ರಚನೆಗೆ ಸಲಹೆ ಸೂಚಿಸಿತು. ಮಂಡಲ ಪಂಚಾಯಿತಿಗಳನ್ನು ಮತ್ತು ಜಿಲ್ಲಾಪರಿಷತ್‌ಗಳನ್ನು ಜಾರಿಗೆ ತರಲು ಶಿಫಾರಸ್ಸು ಮಾಡಿತು. ಹಲವು ಗ್ರಾಮಗಳು ಸೇರಿ ೧೫ರಿಂದ ೨೦ ಸಾವಿರ ಜನಸಂಖ್ಯೆ ಹೊಂದಿರುವ ಪ್ರದೇಶಕ್ಕೆ ಒಂದು ಮಂಡಲ ಪಂಚಾಯಿತಿಯನ್ನು ರಚಿಸಬೇಕು. ಈ ಮಂಡಲ ಪಂಚಾಯಿತಿಯಲ್ಲಿ ೧೫ ಜನ ಸದಸ್ಯರು ನೇರ

ಚುನಾವಣೆಯ ಮುಖಾಂತರ ಆಯ್ಕೆ ಆಗಬೇಕಾಗಿದ್ದು, ಈ ಸ್ಥಳೀಯ ಸಂಸ್ಥೆಗಳ ಚುನಾವಣೆಗಳನ್ನು ಪಕ್ಷಾಧಾರಿತವಾಗಿ ನಡೆಸಬಹುದಾಗಿತ್ತು. ಪಕ್ಷದ ರಾಜಕೀಯ ಚಿಹ್ನೆಗಳನ್ನು ಬಳಸಿಕೊಂಡು ಚುನಾವಣೆಯನ್ನು ನಡೆಸಬಹುದಾಗಿತ್ತು. ೧/೪ರಷ್ಟು ಮಹಿಳೆಯರಿಗೆ ಜನಸಂಖ್ಯೆ ಆಧಾರಿತ ಚುನಾವಣೆಯನ್ನು ನಡೆಸಬಹುದಾಗಿತ್ತು. ೧/೪ರಷ್ಟು ಮಹಿಳೆಯರಿಗೆ ಜನಸಂಖ್ಯೆ ಆಧಾರದಿಂದ ಪರಿಶಿಷ್ಟಜಾತಿ, ಪರಿಶಿಷ್ಟ ಪಂಗಡ, ಹಿಂದುಳಿದವರಿಗೆ ಮೀಸಲಾತಿಯನ್ನು ಕಲ್ಪಿಸಲಾಯಿತು. ಜಿಲ್ಲಾ ಪರಿಷತ್ ಮತ್ತು ಮಂಡಲ ಪಂಚಾಯಿತಿಗಳಿಗೆ ಪ್ರತ್ಯೇಕ ನ್ಯಾಯಪಂಚಾಯಿತಿ ವ್ಯವಸ್ಥೆಯನ್ನು ಹೊಂದಿರಬಹುದೆಂದು ಶಿಫಾರಸ್ಸುಗಳನ್ನು ಮಾಡಲಾಯಿತು.

ಈ ಸಮಿತಿಯನ್ನು ಗ್ರಾಮಪಂಚಾಯಿತಿ ಸಂಸ್ಥೆಗಳ ಅಧಿಕಾರ ಮತ್ತು ಪಾತ್ರ ಕುರಿತಾಗಿ ಅಧ್ಯಯನ ಮಾಡಲು ನೇಮಿಸಿತ್ತು. ಈ ಸಮಿತಿಯ ಶಿಫಾರಸ್ಸುಗಳು ಹೀಗಿವೆ.

೧. ಜಿಲ್ಲಾಪಂಚಾಯಿತಿಯ ಅಧಿಕಾರ ಮತ್ತು ಸಂಪನ್ಮೂಲಗಳನ್ನು ನೀಡಿತು.

೨. ಮಂಡಲ ಪಂಚಾಯಿತಿಗಳಿಗೆ ಅಧಿಕಾರ ಮತ್ತು ಸಂಪನ್ಮೂಲಗಳನ್ನು, ಗ್ರಾಮಗಳನ್ನು ಒಂದು ಕಡೆ ಸೇರಿಸಿ ಅಧಿಕಾರ ನೀಡಿತು.

ಅಶೋಕ ಮೆಹ್ತಾ ಸಮಿತಿಯ ಎಲ್ಲಾ ಶಿಫಾರಸ್ಸುಗಳು ಜಿಲ್ಲಾ ಪಂಚಾಯಿತಿಗಳ ಅಧೀನ ಅಧಿಕಾರ ಅಭಿವೃದ್ಧಿ ಕುರಿತು ಮತ್ತು ಗ್ರಾಮಪಂಚಾಯಿತಿಗಳ ಬದಲಾಗಿ ಮಂಡಲ ಪಂಚಾಯಿತಿ ಗಳೆರಡರ ಅಧಿಕಾರಿಗೆ ಹೆಚ್ಚಿನ ಅಧಿಕಾರವನ್ನು, ಸ್ಥಳೀಯ ಜನರಿಗೆ ಅಧಿಕಾರದಲ್ಲಿ ಅಧೀನತೆ ನೀಡಲಿಲ್ಲ. ಹಾಗೆಯೇ 'ಗ್ರಾಮಸಭಾ' ಮತ್ತು ಜನಪರ ಯೋಜನೆಗಳಿಗೆ ಹೆಚ್ಚು ಅವಕಾಶಗಳನ್ನು ಶಿಫಾರಸ್ಸು ಮಾಡಲಿಲ್ಲ.[೭]

## ೧೯೮೩ರ ಕರ್ನಾಟಕ ಪಂಚಾಯತ್‌ರಾಜ್ ಕಾಯ್ದೆ

ಕರ್ನಾಟಕದಲ್ಲಿ ಜನತಾ ಸರ್ಕಾರದ ಅವಧಿಯಲ್ಲಿ ಪಂಚಾಯತ್‌ರಾಜ್ ಸಂಸ್ಥೆಗಳನ್ನು ಪುನರುಜ್ಜೀವನಗೊಳಿಸುವುದಕ್ಕೆ ಈ ಕಾಯ್ದೆಯನ್ನು ಜಾರಿಗೆ ತಂದಿತು. ಜಿಲ್ಲಾಪರಿಷತ್, ತಾಲ್ಲೂಕು ಪಂಚಾಯತ್ ಸಮಿತಿಗಳನ್ನು ಮತ್ತು ಮಂಡಲ ಪಂಚಾಯತ್‌ಗಳನ್ನು, ನ್ಯಾಯಪಂಚಾಯಿತಿಗಳನ್ನು ರಚಿಸುವಂತೆ ಅವಕಾಶ ನೀಡಿ ತಳಹಂತದಲ್ಲಿ ಮಂಡಲ ಪಂಚಾಯಿತಿಗಳಿಗೆ ಹೆಚ್ಚಿನ ಅಧಿಕಾರ ನೀಡಲಾಯಿತು. ಮೇಲಿನ ಹಂತದಲ್ಲಿ ಜಿಲ್ಲಾಪರಿಷತ್‌ಗಳಿಗೆ ಹೆಚ್ಚಿನ ಅಧಿಕಾರವನ್ನು ನೀಡಲಾಯಿತು. ತಾಲೂಕು ಪಂಚಾಯಿತಿ ಸಮಿತಿಗೆ ಸಮನ್ವಯ ಕಛೇರಿಯಂತೆ ಕಾರ್ಯ ನಿರ್ವಹಿಸುವ ಅಧಿಕಾರಗಳನ್ನು ನೀಡಿತು. ಪ್ರತಿ ಐದು ವರ್ಷಕ್ಕೆ ಒಮ್ಮೆ ಹಣಕಾಸು ಆಯೋಗದ ಪರಿಶೀಲನೆಯನ್ನು ಶಿಫಾರಸ್ಸು ಮಾಡಿತು. ಈ ಮೇಲ್ಕಂಡ ಸಂಸ್ಥೆಗಳಲ್ಲಿ ಶೇ.೨೫ರಷ್ಟು ಮಹಿಳಾ ಮೀಸಲಾತಿ ಮತ್ತು ಜನಸಂಖ್ಯೆಯನ್ನು

ಆಧರಿಸಿ ಹಿಂದುಳಿದ ವರ್ಗಗಳಿಗೆ, ಪರಿಶಿಷ್ಟಜಾತಿ, ಪರಿಶಿಷ್ಟಪಂಗಡಗಳ ಮೀಸಲಾತಿಯನ್ನು ಶಿಫಾರಸ್ಸು ಮಾಡಲಾಗಿತ್ತು. ೧೨ರಿಂದ ೧೮ ಸಾವಿರ ಜನಸಂಖ್ಯೆಗೆ ಒಂದು ಮಂಡಲ ಪಂಚಾಯಿತಿ ಎಂದು ಶಿಫಾರಸ್ಸಿನಲ್ಲಿ ನಮೂದಿಸಲಾಯಿತು. ಒಂದು ತಿಂಗಳಿಗೆ ಒಂದು ಗ್ರಾಮಸಭೆಯನ್ನು ನಡೆಸುವಂತೆ ಅವಕಾಶ ಕಲ್ಪಿಸಲಾಯಿತು.[೮]

**ಜಿ.ವಿ.ಕೆ.ರಾವ್ ಸಮಿತಿ ಯೋಜನಾ ಆಯೋಗ**

ಜಿ.ವಿ.ಕೆ.ರಾವ್ ಸಮಿತಿ ಯೋಜನಾ ಆಯೋಗವನ್ನು ೧೯೮೫ರಲ್ಲಿ ರಚಿಸಿತು. ಈ ಆಯೋಗ ಗ್ರಾಮೀಣ ಅಭಿವೃದ್ಧಿಯನ್ನು ಅನುಷ್ಠಾನಗೊಳಿಸಿದ್ದು, ಆಡಳಿತಾತ್ಮಕ ಏರ್ಪಾಡುಗಳನ್ನು ಮತ್ತು ಬಡತನ ಪರಿಹಾರ ಕಾರ್ಯಕ್ರಮಗಳನ್ನು ಪರಿಶೀಲಿಸುವುದು. ಸಂಯೋಜಿತಗೊಳಿಸಿದ ಯೋಜನೆಗಳನ್ನು ಪರಿಣಾಮಕಾರಿಯಾಗಿ ಅನುಷ್ಠಾನಗೊಳಿಸುವುದಕ್ಕೆ ಈ ಆಯೋಗವನ್ನು ಜಾರಿಗೆ ತರಲಾಯಿತು.

**ಡಾ.ಎಲ್.ಎಮ್.ಸಿಂಘ್ವಿ ಸಮಿತಿ**

ಈ ಸಮಿತಿಯು "ಪಂಚಾಯಿತಿ ಸಂಸ್ಥೆಗಳ ಆಡಳಿತವನ್ನು ಸಂವಿಧಾನಬದ್ಧಗೊಳಿಸಬೇಕು. ಎಲ್ಲಾ ಸ್ತರದ ಪಂಚಾಯತ್‌ರಾಜ್ ಸಂಸ್ಥೆಗಳಿಗೆ ಸಕಾಲದಲ್ಲಿ ಚುನಾವಣೆಗಳನ್ನು ನಡೆಸಬೇಕು. ಚುನಾವಣಾ ಆಯೋಗದ ಮೂಲಕ ಈ ಸಂಸ್ಥೆಗಳ ಚುನಾವಣೆಗಳನ್ನು ನಡೆಸಬೇಕು" ಎಂದು ಶಿಫಾರಸ್ಸು ಮಾಡಿತು.[೯]

**ಪಿ.ಕೆ.ತುಂಗನ್ ಸಲಹಾ ಸಮಿತಿ**

ಪಿ.ಕೆ.ತುಂಗನ್ ಅಧ್ಯಕ್ಷತೆಯಲ್ಲಿ ಲೋಕಸಭೆಯ ಸಲಹಾ ಸಮಿತಿಯ ಒಂದು ಉಪಸಮಿತಿಯು ಪಂಚಾಯತ್‌ರಾಜ್ ಸಂಸ್ಥೆಗಳಿಗೆ ಸಂವಿಧಾನಾತ್ಮಕ ಮನ್ನಣೆ ದೊರೆಯಬೇಕು ಎಂದು ಶಿಫಾರಸ್ಸು ಮಾಡಿತ್ತು. ವಿ.ಎನ್.ಗಾಡ್ಗೀಳ್ ನೇತೃತ್ವದ ಸಮಿತಿ ೧೯೮೯ರಲ್ಲಿ ಮೂರು ಹಂತಗಳ ಪಂಚಾಯತ್ ರಾಜ್ ವ್ಯವಸ್ಥೆ ಐದು ವರ್ಷಗಳ ಅವಧಿಗೆ ಮತ್ತು ಮಹಿಳಾ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದ ಮೀಸಲಾತಿಯನ್ನು ಶಿಫಾರಸ್ಸು ಮಾಡಿತ್ತು.[೧೦]

**೧೯೯೩ರ ೭೩ನೇ ತಿದ್ದುಪಡಿಯ ಕರ್ನಾಟಕ ಪಂಚಾಯತ್‌ರಾಜ್ ಕಾಯ್ದೆ**

ಈ ಕಾಯ್ದೆಯ ಮೂಲಕ ಮೂರು ಹಂತದ ಪಂಚಾಯತ್‌ರಾಜ್ ಸಂಸ್ಥೆಗಳನ್ನು ಜಾರಿಗೆ ತರಲಾಯಿತು. ತಳಮಟ್ಟದಲ್ಲಿ ಗ್ರಾಮಪಂಚಾಯಿತಿಗಳು, ತಾಲ್ಲೂಕು ಹಂತದಲ್ಲಿ ತಾಲೂಕು ಪಂಚಾಯಿತಿಗಳು, ಜಿಲ್ಲಾ ಹಂತದಲ್ಲಿ ಜಿಲ್ಲಾಪಂಚಾಯಿತಿಗಳು ಅಸ್ತಿತ್ವಕ್ಕೆ ಬಂದು ಜಿಲ್ಲೆ, ತಾಲ್ಲೂಕು ಮತ್ತು ಗ್ರಾಮ ಹಂತಗಳಲ್ಲಿ ನೇರ ಚುನಾವಣೆಯ ಮೂಲಕ ಸದಸ್ಯರನ್ನು ಆಯ್ಕೆ ಮಾಡಲಾಗುವುದು.

ಮಹಿಳೆಯರಿಗೆ, ಹಿಂದುಳಿದ ವರ್ಗದವರಿಗೆ, ಪರಿಶಿಷ್ಟ ಜಾತಿ/ಪಂಗಡಗಳಿಗೆ ಮೀಸಲಾತಿಯನ್ನು ಕಲ್ಪಿಸಲಾಯಿತು. ಪಂಚಾಯತ್‌ರಾಜ್ ಸಂಸ್ಥೆಗಳಿಗೆ ಸಂವಿಧಾನಾತ್ಮಕ ಮಾನ್ಯತೆಯನ್ನು ನೀಡಲಾಯಿತು. ಪಂಚಾಯಿತಿಗೆ ಪ್ರತಿ ಐದು ವರ್ಷಕ್ಕೊಮ್ಮೆ ಚುನಾವಣೆಗಳನ್ನು ರಾಜ್ಯ ಚುನಾವಣಾ ಆಯೋಗ ನಡೆಸಬೇಕು. ಹಾಗೂ ಪ್ರತಿ ಐದು ವರ್ಷಕ್ಕೊಮ್ಮೆ ಹಣಕಾಸಿನ ಆಯೋಗದ ಪರಿಶೀಲನೆಗೆ ಒಳಪಡಿಸಬೇಕು. ಗ್ರಾಮಪಂಚಾಯಿತಿಗಳ ಗ್ರಾಮಸಭೆಗಳ ಕಾನೂನಾತ್ಮಕ ಸ್ಥಾನಮಾನ ಕಲ್ಪಿಸಿ ಗ್ರಾಮಸ್ಥರು ಗ್ರಾಮದ ಆಡಳಿತದಲ್ಲಿ ಹೆಚ್ಚು ಭಾಗವಹಿಸುವಿಕೆಗೆ ಅವಕಾಶ ಕಲ್ಪಿಸಲಾಯಿತು. ೭೩ನೇ ತಿದ್ದುಪಡಿಯ ಮೂಲಕ ವಾರ್ಡ್ ಸಭೆಗಳಿಗೆ ಅವಕಾಶ ಕಲ್ಪಿಸಲಾಯಿತು.

**ಹೆಚ್.ಸಿ.ಹನುಮಂತ ರಾವ್**(೧೯೮೭) ಯೋಜನಾ ಆಯೋಗ ಸಮಿತಿಯ ವರದಿಯು 'ಜನರ ಸಹಭಾಗಿತ್ವವನ್ನು ಪರಿಣಾಮಕಾರಿ ನಿರೀಕ್ಷಿಸಬೇಕು. ಗ್ರಾಮೀಣ ಅಭಿವೃದ್ಧಿಗೆ ಎಂದಿದ್ದು ಯೋಜನೆಯನ್ನು ವಿಕೇಂದ್ರೀಕರಣಗೊಳಿಸಬೇಕು ಎಂದರೂ ಸ್ಥಳೀಯ ನಾಗರಿಕರು ತಮ್ಮ ಅಭಿವೃದ್ಧಿ ಯೋಜನೆ ಸಿದ್ಧಪಡಿಸುವಲ್ಲಿ ಸಕ್ರಿಯವಾಗಿ ಭಾಗವಹಿಸಿ ಅವರೇ ತಮ್ಮ ಯೋಜನೆಗಳನ್ನು ಸಿದ್ಧಗೊಳಿಸುವಂತಾಗಬೇಕು ಆಗ ಗ್ರಾಮೀಣ ಅಭಿವೃದ್ಧಿ ಸಾಧ್ಯವಾಗುತ್ತದೆ ಎಂದು ಶಿಫಾರಸ್ಸು ಮಾಡಲಾಗಿದೆ. ಈ ಸಮಿತಿ ಶಿಫಾರಸ್ಸುಗಳಲ್ಲಿ ಗ್ರಾಮಪಂಚಾಯಿತಿಯಲ್ಲಿ ಜನರ ಸಹಭಾಗಿತ್ವದ ಬಗ್ಗೆ ಮಾತನಾಡಿದ್ದು ಉಳಿದ ಹಲವಾರು ಅಧ್ಯಯನಗಳನ್ನು ಗ್ರಾಮಪಂಚಾಯಿತಿಯ ಹಣಕಾಸು ವಿಕೇಂದ್ರೀಕರಣ, ಆಡಳಿತಾತ್ಮಕ ವಿಕೇಂದ್ರೀಕರಣ, ಅಧಿಕಾರ ವಿಕೇಂದ್ರೀಕರಣ, ಸಂಸ್ಥೆಯಿಂದ ಸಂಸ್ಥೆಗಳಿಗೆ ಅಧಿಕಾರ ವರ್ಗಾಯಿಸುವ ಮತ್ತು ಕಡಿತಗೊಳಿಸುವ ಹಾಗೂ ಹೆಚ್ಚಿಸುವಂಥ ಶಿಫಾರಸ್ಸುಗಳನ್ನು ಮಾಡಿದೆ. ಈ ಆಡಳಿತದಲ್ಲಿ ಜನರ ಸಹಭಾಗಿತ್ವವನ್ನು ಒಳಗೊಂಡಂತೆ ಗ್ರಾಮೀಣ ಅಭಿವೃದ್ಧಿ ಹೊಂದಲು ಮುಂದಾಗಬೇಕೆಂದು ಶಿಫಾರಸ್ಸು ಮಾಡಿದೆ.[೧೧]

ಮಹಾತ್ಮ ಗಾಂಧಿಯವರ ಹೇಳಿಕೆಯಂತೆ ಜನರು ಗ್ರಾಮಪಂಚಾಯಿತಿ ಅಧಿಕಾರದಲ್ಲಿ ಭಾಗವಹಿಸುವುದರ ಮೂಲಕ ಉತ್ತಮ ಗ್ರಾಮೀಣ ಅಭಿವೃದ್ಧಿ ಸಾಧಿಸಬಹುದೆಂದು ಹಲವಾರು ಅಧ್ಯಯನ ಸಮಿತಿಗಳ ಶಿಫಾರಸ್ಸಿನ ಮೇರೆಗೆ ೧೯೯೩ರಲ್ಲಿ ೭೩ನೇ ತಿದ್ದುಪಡಿಯನ್ನು ಸಂವಿಧಾನದಲ್ಲಿ ತಂದು ಭಾರತದ ಪಂಚಾಯಿತ್‌ರಾಜ್ ಸಂಸ್ಥೆಗಳಿಗೆ ಹೊಸ ಆರ್ಥಿಕ, ಆಡಳಿತಾತ್ಮಕ, ರಾಜಕೀಯ ವಿಕೇಂದ್ರೀಕರಣವನ್ನು ನೀಡುವುದರ ಮೂಲಕ ಕಡ್ಡಾಯ ಗ್ರಾಮಸಭಾ ಜಾರಿಗೆ ತರಲಾಯಿತು.

೧೯೯೨ರ ಸಂವಿಧಾನದ ೭೩ನೇ ತಿದ್ದುಪಡಿಯ ಮೂಲಕ ಗ್ರಾಮಪಂಚಾಯಿತಿ ಸಂಸ್ಥೆಗಳಿಗೆ 'ಗ್ರಾಮಸಭಾ'ಯನ್ನು ಕಡ್ಡಾಯವಾಗಿ ವರ್ಷದಲ್ಲಿ ಎರಡೂ ಬಾರಿ ಮಾಡುವಂಥ ಅಧಿನಿಯವನ್ನು ತರಲಾಗಿದೆ.[೧೨]

ವಿಧಿ ೨೪೩(ಬಿ) ಅಧಿನಿಯಮದಲ್ಲಿ 'ಗ್ರಾಮಸಭೆ' ಎಂದರೆ ಗ್ರಾಮಪಂಚಾಯಿತಿ ಪ್ರದೇಶದ ವ್ಯಾಪ್ತಿಯಲ್ಲಿ ಸಂಬಂಧಿಸಿದ ಮತದಾರರ ಪಟ್ಟಿಯಲ್ಲಿ ನೋಂದಾಯಿಸಿಲ್ಪಟ್ಟ ವ್ಯಕ್ತಿಗಳ ಒಂದು ಮಂಡಲಿ ಎಂದು ವ್ಯಾಖ್ಯಾನಿಸಲಾಗಿದೆ.

**೩.೨. ಪಂಚಾಯಿತಿ ಸಾಮಾಜಿಕ ಜಮಾಬಂದಿಯ ಇತಿಹಾಸ ಮತ್ತು ಅನುಷ್ಠಾನದ ವಿಶ್ಲೇಷಣೆಗೆ**

**ಸಾಮಾಜಿಕ ಜಮಾಬಂದಿಯ ಐತಿಹಾಸಿಕ ಹಿನ್ನೆಲೆ:** ಸಾಮಾಜಿಕ ಜಮಾಬಂದಿಯನ್ನು ೧೯೭೯ರಲ್ಲಿ ¨ÁgÀvÀzÀ ¨ÁjUÉmÁmÁ LgÀïDÀqï¹Ã ïPÀ¥À(Tisco) ಜೆಮ್‌ಶೇಟ್‌ಪುರದಲ್ಲಿ ಜಾರಿಗೆ ತರಲಾಯಿತು. ನಂತರ ೭೩ನೇ ಸಂವಿಧಾನದ ತಿದ್ದುಪಡಿಯ ಮೂಲಕ ಪಂಚಾಯತ್ ರಾಜ್ ಸಂಸ್ಥೆಗಳ ಇಲಾಖೆಗಳಲ್ಲಿ ಅಳವಡಿಸಿಕೊಳ್ಳಲಾಯಿತು. ಐದನೇ ಪಂಚವಾರ್ಷಿಕ ಯೋಜನೆಯಡಿಯಲ್ಲಿ(೧೯೯೭-೨೦೦೦)ಅನುಷ್ಠಾನಕ್ಕೆ ತಂದು ಪಂಚಾಯತ್‌ರಾಜ್ ಇಲಾಖೆಯಲ್ಲಿ ಸಂಸ್ಥೆಗಳು ವಿಕೇಂದ್ರೀಕರಣ ಅಧಿಕಾರ ಸಾಧಿಸುವಲ್ಲಿ ಉತ್ತಮ ಸಾಧನೆಯನ್ನು ಮಾಡಲಾಯಿತು. ಯೋಜನೆಗಳ ಅನುಷ್ಠಾನ ಮತ್ತು ವಿಕೇಂದ್ರೀಕರಣ ಗುರಿ ಮುಟ್ಟಲು ಸಾಮಾಜಿಕ ಜಮಾಬಂದಿ ಪ್ರಧಾನವಾಗಿ ಕೆಲಸ ನಿರ್ವಹಿಸಿದೆ. ಕೇರಳ ರಾಜ್ಯ ಸರ್ಕಾರ ಪಂಚಾಯತ್‌ರಾಜ್ ಸಂಸ್ಥೆಗಳಿಗೆ ಸಾಮಾಜಿಕ ಜಮಾಬಂದಿಯನ್ನು ಜಾರಿಗೆ ತರುವಲ್ಲಿ ಮುಂದಾಯಿತು.

**ಸಾಮಾಜಿಕ ಜಮಾಬಂದಿಯ ಪರಿಚಯ:** ಸಾಮಾಜಿಕ ಜಮಾಬಂದಿಯ ಪದವು ಲ್ಯಾಟಿನ್ ಭಾಷೆಯಿಂದ ಬಂದ ಪದವಾಗಿದ್ದು ಈ ಪದವನ್ನು ಆಂಗ್ಲ ಭಾಷೆಯಲ್ಲಿ "ಸೋಷಿಯಲ್ ಆಡಿಟ್" ಎಂದು ಕರೆಯಲಾಗುತ್ತದೆ. 'ಸೋಷಿಯಲ್' ಅಂದರೆ ಸಾಮಾಜಿಕ 'ಆಡಿಟ್' ಎಂದರೆ ಕೇಳುವುದು ಅಥವಾ ತಿಳಿಯುವುದು ಎನ್ನುವರ್ಥ ಬರುವುದು. ಪ್ರಾಚೀನ ಕಾಲದಲ್ಲಿ ರಾಜರು ತಮ್ಮ ಸಾಮ್ರಾಜ್ಯದಲ್ಲಿ ನಡೆಯುವ ಕೆಲಸ ಕಾರ್ಯಗಳು ಮತ್ತು ನಾಗರಿಕರಿಗೆ ಸಲ್ಲಬೇಕಾದ ಸೇವೆ ಕುರಿತು ಸಾರ್ವಜನಿಕರಲ್ಲಿ ಇರುವ ಅಭಿಪ್ರಾಯಗಳನ್ನು ಸಂಗ್ರಹಿಸಲು ಒಂದು ಗುಪ್ತದಳವನ್ನು ನಿಯೋಜಿಸಲಾಗುತ್ತಿತ್ತು. ಅವರು ಮಾಡುವ ಕೆಲಸವನ್ನು ಆಡಿಟ್ ಎಂತಲೂ ಕರೆಯಲಾಗುತ್ತಿತ್ತು.

೧೯೭೦ರ ಮಧ್ಯಂತರ ಅವಧಿಯಲ್ಲಿ ಯುರೋಪ್ ರಾಷ್ಟ್ರಗಳಲ್ಲಿ ಸಾಮಾಜಿಕ ಜಮಾಬಂದಿ ಪ್ರಾರಂಭವಾಯಿತು. ಈ ಸಾಮಾಜಿಕ ಜಮಾಬಂದಿಯು ಸಾರ್ವಜನಿಕ ವಲಯಕ್ಕೆ ವಿಸ್ತಾರಗೊಂಡು ನೌಕರರ ನೇಮಕಾತಿಗಳಲ್ಲಿ ಮತ್ತು ಸಾರ್ವಜನಿಕ ಉದ್ಯಮಗಳಲ್ಲಿ ಸಾಮಾಜಿಕ ಜಮಾಬಂದಿಯಿಂದ ಪಾರದರ್ಶಕತೆ ಉಂಟಾಯಿತು.[೧೩]

ಸಾಮಾಜಿಕ ಜಮಾಬಂದಿಯ ಯುಗ ಪ್ರಾರಂಭಗೊಂಡಂತೆ ಸಮಾಜದ ಆರ್ಥಿಕತೆ ಒಳಗೊಂಡಂತೆ ಸಾರ್ವಜನಿಕ ವ್ಯಾಪಾರ, ಸರ್ಕಾರಿ ಸ್ವಾಮ್ಯದ ಸಂಸ್ಥೆಗಳಲ್ಲಿ, ಖಾಸಗಿ ಕಾರ್ಖಾನೆಗಳಲ್ಲಿ, ಕಂಪನಿಗಳಲ್ಲಿ, ಎನ್.ಜಿ.ಓ.ಗಳಲ್ಲಿ ತಮ್ಮ ಸಾರ್ವಜನಿಕ ಕಾರ್ಯಕ್ರಮಗಳ ಕುರಿತು ಜನರಲ್ಲಿರುವ ಅಭಿಪ್ರಾಯಗಳನ್ನು ತಿಳಿಯಲು ಪ್ರಮುಖವಾಗಿ ಜಮಾಬಂದಿಯನ್ನು ಅಳವಡಿಸಿಕೊಳ್ಳಲಾಯಿತು.

೧೯೮೨ರ ಹೊತ್ತಿಗೆ ಸಾಮಾಜಿಕ ಜಮಾಬಂದಿಯು ವಿಶ್ವದಾದ್ಯಂತ ಪ್ರಕಟಗೊಂಡಿತು. ೧೯೮೪ರಲ್ಲಿ ಕೋ-ಆಪರೇಟಿವ್ ರೀಟೈಲ್ ಸೊಸೈಟಿಯು ಈ ಸಾಮಾಜಿಕ ಜಮಾಬಂದಿಗೆ ಸಂಬಂಧಿಸಿದಂತೆ ನಿಯಮಗಳನ್ನು ಮಾಡಲಾಯಿತು. ನಂತರ ಈ ಸಂಸ್ಥೆಯು ಜಮಾಬಂದಿಯನ್ನು ಸವಿಸ್ತಾರವಾಗಿ ಅಧ್ಯಯನಕ್ಕೆ ಒಳಪಡಿಸಿ ಅದನ್ನು ಅರ್ಥ ಮಾಡಿಕೊಳ್ಳಲು ಪ್ರಯತ್ನಿಸಿತು.

೧೯೯೦ರ ನಂತರ ಹಲವು ಸಾರ್ವಜನಿಕ ಖಾಸಗಿ ಸಂಸ್ಥೆಗಳು ಸಾಮಾಜಿಕ ಜಮಾಬಂದಿಯನ್ನು ಅಭಿವೃದ್ಧಿಪಡಿಸುವಲ್ಲಿ ಮುಂದಾದವು ಮತ್ತು ಆ ಮೂಲಕ ಸಾರ್ವಜನಿಕ ವಲಯದಲ್ಲಿ ಜಮಾಬಂದಿ ಕಾರ್ಯಕ್ರಮವನ್ನು ಸಕ್ರಿಯವಾಗಿ ಪ್ರಯೋಗಕ್ಕೆ ತರಲಾಯಿತು.

೧೯೯೭ರಲ್ಲಿ ಸೋಷಿಯಲ್ ಎಂಟರ್‌ಪ್ರೈಸಸ್ ಪಾರ್ಟನರ್‌ಶಿಪ್ ಸಂಸ್ಥೆಯು ಯುರೋಪಿನಲ್ಲಿ ಜಮಾಬಂದಿ ಕಾರ್ಯಕ್ರಮವನ್ನು ಅಭಿವೃದ್ಧಿಪಡಿಸಿತು. ಇದರ ಜೊತೆಯಲ್ಲಿ ಐರ್ಲ್ಯಾಂಡ್, ಸ್ಪೈನ್, ಫಿನ್ಲ್ಯಾಂಡ್, ಡೆನ್ಮಾರ್ಕ್ ಮತ್ತು ಇಂಗ್ಲೆಂಡ್ ರಾಷ್ಟ್ರಗಳು ಒಕ್ಕೂಟವಾಗಿ ಸೇರಿಕೊಂಡಿದ್ದವು. ೧೯೯೮ರಲ್ಲಿ ಉತ್ತರ ಐರ್‌ಲ್ಯಾಂಡ್‌ನ ಸೋಷಿಯೋ ಎಕನಾಮಿಕ್ಸ್ ಸಂಸ್ಥೆಯ ಸಾಮಾಜಿಕ ಜಮಾಬಂದಿಯ ನಿಯಮಬದ್ಧ ತರಬೇತಿ ಕಾರ್ಯಕ್ರಮಗಳನ್ನು ಪ್ರಾರಂಭಿಸಿತು.

Charles Medawar ಸಾಮಾಜಿಕ ಲೆಕ್ಕಪರಿಶೋಧನೆಯ ಪಿತಾಮಹ. ೧೯೭೨ ಸಾಮಾಜಿಕ ಜಮಾಬಂದಿಯನ್ನು ಮೆಡಿಕಲಲ್ ಪಾಲಿಸಿ ಡ್ರಗ್ ಸೇಫ್ಟಿ ಇನ್ಶೂರೆನ್ಸ್ ಆ್ಯಂಡ್ ಆನ್‌ಮೇಪಾರ್ಸ್ ಆಫ್ ಕಾರ್ಪೋರೇಷನ್‌ನಲ್ಲಿ ಬಳಸಲಾಯಿತು.

Medawar Definition:- "Social Audit is a process in whichs details of the resource, both financial and non-financial, used by public agencies for development initiatives are shared with the people. of ten through a public platform. Social Audits allow people to onforece accountability and transparency providing the ultimate user an opportunity to scrutinize development initiatives" (Planning Commision Govt. of india, New Delhi)

**ಸಾಮಾಜಿಕ ಜಮಾಬಂದಿ ವ್ಯಾಖ್ಯಾನ:** ಪ್ರತಿಯೊಂದು ಗ್ರಾಮಪಂಚಾಯಿತಿಯ ದಾಖಲಾತಿ ಪುಸ್ತಕಗಳನ್ನು ಸಾರ್ವಜನಿಕರ ಪರೀಕ್ಷೆಗೆ ಒಳಪಡಿಸುವ ಹಾಗೂ ಗ್ರಾಮಪಂಚಾಯಿತಿಗಳ ಲೆಕ್ಕ ಪತ್ರಗಳ ಕ್ರಮಬದ್ದವಾದ ಪರಿಶೀಲನೆಯನ್ನು ತಪ್ಪದೇ ಪ್ರತಿವರ್ಷ ಮಾಡುವ ಕಾರ್ಯಕ್ರಮವೇ ಪಂಚಾಯಿತಿ ಜಮಾಬಂದಿ.

Defination of Social audit :- A Social Audit is away of measuring understanding reporting and ultimately inpraing an organizations social and ethical between

efficiency and effictiveness it is a thigue to understand measure verify report on and to improve the social performence of the orgnization.

Social Audit:- Audit to men an examination of accounts by an authorised person or person. The Social Audit soue of the local self Gorverning institutions by the same token may be defined to mean exersice of general supervision or oversight by local communities overs the performance of the local bodies.

The Gram subha Social Audit Role in term of the existing state legistations it may be said does not add up to machina much as that these are no wondotory legal outcomes in the event that leakages or irregularities might be detected govrning by the experience which has so for accoumulated body three approaches to the social audit sole of Gram sabha are discaerible.

The Corner Stone of Kenutis Strategy has been to foster transparency as a means of encouraging public scruting of local project. At the site of every public work, it is mandatory to display information pertainging to the number of workers employed and wages paid materials purchased transport costs and contingency expenditure incorred and so on. the previsouslty mentioned monitoring committee of the Gram sabha ensures that noties carrying these details are actfully prepared and pasted at the site of the work these notices are also displayed of the ward notice board.

Madhya Pradesh has instituted a legally backed procedure of Social audit with an adutory legal outcomes in the ever corruption was detectude. under this if upon a preliminary enquity the gram sabha condemded that there have been irregularities in implementing a work, it would submit a repost to that effect to the SDO.[೧೪]

ಸಾಮಾನ್ಯ ಜಮಾಬಂದಿಯಲ್ಲಿ ಹಣಕಾಸಿನ ಜಮಾಬಂದಿ ನಡೆಸಲಾಗುತ್ತದೆ. ಜಮಾಬಂದಿಯಲ್ಲಿ ಹಣಕಾಸಿನ ದಾಖಲೆಗಳನ್ನು ಬಾಹ್ಯ ಜಮಾಬಂದಿಗಾರರು ಹಣಕಾಸಿನ ಪಾರದರ್ಶಕತೆಯನ್ನು ಲೆಕ್ಕಲೆಕ್ಕಪರಿಶೋಧನೆಗೆ ಒಳಪಡಿಸಿ ಹಣಕಾಸಿನ ಪಾರದರ್ಶಕ ತತ್ವಗಳನ್ನು ಪರಿಶೋಧಿಸಿ ವರದಿಯನ್ನು ಸಿದ್ಧಪಡಿಸುತ್ತಾರೆ.

ಗ್ರಾಮಪಂಚಾಯಿತಿಗಳಲ್ಲಿ ಸಾಮಾಜಿಕ ಜಮಾಬಂದಿ ಎರಡು ಭಾಗಗಳಲ್ಲಿ ನಡೆಯುತ್ತದೆ. ಮೊದಲನೆಯದು ಆಂತರಿಕ ಆರ್ಥಿಕ ಜಮಾಬಂದಿ, ಎರಡನೆಯದು ಸಾಮಾಜಿಕ ಜಮಾ

ಬಂದಿಯಾಗಿದೆ. ಗ್ರಾಮಪಂಚಾಯಿತಿಗಳಿಗೆ ಮಾತ್ರವಲ್ಲದೆ ಎಲ್ಲಾ ಸರ್ಕಾರಿ ಇಲಾಖೆಗಳಲ್ಲಿಯೂ ಸಾರ್ವಜನಿಕ ಸಂಸ್ಥೆಗಳಲ್ಲಿ, ಖಾಸಗಿ ಸಂಸ್ಥೆಗಳಲ್ಲಿ ಮತ್ತು ಸರ್ಕಾರದ ಅನುದಾನಿತ ಎಲ್ಲಾ ಸಂಸ್ಥೆಗಳಲ್ಲಿಯೂ ಆಂತರಿಕ ಆರ್ಥಿಕ ಅಥವಾ ಲೆಕ್ಕಲೆಕ್ಕಪರಿಶೋಧನೆಯು ನಡೆಯುತ್ತದೆ. ಸಾಮಾಜಿಕ ಜಮಾಬಂದಿ ಅಥವಾ ಸಾಮಾಜಿಕ ಲೆಕ್ಕಲೆಕ್ಕಪರಿಶೋಧನೆ ಸರ್ಕಾರಿ ಇಲಾಖೆಗಳಲ್ಲಿ, ಸಾರ್ವಜನಿಕ ಮತ್ತು ಖಾಸಗಿ ಸಂಸ್ಥೆಗಳಲ್ಲಿ, ಸರ್ಕಾರದ ಅನುದಾನಿತ ಮತ್ತು ಧನಸಹಾಯ ಹೊಂದಿದ ಎಲ್ಲಾ ಸಾರ್ವಜನಿಕ ಸಂಸ್ಥೆಗಳು ಸಾರ್ವಜನಿಕ ಸಾಮಾಜಿಕ ಜಮಾಬಂದಿಯನ್ನು ನಡೆಸಿ ಸಂಸ್ಥೆಗಳ ಆರ್ಥಿಕ ಮತ್ತು ಆರ್ಥಿಕೇತರ ವಿಷಯಗಳನ್ನು ಚರ್ಚಿಸಬೇಕು. ಪ್ರತಿ ವರ್ಷ ತನ್ನ ಗ್ರಾಹಕರಿಗೆ, ಪಾಲುಗಾರರಿಗೆ, ಸಾರ್ವಜನಿಕರಿಗೆ, ವರ್ಷದ ಆಡಳಿತ ಪ್ರಗತಿ ಮತ್ತು ಆರ್ಥಿಕ ನಿರ್ವಹಣೆಗಳ ಕುರಿತು ಸಾರ್ವಜನಿಕರಿಗೆ ಉಚಿತವಾಗಿ ಅಥವಾ ನಿಗದಿತ ಹಣ ಪಡೆದಾಗಲಿ ಮಾಹಿತಿಯನ್ನು ಸಾರ್ವತ್ರಿಕಗೊಳಿಸಬೇಕಾಗಿರುವುದು ಮೇಲಿನ ಎಲ್ಲಾ ರೀತಿಯ ಸಂಸ್ಥೆಗಳ ಕರ್ತವ್ಯ ಮತ್ತು ಜವಾಬ್ದಾರಿಯಾಗಿರುತ್ತದೆ.[೧೫]

ಸರ್ಕಾರಿ ಇಲಾಖೆಗಳು, ಸರ್ಕಾರಿ ಸಂಸ್ಥೆಗಳ ಸರ್ಕಾರದ ಅಂಗ ಸಂಸ್ಥೆಗಳು, ಸರ್ಕಾರ ಧನಸಹಾಯ ಹೊಂದಿದ ಮತ್ತು ಅನುದಾನವನ್ನು ಪಡೆದ ಸಂಸ್ಥೆಗಳು ಮತ್ತು ಖಾಸಗಿ ಸಾರ್ವಜನಿಕ ಸಂಸ್ಥೆಗಳು ಜನರು ನೀಡುವ ತೆರಿಗೆ ಮೂಲದ ಹಣದಿಂದ ನಡೆಯುತ್ತವೆ. ಗ್ರಾಹಕರು, ಪಾಲುದಾರರು, ಪ್ರಜೆಗಳು ಫಲಾಪೇಕ್ಷಿಸುವಂತೆ ಉಪಯೋಗಿಸುವಂತಹ ಜನರ ವ್ಯವಹಾರದಿಂದ ಸಂಗ್ರಹಿಸಿದ ಹಣವಾಗಿರುತ್ತದೆ. ಹಾಗಾಗಿ ಮೇಲಿನ ಸಂಸ್ಥೆಗಳು ಸಾರ್ವಜನಿಕರ ಹಣದಿಂದ ನಡೆಯುವುದರಿಂದ ಪ್ರತಿಯೊಬ್ಬ ನಾಗರಿಕರು ಮೇಲಿನ ಮಾದರಿ ಸಂಸ್ಥೆಗಳಿಂದ ಮಾಹಿತಿಯನ್ನು ಪಡೆಯುವ ಹಕ್ಕು ಹೊಂದಿರುತ್ತಾರೆ. ಹಾಗೆ ದಾಖಲಾತಿಗಳನ್ನು ಪರಿಶೀಲಿಸಿ ಕೇಳುವ ಹಕ್ಕು ಮತ್ತು ದಾಖಲಾತಿಗಳ ನಕಲುಗಳನ್ನು ಪಡೆಯುವ ಹಕ್ಕನ್ನು ನಾಗರಿಕರು ಹೊಂದಿರುತ್ತಾರೆ. ೨೦೦೫ರ ಮಾಹಿತಿ ಹಕ್ಕು ಕಾಯಿದೆ ಮೂಲಕ ಮಾಹಿತಿಗಳನ್ನು ಪಡೆಯಲು ಸಾರ್ವಜನಿಕವಾಗಿ ಸಂಸ್ಥೆಗಳ ಇಲಾಖೆಗಳ ಆರ್ಥಿಕೇತರ ಮತ್ತು ಆರ್ಥಿಕ ಅಂಶಗಳ ಮಾಹಿತಿ ಪಡೆಯಲು ಹೆಚ್ಚು ಸಹಕರಿಸಲಾಯಿತು. ಸರ್ಕಾರಿ ಇಲಾಖೆ ಸಂಸ್ಥೆಗಳು ಅಂಗಸಂಸ್ಥೆ ಖಾಸಗಿ ಮತ್ತು ಅನುದಾನಿತ ಸಂಸ್ಥೆಗಳ ಮಾಹಿತಿಯನ್ನು ಸಾರ್ವಜನಿಕವಾಗಿ ಪ್ರಕಟಿಸುವುದರ ಮೂಲಕ, ಸಂಸ್ಥೆಗಳ ಇಲಾಖೆಗಳ ಮಾಹಿತಿ ಸಾರ್ವತ್ರಿಕಗೊಂಡು ಹೆಚ್ಚು ಹೆಚ್ಚು ಜನರು ಸರ್ಕಾರಗಳ ಅಭಿವೃದ್ಧಿ ಯೋಜನೆಗಳನ್ನು, ಇಲಾಖೆಗಳ ಉಪಯೋಗಗಳನ್ನು ಪಡೆಯಲು ಸಾಧ್ಯವಾಗುತ್ತದೆ. ಹಾಗಾಗಿ ಸಾರ್ವಜನಿಕ ಸಂಸ್ಥೆಗಳು ತಮ್ಮ ಪ್ರಗತಿಯ ಗುರಿಯನ್ನು ಮುಟ್ಟಲು ಸಾಧ್ಯವಾಗುತ್ತದೆ. ಜನರು ಹೆಚ್ಚು ಉಪಯುಕ್ತತೆಯನ್ನು ಪಡೆಯುತ್ತಾರೆ.

ಪಂಚಾಯತ್‌ರಾಜ್ ವ್ಯವಸ್ಥೆಗಳಲ್ಲಿಯೂ ಸಾಮಾಜಿಕ ಲೆಕ್ಕಲೆಕ್ಕಪರಿಶೋಧನೆ ಮಹಾತ್ಮ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಕಾಯಿದೆಯ ಯೋಜನೆಯ ಅನುಷ್ಠಾನದ ಪರಿಶೀಲನೆಗಾಗಿ

ವರ್ಷದಲ್ಲಿ ಎರಡು ಬಾರಿ ಪ್ರತಿ ಆರು ತಿಂಗಳಿಗೆ ಒಮ್ಮೆ ಜಿಲ್ಲಾಪಂಚಾಯಿತಿ ಸಿಬ್ಬಂದಿಯವರು ಅನುಮೋದನೆ ಮೇರೆಗೆ ತಾಲ್ಲೂಕು ಪಂಚಾಯಿತಿ ಆದೇಶದ ಮೇರೆಗೆ MNREGA ಯೋಜನೆ ಅನುಷ್ಠಾನದಲ್ಲಿ ಪ್ರಗತಿ ಪರಿಶೀಲನೆ ನಡೆಸಲಾಗುತ್ತದೆ. ಆ ಸಮಯದಲ್ಲಿ ಸಾಮಾಜಿಕ ಲೆಕ್ಕ ಲೆಕ್ಕಪರಿಶೋಧನಾ ಸಭೆಯನ್ನು ನಡೆಸಲಾಗುತ್ತದೆ. ಆ ಸಭೆ ಯೋಜನೆಯ ಅನುಷ್ಠಾನಕ್ಕೆ ಅಡ್ಡಿಯಾಗುವ ಅಥವಾ ತೊಂದರೆಯಾಗುವ ಅಂಶಗಳನ್ನು ಚರ್ಚಿಸಿ ಆ ಸಮಸ್ಯೆಗಳ ಕುರಿತು ವಿವರಣೆಯನ್ನು ಪಡೆದು ಪರಿಹಾರಗಳನ್ನು ಹುಡುಕಲಾಗುತ್ತದೆ. ಸಾರ್ವಜನಿಕವಾಗಿ ಯೋಜನೆ ಫಲಾನುಭವಿಗಳಿಗೆ ಎದುರಾದ ಸಮ್ಯೆಗಳ ಕುರಿತು ಪ್ರಶ್ನಿಸುವ ಅವಕಾಶ ಕಲ್ಪಿಸಲಾಗುತ್ತದೆ. ದೂರನ್ನು ನೀಡುವ ಅವಕಾಶಗಳು ಜನರಿಗೆ ಇರುತ್ತವೆ. ಈ ರೀತಿಯಲ್ಲಿ MNREGA ಯೋಜನೆ ಸಾಮಾಜಿಕ ಲೆಕ್ಕಲೆಕ್ಕಪರಿಶೋಧನೆ ಸಭೆ ನಡೆಯುತ್ತವೆ.

**ಗ್ರಾಮಪಂಚಾಯತಿ ಸಾಮಾಜಿಕ ಜಮಾಬಂದಿ ಗ್ರಾಮಸಭೆ :** ಈ ಸಭೆಯಲ್ಲಿ ಗ್ರಾಮಪಂಚಾಯಿತಿಯಲ್ಲಿ ಜಾರಿಯಲ್ಲಿರುವ ಎಲ್ಲಾ ಯೋಜನೆಗಳ ಆರ್ಥಿಕ ಮತ್ತು ಆರ್ಥಿಕೇತರ ವಿಷಯಗಳನ್ನು ಕಾಮಗಾರಿಗಳ ವರ್ಷದ ಖರ್ಚು ವೆಚ್ಚಗಳನ್ನು ಸಾರ್ವಜನಿಕರಿಗೆ ತಿಳಿಸಲಾಗುತ್ತದೆ. ಇದಕ್ಕಾಗಿ ಕರ ಪತ್ರಗಳಲ್ಲಿ ವಿವರಗಳನ್ನು ಮುದ್ರಿಸಿ ಗ್ರಾಮದ ಮತದಾರರನ್ನು ಸಾಮಾಜಿಕ ಜಮಾಬಂದಿ ಸಭೆಗೆ ಆಹ್ವಾನಿಸುತ್ತಾರೆ. ಆ ಮೂಲಕ ಪ್ರತಿ ವರ್ಷ ಆಗಸ್ಟ್ ೧೬ರಿಂದ ಸೆಪ್ಟೆಂಬರ್ ೧೫ರೊಳಗೆ ತಾಲ್ಲೂಕು ಮಟ್ಟದ ಅಧಿಕಾರಿಗಳ ಅಧ್ಯಕ್ಷತೆಯಲ್ಲಿ ಅಥವಾ ಅವರ ನಿರ್ವಹಣೆಯಲ್ಲಿ ಇಡೀ ವರ್ಷದ ಆರ್ಥಿಕ ಮತ್ತು ಆರ್ಥಿಕೇತರ ಸಮಸ್ಯೆಗಳನ್ನು ಪ್ರಗತಿಗಳನ್ನು ಸಾರ್ವಜನಿಕವಾಗಿ ಪರಿಶೀಲನೆ ಅಥವಾ ಲೆಕ್ಕಪರಿಶೋಧನೆಗೆ ಒಳಪಡಿಸುವ ಸಭೆಯು ಸಾಮಾಜಿಕ ಜಮಾಬಂದಿ ಗ್ರಾಮಸಭೆ ಆಗಿರುತ್ತದೆ.[೧೬]

**ಲೆಕ್ಕ ಲೆಕ್ಕಪರಿಶೋಧನೆ ಮತ್ತು ಸಾಮಾಜಿಕ ಜಮಾಬಂದಿ ಪರಿಕಲ್ಪನೆಯ ಉದ್ದೇಶ ಮತ್ತು ಪ್ರಕ್ರಿಯೆ**

**ಆರ್ಥಿಕ ಲೆಕ್ಕಲೆಕ್ಕಪರಿಶೋಧನೆ**

ನಾಗರಿಕತೆಯ ಆರಂಭಿಕ ಹಂತದಲ್ಲಿ ಲೆಕ್ಕಗಳು ಕಚ್ಚಾ ಮತ್ತು ಕಡಿಮೆ ವ್ಯವಹಾರಗಳು ಇದ್ದ ಕಾರಣ ವ್ಯಕ್ತಿಗಳು ತಮ್ಮ ಲೆಕ್ಕವನ್ನೂ ತಾವೇ ಪರಿಶೀಲಿಸುತ್ತಿದ್ದರು. ರಾಜ್ಯವ್ಯವಸ್ಥೆ ಮತ್ತು ಸಾಂಸ್ಥಿಕ ವ್ಯವಸ್ಥೆ ಆರಂಭವಾಗಿ ಆರ್ಥಿಕ ವ್ಯವಹಾರಗಳು ಹೆಚ್ಚಾಗಿ ಆರಂಭವಾದ ಸಮಯದಿಂದ ಸಾರ್ವಜನಿಕ ಲೆಕ್ಕಗಳ ಪರಿಶೀಲನೆ ಮಾಡುವ ಕ್ರಮ ಬಂದಿತು. ಲೆಕ್ಕಪರಿಶೀಲನಾ ಕಾರ್ಯವನ್ನು ನಿರ್ವಹಿಸುವ ವ್ಯಕ್ತಿಯನ್ನು 'ಆಡಿಟರ್' ಅಥವಾ ಲೆಕ್ಕಲೆಕ್ಕಪರಿಶೋಧಕ ಎಂದು ಕರೆಯುತ್ತಾರೆ ಮತ್ತು ಲೆಕ್ಕ ಪರಿಶೀಲನಾ ಕಾರ್ಯವನ್ನು ಆಡಿಟ್ ಅಥವಾ ಲೆಕ್ಕ ಲೆಕ್ಕಪರಿಶೋಧನೆ ಎಂದು ಕರೆಯಲಾಗುತ್ತದೆ.

## ಸಾಮಾಜಿಕ ಲೆಕ್ಕಲೆಕ್ಕಪರಿಶೋಧನೆ

ಸಾಮಾಜಿಕ ಲೆಕ್ಕಲೆಕ್ಕಪರಿಶೋಧನೆಯು ಆಡಳಿತದಲ್ಲಿ ಹೆಚ್ಚು ಪಾರದರ್ಶತೆ ಮತ್ತು ಉತ್ತರದಾಯಿತ್ವವನ್ನು ತರುತ್ತದೆ. ಮಾಹಿತಿಹಕ್ಕು ಅಧಿನಿಯಮವು ಆಡಳಿತದಲ್ಲಿ ಮುಕ್ತತೆಯನ್ನು ತರುತ್ತದೆ. ಹಾಗೆಯೇ ನಿರ್ಣಯವನ್ನು ಯಾವ ರೀತಿಯ ಪ್ರಕ್ರಿಯೆಯಲ್ಲಿ ಕೈಗೊಳ್ಳಲಾಗಿದೆ ಎಂಬುದನ್ನು ತಿಳಿಯುವ ಹಕ್ಕನ್ನು ಜನತೆಗೆ ನೀಡುತ್ತದೆ. ಯೋಜನೆಗಳನ್ನು ಹೇಗೆ ಅನುಷ್ಠಾನಗೊಳಿಸಲಾಗಿದೆ ತೆರಿಗೆಗಳನ್ನು ನಿರ್ಧರಿಸಲು ಅಳವಡಿಸಿಕೊಂಡಿರುವ ಕ್ರಮ ಯಾವುದು ಮತ್ತು ಅದರ ಫಲಿತದ ಮಟ್ಟವನ್ನು ತಿಳಿಯುವುದು ಹೇಗೆ ಎಂಬು ಅರಿವಾಗುತ್ತದೆ. ಇದರಿಂದ ಪ್ರಜೆಗಳು ತಮಗೆ ನಿಲುಕದೇ ನಿಗೂಢವಾದ ಯಥೇಚ್ಛ ದತ್ತಾಂಶ ಮತ್ತು ಮಾಹಿತಿಯನ್ನು ಪಡೆಯಲು ಹಕ್ಕುಳ್ಳವರಾಗಿದ್ದಾರೆ.

## ಲೆಕ್ಕಲೆಕ್ಕಪರಿಶೋಧನೆಯ ಉದ್ದೇಶ

ಆರ್ಥಿಕ ತಃಖ್ತೆಗಳಲ್ಲಿ ಜಮಾ ಮತ್ತು ವೆಚ್ಚದ ಎಲ್ಲಾ ವ್ಯವಹಾರಗಳನ್ನು ನಿಖರ ಲೆಕ್ಕಕ್ಕೆ ತೆಗೆದುಕೊಳ್ಳಲಾಗಿದೆಯೇ? ಆರ್ಥಿಕ ನೀತಿ ನಿಯಮಗಳಿಗೆ ಅನುಸರವಾಗಿ ನಡೆಯುತ್ತಿದೆಯೇ? ಸಂಸಥೆಯ ಉದ್ದೇಶಿತ ಗುರಿ ಮತ್ತು ಫಲ ಆರ್ಥಿಕ ವ್ಯವಹಾರದಿಯಿಂದ ಸ್ಥಾಪಿಸಲಾಗಿದೆಯೆ?

## ಸಾಮಾಜಿಕ ಲೆಕ್ಕಲೆಕ್ಕಪರಿಶೋಧನೆಯ ಉದ್ದೇಶ

ಗ್ರಾಮಪಂಚಾಯಿತಿಗಳ ಗ್ರಾಮಸಭೆ ಮತ್ತು ವಾರ್ಡ್‌ಸಭೆಗಳ ರಚನೆ ಮತ್ತು ಆಡಳಿತವನ್ನು ಹೆಚ್ಚು ಪಾರದರ್ಶಕಗೊಳಿಸಿ, ಅಭಿವೃದ್ಧಿ ಯೋಜನೆ ಕಾರ್ಯಕ್ರಮಗಳ ಪರಿಣಾಮಕಾರಿ ಅನುಷ್ಠಾನವನ್ನು ಖಚಿತಪಡಿಸಿಕೊಳ್ಳಲು, ಜನತೆಯ ಭಾಗವಹಿಸುವಿಕೆಯನ್ನು ಕಾಯ್ದುಕೊಳ್ಳಲು, ನಿರ್ಣಯ ಕೈಗೊಳ್ಳುವ ಮತ್ತು ಆಡಳಿತ ಪ್ರಕ್ರಿಯೆಯಲ್ಲಿ ಪಾರದರ್ಶಕತೆಯನ್ನು ಹೊಂದಲು ಸಾರ್ವಜನಿಕರಿಗೆ ಮಾಹಿತಿ ಒದಗಿಸಲು ಆಡಳಿತವನ್ನು ಉತ್ತೇಜನಗೊಳಿಸುವ ಉದ್ದೇಶ ಹೊಂದಿದೆ.[೧೭]

## ಲೆಕ್ಕಲೆಕ್ಕಪರಿಶೋಧನಾ ಸಮಿತಿ ರಚನೆ/ಕಾರ್ಯ

ನಿಯಮ ೧೧೪ ಅಧಿನಿಯಮದ ೬೧-ಎ ಪ್ರಕರಣದಂತೆ ಲೆಕ್ಕಲೆಕ್ಕಪರಿಶೋಧನಾ ಸಮಿತಿ ಕನಿಷ್ಠ ೩ ಸದಸ್ಯರ ರಚನೆಯಿಂದ ಕೂಡಿರುತ್ತದೆ. ಕನಿಷ್ಠ ೩ ತಿಂಗಳಿಗೊಮ್ಮೆ ಸಭೆ ಸೇರುವುದು ಮತ್ತು ವಾರ್ಷಿಕ ಲೆಕ್ಕಲೆಕ್ಕಪರಿಶೋಧನೆ ಅಥವಾ ಆಂತರಿಕ ಲೆಕ್ಕ ಲೆಕ್ಕಪರಿಶೋಧನಾ ವರದಿ ಮೇಲೆ ಕೈಗೊಂಡ ಕ್ರಮಗಳ ಪರಿಶೀಲನೆ ಮಾಡುತ್ತದೆ. ಹಿಂದಿನ ವರದಿಗಳಲ್ಲಿ ತೀರುವಳಿಗೆ ಬಾಕಿ ಉಳಿದಿರುವ ಕಂಡಿಕೆಗಳ ಬಗ್ಗೆ ಹಾಗೂ ಸಂದೇಹಾಸ್ಪದ ಮೋಸ ವಂಚನೆಗಳ ಪರಾಮರ್ಶೆಯನ್ನು ಲೆಕ್ಕಲೆಕ್ಕಪರಿಶೋಧನಾ ವರದಿ ಮಾಡುತ್ತದೆ. ಮೇಲೆ ಪರಾಮರ್ಶಿಸಿದ ವಿವರಗಳನ್ನು

ಗ್ರಾಮಪಂಚಾಯಿತಿಗೆ ವರದಿ ಮಾಡುವುದು ಮತ್ತು ಗ್ರಾಮಪಂಚಾಯತಿಯು ಲೆಕ್ಕ ತನಿಖಾ ವರದಿ ಬಗ್ಗೆ ಲೆಕ್ಕಲೆಕ್ಕಪರಿಶೋಧನಾ ಸಮಿತಿ ಪರಾಮರ್ಶಿಸಿದ ವರದಿ ಪರಿಶೀಲನೆ ಮತ್ತು ಕಾರ್ಯ ನಿರ್ವಹಣಾಧಿಕಾರಿಗೆ ಸಲ್ಲಿಸುವುದು.

**ಸಾಮಾಜಿಕ ಲೆಕ್ಕಲೆಕ್ಕಪರಿಶೋಧನೆ ಅಥವಾ ಜಮಾಬಂದಿ ತಂಡದ ರಚನೆ**

ರಾಜ್ಯಮಟ್ಟದಲ್ಲಿ ರಾಜ್ಯ ಸ್ಟೇಟ್ ಸೋಷಿಯಲ್ ಕೋ-ಆರ್ಡಿನೇಟರ್ ಅವರ ಅಧೀನ ಜಿಲ್ಲಾ ಸೋಷಿಯಲ್ ಆಡಿಟರ್‌ಗಳು ನೇಮಕ ಮಾಡಿಕೊಳ್ಳುತ್ತಾರೆ(ಜಿಲ್ಲಾಪಂಚಾಯಿತಿಯ ಅಧ್ಯಕ್ಷರು ಮತ್ತು ಸಿ.ಇ.ಓ. ಸೇರಿ ಜಿಲ್ಲೆಯ ಮೂರು ಗ್ರಾಮಪಂಚಾಯತಿಗಳಲ್ಲಿ ಸಾಮಾಜಿಕ ಜಮಾಬಂದಿ ಸಭೆಗಳನ್ನು ನಡೆಸಬೇಕು). ತಾಲ್ಲೂಕು ಮಟ್ಟದಲ್ಲಿ ತಾಲ್ಲೂಕು ಸೋಷಿಯಲ್ ಆಡಿಟ್ ಕೋ-ಆರ್ಡಿನೇಟರ್ ಇರುತ್ತಾರೆ. ಗ್ರಾಮಮಟ್ಟದಲ್ಲಿ ೩ರಿಂದ ೫ ಜನರ ಸ್ಥಳೀಯ ಸೋಷಿಯಲ್ ಆಡಿಟ್ ಕ್ಷೇತ್ರ ನಿರ್ವಾಹಕರನ್ನು ನೇಮಕ ಮಾಡುತ್ತಾರೆ. ಈ ಸಾಮಾಜಿಕ ಜಮಾಬಂದಿ ತಂಡ ಒಂದು ವರ್ಷಕ್ಕೆ ಆಯ್ಕೆ ಮಾಡಿಕೊಂಡು ನೇಮಕ ಮಾಡುತ್ತಾರೆ.[೧೮]

**ಕರ್ನಾಟಕ ಜಲಾನಯನ ಇಲಾಖೆ**

ಜಲಾನಯನ ಅಭಿವೃದ್ಧಿ ಕಾರ್ಯಕ್ರಮದಲ್ಲಿ ಜನರ ಸಹಭಾಗಿತ್ವ ಹಾಗೂ ಸಮುದಾಯ ಆಧಾರಿತ ಸಂಘಟನೆಗಳು ಅತ್ಯವಶ್ಯಕ. ಜನರ ಸಹಭಾಗಿತ್ವದೊಂದಿಗೆ ಜಲಾನಯನ ಉಪಚಾರ : ಪರಿಣಾಮಕಾರಿ ಹಾಗೂ ಸುಸ್ಥಿರ ಜಲಾಯನ ಅಭಿವೃದ್ಧಿ ಕಾರ್ಯಕ್ರಮಗಳಿಗೆ ಜನರ ಸಹಭಾಗಿತ್ವವು ಒಂದು ಬಹು ಮುಖ್ಯವಾದ ಅಂಶವಾಗಿದೆ. ಜನರನ್ನು ಸಹಭಾಗಿತ್ವಗೊಳಿಸಲು ಸಾಮಾಜಿಕ ಸಂಘಟನೆಯು ಮೂರು ವಿಧಗಳಲ್ಲಿ ಜನರನ್ನು ಸಿದ್ಧಗೊಳಿಸುತ್ತದೆ.

**೧. ಅರಿವು ಮೂಡಿಸುವುದು:** ಗ್ರಾಮಮಟ್ಟದಲ್ಲಿ ಕ್ಷೇತ್ರ ಸರ್ಕಾರೇತರ ಸಂಸ್ಥೆಯ ಸಹಯೋಗದೊಂದಿಗೆ ಅರಿವು ಮೂಡಿಸುವಂತಹ ಅನೇಕ ಚಟುವಟಿಕೆಗಳಾದ ಮನೆ ಮನೆಗೆ ಭೇಟಿ, ಗುಂಪು ಚರ್ಚೆ/ಸಭೆ ಗ್ರಾಮಸಭೆ. ಬೀದಿ ನಾಟಕಗಳು, ಜಾಥ, ಗೋಡೆಬರಹಗಳು, ಹಸಿರು ಹಬ್ಬ, ಜಾನುವಾರು ಆರೋಗ್ಯ ಶಿಬಿರ ವಿಡಿಯೋ ಪ್ರದರ್ಶನ ಸಹಭಾಗಿತ್ವದೊಂದಿಗೆ ಗ್ರಾಮೀಣ ಸಂಪನ್ಮೂಲಗಳ ಅಂದಾಜು ಮಾಡುವಿಕೆ ಮುಂತಾದ ಚಟುವಟಿಕೆಗಳನ್ನು ಏರ್ಪಡಿಸಲಾಗುವುದು.

**೨. ಪ್ರವೇಶದ್ವಾರ ಚಟುವಟಿಕೆ:** ಜಲಾನಯನದ ಅಭಿವೃದ್ಧಿಯಲ್ಲಿ ಜನರ ಭಾಗವಹಿಸುವಿಕೆಗೆ ಪ್ರೇರಣೆ ನೀಡಲು, ಸಮುದಾಯದಲ್ಲಿ ವಿಶ್ವಾಸ ಮೂಡಿಸಿ ಸೌಹಾರ್ದತೆಯನ್ನು ಬೆಳೆಸಲು ಪ್ರಾರಂಭಿಕ ಚಟುವಟಿಕೆಗಳನ್ನು ಕೈಗೊಳ್ಳಲಾಗುವುದು. ಇದರಲ್ಲಿ ಗ್ರಾಮಮಟ್ಟದಲ್ಲಿ ಸಮುದಾಯವು ಅಪೇಕ್ಷಿಸುವ

ಕುಡಿಯುವ ನೀರು ಮತ್ತು ಶೌಚಾಲಯ ವ್ಯವಸ್ಥೆ, ಸಮುದಾಯ ಭವನ, ಶಾಲಾಕಟ್ಟಡ, ಮೇಲ್ವಿಚಾರಣೆ ಮುಂತಾದ ಚಟುವಟಿಕೆಗಳನ್ನು ಹಮ್ಮಿಕೊಂಡು ಜನರ ಭಾಗವಹಿಸುವಿಕೆಯನ್ನು ಉತ್ತಮ ಗೊಳಿಸಲಾಗುವುದು.

**೩. ಸಮುದಾಯ ಆಧಾರಿತ ಸಂಸ್ಥೆಗಳು:** ಪ್ರತಿ ಕಿರು ಜಲಾನಯನದಲ್ಲಿ ಸಮುದಾಯ ಆಧಾರಿತ ಸಂಸ್ಥೆಗಳಾದ ಸ್ವ-ಸಹಾಯ ಗುಂಪು, ಬಳಕೆದಾರರ ಗುಂಪು ಮತ್ತು ಜಲಾನಯನದ ಸಮಿತಿಗಳನ್ನು ರಚಿಸಲಾಗುತ್ತದೆ. ಬಡ ಮತ್ತು ದುರ್ಬಲ ವರ್ಗದ ಜನರು ಒಟ್ಟು ಸೇರಿ ಸ್ವ-ಸಹಾಯ ಗುಂಪುಗಳನ್ನು ರಚಿಸಿರುತ್ತಾರೆ. ಭೂಮಿ ಇರುವ ರೈತರು ಒಟ್ಟು ಸೇರಿ ಬಳಕೆದಾರರ ಗುಂಪು ರಚಿಸಿರುತ್ತಾರೆ. ಜಲಾನಯನ ಸಮಿತಿ ಸ್ವ-ಸಹಾಯ ಸಂಘ ಬಳಕೆದಾರರ ಗುಂಪು ಮತ್ತು ಗ್ರಾಮಪಂಚಾಯತಿ ಸದಸ್ಯರನ್ನು ಒಳಗೊಂಡಿರುತ್ತದೆ.

**ಶಿಕ್ಷಣ ಇಲಾಖೆಯ ಮಧ್ಯಾಹ್ನದ ಬಿಸಿಯೂಟ ಕಾರ್ಯಕ್ರಮದ ಸಾಮಾಜಿಕ ಜಮಾಬಂದಿ ಕಾರ್ಯಾನುಷ್ಠಾನ ವಿಧಾನ**

ಸಾಮಾಜಿಕ ಲೆಕ್ಕಲೆಕ್ಕಪರಿಶೋಧನೆಯು ಕಾರ್ಯಕ್ರಮ ಅನುಷ್ಠಾನವನ್ನು ಮಾತ್ರ ಅಳೆಯುವ ಸಾಧನವಲ್ಲ. ಸಾಮಾಜಿಕ ಜಮಾಬಂದಿ ಉತ್ತಮ ಗುಣಮಟ್ಟ ಮತ್ತು ಪರಿಮಾಣಗಳೊಂದಿಗೆ ಜಾರಿಗೊಳಿಸಲಾಗಿದೆಯೇ ಇಲ್ಲವೆ ಎನ್ನುವ ಅಂಶಗಳನ್ನು ಗಮನದಲ್ಲಿರಿಸಿಕೊಂಡಿರುತ್ತದೆ.

ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳು ಸಾಮಾಜಿಕ ಲೆಕ್ಕಲೆಕ್ಕಪರಿಶೋಧನೆಯ ದಿನಾಂಕ ಪ್ರಕಟಣೆ ಗೊಳಿಸುತ್ತಾರೆ. ಆ ಪ್ರಕಟಣೆ ಮೇರೆಗೆ ಶಾಲಾ ನಿರ್ವಹಣಾ ಸಮಿತಿ, ಶಾಲಾ ಮಕ್ಕಳ ಪೋಷಕರು, ಮಧ್ಯಾಹ್ನ ಬಿಸಿ ಊಟದ ಫಲಾನುಭವಿಗಳು, ಸಾಮಾಜಿಕ ಲೆಕ್ಕಲೆಕ್ಕಪರಿಶೋಧಕ ಸಹ ಸಂಸ್ಥೆಗಳು ಸೇರಿ ಈ ಯೋಜನೆ ಸಾಮಾಜಿಕ ಜಮಾಬಂದಿಯನ್ನು ಜಾರಿಗೆ ತರಲಾಗುತ್ತದೆ.

೧. ಸಾಮಾಜಿಕ ಜಮಾಬಂದಿ ಕಾರ್ಯಕ್ರಮವನ್ನು ಒಂದು ಸಂಸ್ಥೆಯ ಅಧೀನತೆಯಲ್ಲಿ ನಿರ್ವಹಿಸಲಾಗುತ್ತದೆ.

೨. ಶಾಲೆಗಳಿಗೆ ಮಾತ್ರ ಈ ಯೋಜನೆ ಇಲ್ಲಿ ಸಾಮಾಜಿಕ ಲೆಕ್ಕಲೆಕ್ಕಪರಿಶೋಧನೆ ನಡೆಸಲಾಗುತ್ತದೆ.

೩. ಇಲಾಖೆ ಮತ್ತು ಸಹಸಂಬಂಧಿ ಇಲಾಖೆಗಳು ಸೇರಿ ಕಾರ್ಯಕ್ರಮವನ್ನು ಆಯೋಜಿಸುತ್ತವೆ.

೪. ಒಂದು ಜಿಲ್ಲೆಯಲ್ಲಿ ಕನಿಷ್ಠ ೨೦ ಶಾಲೆಗಳಲ್ಲಿ ಸಾಮಾಜಿಕ ಲೆಕ್ಕಲೆಕ್ಕಪರಿಶೋಧನೆ ನಡೆಸಬೇಕಾಗುತ್ತದೆ.

೫. ಸಾಮಾಜಿಕ ಲೆಕ್ಕಲೆಕ್ಕಪರಿಶೋಧನೆಯ ಪೂರ್ವ ತಯಾರಿಗೆ ರಾಜ್ಯಮಟ್ಟದಲ್ಲಿ ಸಭೆಯನ್ನು ನಡೆಸಲಾಗುತ್ತದೆ. ಎಂ.ಎಚ್.ಆರ್.ಡಿ.ಯು ಸೇರಿ ಸಾಮಾಜಿಕ ಜಮಾಬಂದಿ ಅನುಷ್ಠಾನದ

ಅಧಿಕಾರಿಗಳನ್ನು ಸಿದ್ಧಪಡಿಸಲಾಗುತ್ತದೆ. ರಾಜ್ಯ ಸರ್ಕಾರವು ಒಬ್ಬ ನೋಡಲ್ ಅಧಿಕಾರಿಯನ್ನು ನೇಮಿಸುತ್ತದೆ. ಅವರು ಸಾಮಾಜಿಕ ಲೆಕ್ಕಲೆಕ್ಕಪರಿಶೋಧನೆಗೆ ಅವಶ್ಯಕವಾದ ದಾಖಲೆಗಳನ್ನು ಪಡೆದು ಪರಿಶೀಲಿಸಿ, ಸಾಮಾಜಿಕ ಜಮಾಬಂದಿ, ಕೋ-ಆಪರೇಟಿವ್ ಫಂಕ್ಷನ್ ಯೂನಿಟ್‌ಗೆ ನೀಡುತ್ತಾರೆ.

ಬಿಸಿ ಊಟ ಯೋಜನೆ ಸಾಮಾಜಿಕ ಲೆಕ್ಕ ಲೆಕ್ಕಪರಿಶೋಧನೆಯ ಕಾರ್ಯಕ್ರಮ ಪರಿಶೀಲಿಸುವ ದಾಖಲೆಗಳು:

೧. ಶಾಲಾ ಶಿಕ್ಷಕರ ಪೋಷಕರ ಸಮಿತಿ ಸಭೆಯನ್ನು ತಾಲ್ಲೂಕುಗಳಲ್ಲಿ ಕರೆಯುವುದು.

೨. ಗ್ರಾಮಗಳಲ್ಲಿ ಗ್ರಾಮಸಭೆ ಕರೆದು ಅಡುಗೆ ಮಾಡುವವರ ಮತ್ತು ಅಡುಗೆ ಸಹಾಯಕರ ನೇಮಕಕ್ಕೆ ಅನುಮೋದನೆ ದಾಖಲೆಗಳ ಪರಿಶೀಲನೆ .

೩. ಅಡುಗೆ ಕೋಣೆ ಲಭ್ಯತೆ, ದಾಸ್ತಾನು, ಆಡಳಿತಾತ್ಮಕ, ತಾಂತ್ರಿಕ, ಲಭ್ಯತೆಗಳು.

೪. ದಾಸ್ತಾನು ರಿಜಿಸ್ಟ್ರರ್, ಧಾನ್ಯಗಳ ರಿಜಿಸ್ಟರ್

೫. ಬಿಸಿ ಊಟದ ದಾಖಲಾತಿಗಳು.

೬. ಯೋಜನೆಯ ಹಣಕಾಸಿನ ಬ್ಯಾಂಕ್ ಪಾಸ್‌ಬುಕ್.

೭. ಪಾಸ್‌ಬುಕ್ ಮತ್ತು ಜಿಲ್ಲಾ ವಿತರಣೆ.

೮. ಶಾಲೆಯ ಮಕ್ಕಳ ದಾಖಲಾತಿ ರಿಜಿಸ್ಟರ್.

ಬಿಲ್ ಮತ್ತು ಓಚರ್, ಆಹಾರ ಧಾನ್ಯಗಳ ಸೇವೆ, ಸಾಗಾಣಿಕೆಗಳ ಬಿಲ್‌ಗಳ ಪರಿಶೀಲನೆ, ಮಧ್ಯಾಹ್ನ ಬಿಸಿ ಊಟಕ್ಕೆ ಬಿಡುಗಡೆಯಾದ ಅನುದಾನ ಮತ್ತು ಅನುದಾನದ ಬಳಕೆಗಳನ್ನು ಪರಿಶೀಲಿಸುವುದು. ಯೋಜನೆ ಅನುಷ್ಠಾನಕ್ಕಾಗಿ ಆಯೋಜಿಸಿದ ಸಭೆಗಳು ಮತ್ತು ಅವುಗಳ ನಡವಳಿಗಳ ಪರಿಶೀಲಿಸುವುದು.

ಶಿಕ್ಷಕರ ತರಬೇತಿ, ಸಮುದಾಯಗಳ ಜನರು ತಾಲ್ಲೂಕು ಸಾಮಾಜಿಕ ಲೆಕ್ಕಲೆಕ್ಕಪರಿಶೋಧಕರಿಗೆ ಆಯೋಜಿಸಿದ ಸಾಮರ್ಥ್ಯ ಬೆಳವಣಿಗೆ ಕಾರ್ಯಗಳ ವಿವರ, ಮಧ್ಯಾಹ್ನ ಬಿಸಿ ಊಟ ಯೋಜನೆಯ ಅರಿವು ಮೂಡಿಸುವ ಕಾರ್ಯಕ್ರಮಗಳ ವಿವರಗಳನ್ನು ಲೆಕ್ಕಲೆಕ್ಕಪರಿಶೋಧನಾ ಸಮಿತಿಗಳು ಅವರ ಅಧ್ಯಕ್ಷರ ಮತ್ತು ಸದಸ್ಯರ ಕುರಿತಾದ ಮಾಹಿತಿಯನ್ನು ಪಡೆಯುವುದು.

ಜಿಲ್ಲಾಮಟ್ಟದ ಯೋಜನೆ ಅನುಷ್ಠಾನ ಸಭೆಗಳ ವಿವರಗಳು.

ಮಕ್ಕಳಿಗೆ ನೀಡುವ ಆಹಾರ ರುಚಿ ಪರಿಶೀಲನೆ, ಮಕ್ಕಳಿಂದ ಆಹಾರ ಕುರಿತು ಮಾಹಿತಿ.

ಶಾಲೆಯಲ್ಲಿ ನೀಡುವ ಆಹಾರ ಪರಿಕ್ಷಿಸುವುದು, ಅದರ ವರದಿಯನ್ನು ಪಡೆದುಕೊಳ್ಳುವುದು.

ತುರ್ತು ವೈದ್ಯಕೀಯ ಯೋಜನೆ ಕುರಿತಾದ ವಿರಗಳು .

ಪೌಷ್ಟಿಕಾಂಶ ಪರೀಕ್ಷೆ.

ಶಾಲಾ ವರದಿ ಮತ್ತು ಆಹಾರ ಶುದ್ಧತೆ ವರದಿಗಳನ್ನು ಪಡೆಯುವುದು.

ಸಾಮಾಜಿಕ ಲೆಕ್ಕ ಲೆಕ್ಕಪರಿಶೋಧನೆಯ ಫಲಾನುಭವಿಗಳನ್ನು ಗುರುತಿಸುವುದು, ಜಮಾಬಂದಿ ಸಭೆ ತರಬೇತಿಗೊಳಿಸುವುದು.

ಸೋಷಿಯಲ್ ಆಡಿಟ್ ಕೋ-ಆಪರೇಟಿವ್ ಫಂಕ್ಷನ್ ಯೂನಿಟ್ ಸಂಸ್ಥೆಯು ಸ್ಥಳೀಯ ಜನರಿಗೆ ಸಾಮಾಜಿಕ ಜಮಾಬಂದಿಯ ಅರಿವು ಮೂಡಿಸಿ ಸ್ಥಳೀಯ ದಿನಪತ್ರಿಕೆಗಳಲ್ಲಿ ಜಾಹೀರಾತು ನೀಡುತ್ತದೆ. ಗೋಡೆ ಬರಹಗಳ ಮೂಲಕ ಜನರಲ್ಲಿ ಅರಿವು ಮೂಡಿಸುವ ಕೆಲಸವನ್ನು ಎಸ್.ಎ.ಸಿ. ಎಫ್.ಯು. ಸಂಸ್ಥೆ ಮಾಡುತ್ತದೆ.[೧೯]

ಸಾಮಾಜಿಕ ಲೆಕ್ಕಲೆಕ್ಕಪರಿಶೋಧಕರ ತಂಡವು ಸ್ಥಳೀಯ ಜನರ ವಾರ್ಡ್‌ಗಳಿಗೆ ಮತ್ತು ಪಂಚಾಯಿತಿಗಳಿಗೆ ಹೋಗಿ ಈ ಬಿಸಿ ಊಟ ಯೋಜನೆಯ ಫಲಾನುಭವಿಗಳನ್ನು ಭೇಟಿ ಮಾಡಿ ಅವರಿಂದ ಮಾಹಿತಿಯನ್ನು ಪಡೆದು ಎಸ್.ಡಿ.ಎಂ.ಸಿ. ಸದಸ್ಯರನ್ನು ಭೇಟಿ ಮಾಡಿ, ಶಾಲಾ ಮಕ್ಕಳ ಪೋಷಕರನ್ನು ಭೇಟಿ ಮಾಡಿ ಸಾಮಾಜಿಕ ಜಮಾಬಂದಿ ಕಾರ್ಯವನ್ನು ಕುರಿತು ತರಬೇತಿ ನೀಡಿ ಸಾಮಾಜಿಕ ಜಮಾಬಂದಿಯಿಂದ ಆಗುವ ಅನಕೂಲಗಳನ್ನು ತಿಳಿಸಿ ಸಾರ್ವಜನಿಕರು ಮತ್ತು ಫಲಾನುಭವಿಗಳು ಭಾಗವಹಿಸುವಂತೆ ಮಾಡುತ್ತಾರೆ.

ಈ ಕಾರ್ಯಕ್ರಮಗಳ ನಂತರ ಗುಂಪು ಚರ್ಚೆಗಳನ್ನು ಆಯೋಜಿಸಲಾಗುತ್ತದೆ. ಶಾಲಾ ಮಕ್ಕಳು ಮತ್ತು ಪೋಷಕರು ಚರ್ಚೆಯಲ್ಲಿ ಭಾಗವಹಿಸುತ್ತಾರೆ. ಮನೆ ಮನೆಗೆ ಹೋಗಿ ಯೋಜನೆ ಸಫಲತೆ ಕುರಿತು ಮಾಹಿತಿಯನ್ನು ಪಡೆಯುತ್ತಾರೆ. ಶಾಲಾ ಹಂತದಲ್ಲಿ ಸಭೆಗಳನ್ನು ನಿರ್ವಹಿಸಿ ಪೋಷಕರು, ಯೋಜನೆ ಅನುಷ್ಠಾನಗೊಳಿಸುವ ಏಜೆನ್ಸಿಗಳು ಮತ್ತು ಶಾಲಾ ಮಕ್ಕಳು ಸಭೆಯಲ್ಲಿ ಭಾಗವಹಿಸಿ ಸಭೆಯನ್ನು ನಡೆಸಲಾಗುತ್ತದೆ. ಈ ಸಭೆಯಲ್ಲಿ ಕಂಡುಬಂದ ಸಮಸ್ಯೆಗಳನ್ನು ಮತ್ತು ದೋಷಗಳನ್ನು ದೂರುಗಳ ಪಟ್ಟಿ ಮಾಡಿ ಸಾಮಾಜಿಕ ಜಮಾಬಂದಿ ನಡವಳಿಗಳಲ್ಲಿ ಸಭೆಯ ಫಲಿತಗಳನ್ನು ನಮೂದಿಸಲಾಗುತ್ತದೆ.

## ಸಾರ್ವಜನಿಕ ಅಭಿಪ್ರಾಯ

ಬಿಸಿಯೂಟ ಯೋಜನೆಯನ್ನು ಅನುಷ್ಠಾನಗೊಳಿಸುವ ಅಧಿಕಾರಿಗಳು ಮತ್ತು ಸಾಮಾಜಿಕ ಜಮಾಬಂದಿಯ ಎಲ್ಲಾ ಹಂತ ಅಧಿಕಾರಿಗಳು ಸಭೆಯಲ್ಲಿ ಭಾಗವಹಿಸುತ್ತಾರೆ. ಈ ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಸಾರ್ವಜನಿಕರಿಗೆ ಭಾಗವಹಿಸುವ ಅವಕಾಶ ಮತ್ತು ಚರ್ಚಿಸುವ ಅವಕಾಶ ಕಲ್ಪಿಸಲಾಯಿತು. ಸಾರ್ವಜನಿಕರು ಸಭೆಯ ದಾಖಲೆಗಳನ್ನು ಪರಿಶೋಧಿಸುವ ಅವಕಾಶ ನೀಡಲಾಗುತ್ತದೆ. ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಕಂಡುಬಂದ ಸಮಸ್ಯೆಗಳನ್ನು ಪಟ್ಟಿ ಮಾಡಿ ಅವುಗಳಿಗೆ ಪರಿಹಾರಕ್ಕೆ ಸೂಕ್ತ ಸಲಹೆ ಸೂಚನೆಗಳನ್ನು ಸಭೆಯಲ್ಲಿ ಪಡೆಯಲಾಗುತ್ತದೆ.

ಸಾಮಾಜಿಕ ಜಮಾಬಂದಿ ಸಭೆಯ ವರದಿಯನ್ನು ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳಿಗೆ ನೀಡಲಾಗುತ್ತದೆ. ಇವರು ಜಿಲ್ಲಾ ಶಿಕ್ಷಣಾಧಿಕಾರಿಗಳಿಗೆ ವರದಿಯನ್ನು ಸಲ್ಲಿಸುತ್ತಾರೆ. ಇವರು ಜಿಲ್ಲಾಧಿಕಾರಿಯವರಿಗೆ ಬಿಸಿಯೂಟ ಯೋಜನೆ ಅನುಷ್ಠಾನ ಕುರಿತಾದ ವರದಿಯನ್ನು ಅನುಷ್ಠಾನಗೊಳಿಸಲು ಉಂಟಾಗುವ ತೊಂದರೆಗಳ ವಿವರವಾದ ವರದಿಯನ್ನು ನೀಡುತ್ತಾರೆ.

ಕರ್ನಾಟಕ ಸಾಮಾಜಿಕ ಲೆಕ್ಕಲೆಕ್ಕಪರಿಶೋಧನಾ ನಿಯಮಗಳು ೨೦೧೧ ಯೋಜನಾ ಅನುಷ್ಠಾನ

## ಸಾಮಾಜಿಕ ಲೆಕ್ಕಪರಿಶೋಧನಾ ಘಟಕ ರಚನೆ

ಗ್ರಾಮಸಭೆಗಳಿಂದ ಸಾಮಾಜಿಕ ಲೆಕ್ಕಲೆಕ್ಕಪರಿಶೋಧನೆಯ ಅನುಷ್ಠಾನಕ್ಕಾಗಿ ಯೋಗ್ಯವೆಂದು ಭಾವಿಸುವಂಥ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ನೇಮಕ ಮಾಡಿಕೊಳ್ಳುವಂಥ ಅನುಕೂಲದಾರರನ್ನು ಒಳಗೊಂಡ ಒಂದು ಸ್ವತಂತ್ರ ಸಂಘವನ್ನು ರಚಿಸಲಾಗುತ್ತದೆ. ಇಡೀ ಸಾಮಾಜಿಕ ಲೆಕ್ಕಪರಿಶೋಧನಾ ನಿರ್ದೇಶನಾಲಯವು ಸಂಘಗಳ ನೋಂದಣಿ ಅಧಿನಿಯಮ, ೧೯೬೦ ಅಡಿಯಲ್ಲಿ ನೋಂದಾಣಿಯಾಗುವ ಸಮಾಜದ ಉಪ-ವಿಧಿ ಉಪಬಂಧಗಳು, ಭಾರತ ಸರ್ಕಾರ ಹಾಗೂ ಕರ್ನಾಟಕ ಸರ್ಕಾರದಿಂದ ಕಾಲಕಾಲಕ್ಕೆ ಜಾರಿಯಾದ ನಿರ್ದೇಶನಗಳು ಹಾಗೂ ಮಾರ್ಗಸೂಚಿಗಳ ಅಡಿಯಲ್ಲಿ ಕಾರ್ಯ ನಿರ್ವಹಿಸುತ್ತದೆ.

## ಗ್ರಾಮಸಭೆಯ ಸಾಮಾಜಿಕ ಲೆಕ್ಕಪರಿಶೋಧನೆ

ಗ್ರಾಮಪಂಚಾಯಿತಿಯಲ್ಲಿ ಸಾಮಾಜಿಕ ಲೆಕ್ಕಪರಿಶೋಧನೆಯು ೬ ದಿನಗಳ ಕಾಲ ನಡೆಯುತ್ತದೆ.

**ಒಂದನೇ ದಿನ:** ತಾಲ್ಲೂಕು ಸಂಪನ್ಮೂಲ ವ್ಯಕ್ತಿಗಳಿಂದ ಗ್ರಾಮಪಂಚಾಯಿತಿ ಸಂಪನ್ಮೂಲ ವ್ಯಕ್ತಿಗಳಿಗೆ ತರಬೇತಿ ನೀಡಲಾಗುತ್ತದೆ.

**ಎರಡನೇ ದಿನ:** ಗ್ರಾಮಪಂಚಾಯಿತಿ ಸಂಪನ್ಮೂಲ ವ್ಯಕ್ತಿಗಳು ಮನೆಯಿಂದಮನೆಗೆ ಸಮೀಕ್ಷೆಯನ್ನು ನಡೆಸುವುದು ಮತ್ತು ಉದ್ಯೋಗಚೀಟಿಯ ಪ್ರಕಾರ ವಿವರಗಳು ಮತ್ತು ಸಂದಾಯವನ್ನು ಪರಿಶೀಲಿಸು ವುದು ಮತ್ತು ಇತರೆ ಮಾಹಿತಿ ಸಂಗ್ರಹಿಸುವುದು.

**ಮೂರು ಮತ್ತು ನಾಲ್ಕನೇ ದಿನ:** ವಾಸ್ತವವಾಗಿ ಕಾಮಗಾರಿಗಳ ಪರಿವೀಕ್ಷಣೆ, ಗುಣಮಟ್ಟ ವೀಕ್ಷಣೆ ಮತ್ತು ಕಾಮಗಾರಿ ಸ್ಥಳದಲ್ಲಿನ ಸೌಕರ್ಯಗಳನ್ನು ಗಮನಿಸುವುದು.

**ಐದನೇ ದಿನ:** ವರದಿಯನ್ನು ತಯಾರಿಸುವುದು.

**ಆರನೇ ದಿನ:** ಗ್ರಾಮಸಭೆ ಮತ್ತು ಸಾರ್ವಜನಿಕ ವಿಚಾರಣೆ.

**ಸಾಮಾಜಿಕ ಲೆಕ್ಕಪರಿಶೋಧನೆಯನ್ನು ನಡೆಸುವ ಪ್ರಕ್ರಿಯೆ**

೧. ಸಾಮಾಜಿಕ ಲೆಕ್ಕಪರಿಶೋಧನಾ ಘಟಕವು ವರ್ಷದ ಪ್ರಾರಂಭದಲ್ಲಿ ಪ್ರತಿ ಆರು ತಿಂಗಳುಗಳಿಗೊಮ್ಮೆ ಪ್ರತಿಯೊಂದು ಗ್ರಾಮಪಂಚಾಯಿತಿಯಲ್ಲಿ ಕನಿಷ್ಠ ಒಂದು ಸಾಮಾಜಿಕ ಲೆಕ್ಕಪರಿಶೋಧನೆಯನ್ನು ನಡೆಸಲು ವಾರ್ಷಿಕ ವೇಳಾಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು ಮತ್ತು ವೇಳಾಪಟ್ಟಿಯ ಒಂದು ಪ್ರತಿಯನ್ನು ಸೂಕ್ತ ಮಾರ್ಪಾಡುಗಳನ್ನು ಮಾಡಲು ಎಲ್ಲಾ ಜಿಲ್ಲಾ ಕಾರ್ಯಕ್ರಮ ಸಮನ್ವಯಗಾರರಿಗೆ ಕಳುಹಿಸತಕ್ಕದ್ದು, ಸಾಮಾಜಿಕ ಲೆಕ್ಕಪರಿಶೋಧನಾ ಘಟಕವು ನಿಯೋಜಿಸಿದ ಸಂಪನ್ಮೂಲ ವ್ಯಕ್ತಿಗಳು ಈ ಯೋಜನೆಯ ಪ್ರಾಥಮಿಕ ಫಲಾನುಭವಿಗಳೊಂದಿಗೆ ಸಾಮಾಜಿಕ ಲೆಕ್ಕಪರಿಶೋಧನೆಯ ಗ್ರಾಮಸಭೆ ನಡೆಸಲು ಅನುಕೂಲ ಮಾಡಿಕೊಡುವುದಕ್ಕಾಗಿ ಈ ಮುಂದಿನವು ಗಳನ್ನು ಪರಿಶೀಲಿಸತಕ್ಕದ್ದು.

ಹಾಜರಿಪಟ್ಟಿಯಲ್ಲಿ ಹೆಸರುಗಳು, ನಮೂದಾಗಿರುವ ಮಜೂರಿ ಕೋರುವವರನ್ನು ಸಂಪರ್ಕಿ ಸುವುದರ ಮೂಲಕ ನಿರ್ದಿಷ್ಟ ಕಾಲಾವಧಿಯಲ್ಲಿ ಸ್ಥಳ ಮತ್ತು ದಾಖಲೆಗಳ ಆಧಾರದ ಮೇಲೆ ಗುಣಮಟ್ಟ ನಿರ್ಧಾರ ಮತ್ತು ಮಾಡಲಾದ ಕಾಮಗಾರಿಗಳ ಗುಣಮಟ್ಟ.

ಕಾಮಗಾರಿಯ ಸ್ಥಳ ಮತ್ತು ದಾಖಲೆಗಳ ಆಧಾರದ ಮೇಲೆ ಗುಣಮಟ್ಟ ನಿರ್ಧಾರ ಮತ್ತು ಮಾಡಲಾದ ಕಾಮಗಾರಿಗಳ ಗುಣಮಟ್ಟ.

ಹಣಕಾಸು ವರದಿಯ ನೈಜತೆ ಮತ್ತು ವಿಶ್ವಾಸಾರ್ಹತೆಯನ್ನು ಪರಿಶೀಲಿಸಿದಂಥ ನಗದು ಪುಸ್ತಕ, ಬ್ಯಾಂಕು ವಿವರಣೆ ಪಟ್ಟಿ ಮತ್ತು ಇತರೆ ಹಣಕಾಸು ದಾಖಲೆಗಳು.

ಸಂಗ್ರಹಣೆ ಅಂದಾಜು ಮತ್ತು ರೂಪಿಸಿದ ಪ್ರಕ್ರಿಯೆಯ ಪ್ರಕಾರ ಸಂಗ್ರಹಣೆಗಳು ಆರ್ಥಿಕವಾಗಿ ಸೂಕ್ತವಾಗಿಯೇ ಎಂಬುದನ್ನು ಪರೀಕ್ಷಿಸಲು ಸಾಮಗ್ರಿಗಳ ಸಂಗ್ರಹಣೆಗಾಗಿ ಬಳಸಲಾದ ಸರಕು ಪಟ್ಟಿಗಳು, ಬಿಲ್ಲುಗಳು, ವೋಚರುಗಳು ಮತ್ತು ಇತರೆ ಸಂಬಂಧಿತ ದಾಖಲೆಗಳು.

ಈ ಯೋಜನೆಯ ನಿಧಿಯಿಂದ ಅನುಷ್ಠಾನ ಏಜೆನ್ಸಿಗಳು ಮಾಡಿದಂಥ ಯಾವುದೇ ಇತರೆ ಸಂದಾಯಗಳು.

ಸಂಪನ್ಮೂಲ ವ್ಯಕ್ತಿಗಳು ಮತ್ತು ಕಾರ್ಯಕ್ರಮ ಅಧಿಕಾರಿಗಳು ಗ್ರಾಮಸಭೆ ನಡೆಸುವ ಸಾಮಾಜಿಕ ಲೆಕ್ಕಪರಿಶೋಧನೆಯನ್ನು ಕಾರ್ಮಿಕರು ಮತ್ತು ಗ್ರಾಮ ಸಮುದಾಯಗಳಿಗೆ ತಿಳಿಸುವುದು ಮತ್ತ ಅವರು ಪೂರ್ಣವಾಗಿ ಭಾಗಿಯಾಗುವುದನ್ನು ಖಚಿತಪಡಿಸುವುದು.

ಸಾಮಾಜಿಕ ಲೆಕ್ಕಪರಿಶೋಧನೆಯಲ್ಲಿ ಕಂಡುಹಿಡಿದ ಅಂಶಗಳ ಪರಿಶೀಲನಾ ವರದಿಗಳ ಪಾರದರ್ಶಕತೆ ಮತ್ತು ಉತ್ತರದಾಯಿತ್ವಗಳ ಪುನರ್ವಿಮರ್ಶೆ, ಕಾರ್ಮಿಕರ ಹಕ್ಕುಗಳು ಮತ್ತು ಅರ್ಹತೆಗಳ ಈಡೇರಿಕೆ, ನಿಧಿಗಳ ಸೂಕ್ತ ಬಳಕೆ ಬಗ್ಗೆ ಸಾಮಾಜಿಕ ಲೆಕ್ಕಪರಿಶೋಧನಾ ಪ್ರಕ್ರಿಯೆಯನ್ನು ನಡೆಸಲು ಒಂದು ಗ್ರಾಮಸಭೆಯನ್ನು ನಡೆಸುವುದು.

ಮಾಹಿತಿಗಳನ್ನು ಸಂಗ್ರಹಿಸುವುದು ಮತ್ತು ನಿಗದಿಪಡಿಸಲಾದ ನಮೂನೆಯಲ್ಲಿ ಸಿದ್ಧಪಡಿಸಿದ ಮಾಹಿತಿಗಳನ್ನು ಓದುವುದು.

ಸಾಮಾಜಿಕ ಲೆಕ್ಕಪರಿಶೋಧನೆಯ ಅಂತ್ಯದಲ್ಲಿ ಪತ್ತೆಯಾದ ಅಂಶಗಳ ಚರ್ಚೆಗಾಗಿ ಗ್ರಾಮಸಭೆಯಲ್ಲಿ ಮಂಡಿಸುವುದು ಮತ್ತು ಗ್ರಾಮಸಭೆಯಲ್ಲಿ ಸಾರ್ವಜನಿಕ ವಿಚಾರಣೆಗಳನ್ನು ನಡೆಸತಕ್ಕದ್ದು. ಗ್ರಾಮಸಭೆಯ ಪ್ರಕ್ರಿಯೆಯನ್ನು ವೀಡಿಯೋ ಮೂಲಕ ಚಿತ್ರೀಕರಣ ಮಾಡುವುದು.

ಸಾಮಾಜಿಕ ಲೆಕ್ಕಪರಿಶೋಧನಾ ವರದಿಯ ಆಧಾರದ ಮೇಲೆ ತಿದ್ದುಪಡಿ ಕ್ರಮಗಳನ್ನು ಕೈಗೊಳ್ಳುವುದು. ಲೆಕ್ಕಲೆಕ್ಕಪರಿಶೋಧನೆಯು ಸುಲಭವಾಗಿ ನಡೆಯಲು ಸೂಕ್ತವಾತಾವರಣ ನಿರ್ಮಿಸುವುದು ಸಾಮಾಜಿಕ ಲೆಕ್ಕಪರಿಶೋಧನೆ ಮತ್ತು ಸಾರ್ವಜನಿಕ ವಿಚಾರಣೆಯ ಅವಧಿಯಲ್ಲಿ ಪಂಚಾಯಿತಿ ಅಭಿವೃದ್ಧಿ ಅಧಿಕಾರಿ/ಕಾರ್ಯದರ್ಶಿಯು ಉಪಸ್ಥಿತರಿರಲು ಬದ್ಧರಾಗಿರುವುದು. ಸಾಮಾಜಿಕ ಲೆಕ್ಕಪರಿಶೋಧನೆ ಗ್ರಾಮಸಭೆಯಲ್ಲಿ ಕಾರ್ಮಿಕ ಪೂರ್ಣ ಪ್ರಮಾಣದಲ್ಲಿ ಮುಕ್ತವಾಗಿ ಮತ್ತು ನ್ಯಾಯಯುತ ಭಾಗವಹಿಸುವಿಕೆಯನ್ನು ಖಚಿತಪಡಿಸುವುದು.[೨೦]

**ಸಾಮಾಜಿಕ ಲೆಕ್ಕಪರಿಶೋಧನೆಯ ಉಪಯೋಗಗಳು ಮತ್ತು ಸೌಲಭ್ಯಗಳು**

೧. ಸಾಮಾಜಿಕ ಲೆಕ್ಕಪರಿಶೋಧನೆಯನ್ನು ನಡೆಸುವುದಕ್ಕಾಗಿ ಗ್ರಾಮಸಭೆಗಳು ಸಾಮರ್ಥ್ಯಗಳನ್ನು ಹೆಚ್ಚಿಸುವುದು ಮತ್ತು ಈ ಉದ್ದೇಶಕ್ಕಾಗಿ ಗ್ರಾಮ, ಕ್ಷೇತ್ರ, ಜಿಲ್ಲೆ ಮತ್ತು ರಾಜ್ಯಮಟ್ಟದಲ್ಲಿ ಜನರ ಹಕ್ಕುಗಳಿಗಾಗಿ ಹೋರಾಡಲು ಅನುಭವ ಮತ್ತು ಜ್ಞಾನವಿರುವಂಥ ಮುಖ್ಯ ಮಧ್ಯಸ್ಥಗಾರರು ಮತ್ತು ಇತರೆ ನಾಗರಿಕ ಸಂಘಸಂಸ್ಥೆಗಳಿಂದ ತೆಗೆದುಕೊಂಡಂಥ ಸೂಕ್ತ ಸಂಪನ್ಮೂಲ ವ್ಯಕ್ತಿಗಳನ್ನು ಗುರುತಿಸುವುದು. ತರಬೇತಿ ನೀಡುವುದು ಮತ್ತು ನಿಯೋಜಿಸುವುದು.

ಸಾಮಾಜಿಕ ಲೆಕ್ಕಪರಿಶೋಧನಾ ಪ್ರಕ್ರಿಯೆಗಾಗಿ ಸಾಮಾಜಿಕ ಲೆಕ್ಕಪರಿಶೋಧನಾ ವರದಿಯ ನಮೂನೆಗಳು, ಸಂಪನ್ಮೂಲ ಸಾಮಗ್ರಿ ಮಾರ್ಗಸೂಚಿಗಳು ಮತ್ತು ಕೈಪಿಡಿಗಳನ್ನು ಸಿದ್ಧಪಡಿಸುವುದು.

ಅಧಿನಿಯಮದ ಅಡಿಯಲ್ಲಿ ಕಾರ್ಮಿಕರಿಗೆ ಅವರ ಹಕ್ಕುಗಳು ಮತ್ತು ಅರ್ಹತೆಗಳ ಬಗ್ಗೆ ಅರಿವನ್ನು ಮೂಡಿಸುವುದು.

ಪ್ರಾಥಮಿಕ ಫಲಾನುಭವಿಗಳೊಂದಿಗೆ ಕಾಮಗಾರಿ ಸ್ಥಳಗಳು ಮತ್ತು ದಾಖಲೆಗಳನ್ನು ಪರಿಶೀಲಿಸಲು ಸಹಕರಿಸುವುದು.

ಸಾಮಾಜಿಕ ಲೆಕ್ಕಪರಿಶೋಧನಾ ಗ್ರಾಮಸಭೆಗಳಲ್ಲಿ ಸಾಮಾಜಿಕ ಲೆಕ್ಕಪರಿಶೋಧನಾ ವರದಿಗಳನ್ನು ಓದುವುದು. ಯುಕ್ತ ಚರ್ಚೆಯ ನಂತರ ತಿರ್ಮಾನ ತೆಗೆದುಕೊಳ್ಳುವುದು ಮತ್ತು ಸುಗಮವಾಗಿ ಗ್ರಾಮಸಭೆ ನಡೆಯಲು ಅನುವು ಮಾಡುವುದು.

ಸಾಮಾಜಿಕ ಲೆಕ್ಕಪರಿಶೋಧನಾ ವರದಿಗಳನ್ನು ಕ್ರಮಕೈಗೊಂಡ ವರದಿಯೊಂದಿಗೆ ಸಾರ್ವಜನಿಕ ಮಾಹಿತಿಕೋಶದಲ್ಲಿ ಪ್ರಕಟಿಸುವುದು.

**ಸಾಮಾಜಿಕ ಲೆಕ್ಕಪರಿಶೋಧನೆಯ ಅವಧಿ**

ಪ್ರತಿ ಗ್ರಾಮಪಂಚಾಯಿತಿಯಲ್ಲಿ ಕನಿಷ್ಠ ಆರು ತಿಂಗಳಿಗೊಮ್ಮೆ ಈ ನಿಯಮಗಳ ಮೇರೆಗೆ ಸಾಮಾಜಿಕ ಲೆಕ್ಕಪರಿಶೋಧನೆಯು ಅನುಕೂಲ ಮಾಡಿಕೊಡಬೇಕು.

ಏಪ್ರೀಲ್‌ನಿಂದ ಪ್ರಾರಂಭಗೊಂಡು ಸೆಪ್ಟೆಂಬರ್‌ವರೆಗೆ ಇರುವ ಅವಧಿಗಾಗಿ ಆ ಆರ್ಥಿಕ ವರ್ಷದ ಅವಧಿಯಲ್ಲಿ ಭರಿಸಿದ ವೆಚ್ಚವು ಅಕ್ಟೋಬರ್‌ನಿಂದ ಪ್ರಾರಂಭಗೊಂಡು ಮಾರ್ಚ್‌ವರೆಗಿನ ಅವಧಿಯಲ್ಲಿ ನಡೆಸುವ ಸಾಮಾಜಿಕ ಲೆಕ್ಕಪರಿಶೋಧನೆಗೆ ಒಳಪಡತಕ್ಕದ್ದು.

ಅಕ್ಟೋಬರ್‌ನಿಂದ ಪ್ರಾರಂಭಗೊಂಡು ಮಾರ್ಚ್‌ವರೆಗೆ ಇರುವ ಅವಧಿಗಾಗಿ ಆ ಆರ್ಥಿಕ ವರ್ಷದಲ್ಲಿ ಭರಿಸಿದ ವೆಚ್ಚವು ಏಪ್ರಿಲ್‌ನಿಂದ ಪ್ರಾರಂಭಗೊಂಡು ಸೆಪ್ಟೆಂಬರ್‌ವರೆಗಿನ ಅವಧಿಯಲ್ಲಿ ನಡೆಸುವ ಸಾಮಾಜಿಕ ಲೆಕ್ಕಪರಿಶೋಧನೆಗೆ ಒಳಪಡತಕ್ಕದ್ದು.

ಅದಕ್ಕೆ ಅನುಸಾರವಾಗಿ ನಿರ್ದೇಶಕರು ಆರ್ಥಿಕ ವರ್ಷದ ಆರಂಭದಲ್ಲಿಯೇ ಸಾಮಾಜಿಕ ಲೆಕ್ಕಪರಿಶೋಧನೆ ವಾರ್ಷಿಕ ವೇಳಾಪಟ್ಟಿ ಸಿದ್ಧಪಡಿಸುವುದು.[೨೧]

**ಗ್ರಾಮಪಂಚಾಯಿತಿಗಳ "ಪಂಚಾಯಿತಿ ಜಮಾಬಂದಿ"ಯ ಕಾರ್ಯಾನುಷ್ಠಾನ ವಿಧಾನ**

ಜಿಲ್ಲಾ ಪಂಚಾಯಿತಿಯ ಅಧಿಕಾರಿಗಳ ತಂಡವು ಈ ಕಾರ್ಯಕ್ರಮದ ಸಂಪೂರ್ಣ ಉಸ್ತುವಾರಿ ಮತ್ತು ಮೇಲ್ವಿಚಾರಣೆಯನ್ನು ಮಾಡುತ್ತಾರೆ. ತಾಲ್ಲೂಕು ಮಟ್ಟದ ಅಧಿಕಾರಿಗಳ ತಂಡ ಪಂಚಾಯಿತಿ

ಜಮಾಬಂದಿ ಕಾರ್ಯವನ್ನು ಅನುಷ್ಠಾನಗೊಳಿಸಬೇಕು. ಪ್ರತಿ ವರ್ಷ ಆಗಸ್ಟ್ ೧೬ರಿಂದ ಪ್ರಾರಂಭಿಸಿ ಸೆಪ್ಟೆಂಬರ್ ೧೫ರ ಒಳಗೆ ಪಂಚಾಯಿತಿ ಜಮಾಬಂದಿ ಸಭೆ ನಡೆಸಬೇಕು.

ಜಮಾಬಂದಿಯ ದಿನಾಂಕವನ್ನು ಸ್ಥಳೀಯ ದಿನಪತ್ರಿಕೆಯಲ್ಲಿ ಕಡ್ಡಾಯವಾಗಿ ಪ್ರಕಟಿಸಬೇಕು. ಜಿಲ್ಲಾ ವಾರ್ತಾಪತ್ರ ಹಾಗೂ ಕರಪತ್ರಗಳ ಮೂಲಕವೂ ಪ್ರಚುರಪಡಿಸಬೇಕು. ಸಾರ್ವಜನಿಕವಾಗಿ ಜಮಾಬಂದಿಯನ್ನು ನಡೆಸಲು ಗ್ರಾಮಪಂಚಾಯಿತಿ ಕಾರ್ಯದರ್ಶಿ ಎಲ್ಲಾ ಏರ್ಪಾಡುಗಳನ್ನು ಮಾಡುವುದು ಮತ್ತು ಜಮಾಬಂದಿ ಸಂದರ್ಭದಲ್ಲಿ ಗ್ರಾಮಪಂಚಾಯಿತಿಯ ಎಲ್ಲಾ ಸದಸ್ಯರು ಹಾಗೂ ಸಿಬ್ಬಂದಿ ಹಾಜರಿರುವಂತೆ ನೋಡಿಕೊಳ್ಳುವುದು.

ಜಮಾಬಂದಿಯ ದಿನ ಬೆಳಗ್ಗೆ ಪಂಚಾಯಿತಿ ಜಮಾಬಂದಿ ಅಧಿಕಾರಿ ಗ್ರಾಮಪಂಚಾಯಿತಿ ಲೆಕ್ಕಪತ್ರಗಳು ಮತ್ತು ದಾಖಲೆ ಪುಸ್ತಕಗಳು ಇತ್ಯಾದಿಗಳ ಪರಿಶೀಲನೆಯನ್ನು ಸಾರ್ವಜನಿಕವಾಗಿ ನಡೆಸಬೇಕು. ನಿರ್ದಿಷ್ಟವಾದ ಯಾವುದೇ ಕಾಮಗಾರಿ ಅಥವಾ ಆಸ್ತಿ ವಿವರಗಳ ಬಗ್ಗೆ ತಿಳಿದು ಕೊಳ್ಳಲಿಚ್ಛಿಸುವ ಸಾರ್ವಜನಿಕರಿಗೆ ದಾಖಲೆಗಳನ್ನು ನೋಡಲು ಮತ್ತು ಅವುಗಳನ್ನು ಪರಿಶೀಲಿಸಲು ಅವಕಾಶ ಕಲ್ಪಿಸುವುದು. ಗ್ರಾಮಪಂಚಾಯಿತಿ ಕಾರ್ಯದರ್ಶಿ ಖಾತೆಯ ಪುಸ್ತಕದಲ್ಲಿ ಹಿಂದಿನ ವರ್ಷ ಸೇರಿಸಿದ ಅಥವಾ ಕೈಬಿಟ್ಟು ಹೋದ ದಾಖಲೆಗಳನ್ನು ಮತ್ತು ಖಾತಾ ಬದಲಾವಣೆ ಇತ್ಯಾದಿಗಳ ಬಗ್ಗೆ ಇತ್ಯರ್ಥವಾಗದಿರುವ ಅರ್ಜಿಗಳನ್ನು ಸಭೆಯ ಅವಗಾಹನೆಗೆ ತರುವುದು.

**ಗ್ರಾಮಪಂಚಾಯಿತಿ ಜಮಾಬಂದಿ ತಂಡ ಪರಿಶೀಲನ ಕ್ರಮ:** ಗ್ರಾಮಪಂಚಾಯಿತಿ ಸಭೆಗಳ ನಡವಳಿ ಗಳು, ಗ್ರಾಮಸಭೆ ನಡವಳಿಗಳು, ಖಾತೆಗೆ ಸಂಬಂಧಿಸಿದಂತೆ, ಮನೆ ತೆರಿಗೆಯ ನಿಗದಿ ಮತ್ತು ನಿಯಂತ್ರಣ, ನೀರಿನ ತೆರಿಗೆಯ ರಶೀದಿಗಳು, ಸರ್ಕಾರದಿಂದ ಬಿಡುಗಡೆಯಾದ ಅನುದಾನದ ವ್ಯವಹಾರಗಳು, ಪಂಚಾಯಿತಿ ಸಿಬ್ಬಂದಿ ವೇತನ, ವಿದ್ಯುಚ್ಛಕ್ತಿ ಬಿಲ್ಲು, ನೀರು ಸರಬರಾಜು ವ್ಯವಸ್ಥೆಗೆ ಮಾಡಿದ ವೆಚ್ಚಗಳು, ಓಚರ್‌ಗಳು, ಕಾರ್ಯಗತಗೊಳಿಸಿದ ಕಾಮಗಾರಿಗಳ ಬಿಲ್ಲುಗಳು, ಗ್ರಾಮ ಪಂಚಾಯಿತಿಯು ಖರೀದಿಸಿದ ಸಾಮಗ್ರಿ ವಿವರ, ದಾಸ್ತಾನು ಮತ್ತು ವಿತರಣೆ ದಾಖಲೆ, ಅದರಲ್ಲೂ ಟ್ಯೂಬ್‌ಲೈಟ್, ನೀರು ಸರಬರಾಜು ವ್ಯವಸ್ಥೆ ಇತ್ಯಾದಿ ಖಾತಾ ಮತ್ತು ಪರಿವರ್ತನೆ ನೋಂದಣಿ ಪುಸ್ತಕ ಜಮಾಬಂದಿ ಕಡತಗಳನ್ನು ಅಧಿಕಾರಿಯು ಪರಿಶೀಲಿಸುವುದರ ಜೊತೆಗೆ ಆಯ್ದ ಗ್ರಾಮಗಳಿಗೆ ಭೇಟಿ ನೀಡಿ ಅನುಷ್ಠಾನಗೊಂಡಿರುವ ಕಾಮಗಾರಿಗಳ ಗುಣಮಟ್ಟವನ್ನು ಪರಿಶೀಲಿಸುವುದು.

ಗ್ರಾಮಪಂಚಾಯಿತಿ ಕಾರ್ಯದರ್ಶಿಯು ಸಾರ್ವಜನಿಕವಾಗಿ ಜಮಾಬಂದಿಯನ್ನು ನಡೆಸಲು ಎಲ್ಲಾ ಸಿದ್ಧತೆಗಳನ್ನು ಮಾಡಬೇಕು. ಈ ಸಭೆಯಲ್ಲಿ ಪಂಚಾಯಿತಿ ಸದಸ್ಯರು, ನೌಕರರು ಮತ್ತು ಸಾರ್ವಜನಿಕರು ಭಾಗವಹಿಸುವವರು. ಗ್ರಾಮಪಂಚಾಯಿತಿಯ ಲೆಕ್ಕಪತ್ರ ಮತ್ತು ದಾಖಲೆ ಪುಸ್ತಕಗಳನ್ನು ವಾರ್ಷಿಕವಾಗಿ ಸಾರ್ವಜನಿಕ ಪರೀಕ್ಷೆಗೊಳಪಡಿಸುವುದು ಮತ್ತು ಹಿಂದಿನ ವರ್ಷ ಗ್ರಾಮ

ಪಂಚಾಯಿತಿಯು ಕೈಗೊಂಡ ಆಯ್ದ ಕಾಮಗಾರಿಗಳನ್ನು ಪರಿಶೀಲಿಸುವುದು ಈ ಪಂಚಾಯಿತಿ ಜಮಾಬಂದಿಯ ಆಶಯ. ಜಮಾಬಂದಿ ಕಾರ್ಯಕ್ರಮದಲ್ಲಿ ಸಾರ್ವಜನಿಕರಿಂದ ಬರುವ ಯಾವುದೇ ನಿರ್ದಿಷ್ಟ ದೂರುಗಳನ್ನು ಪಂಚಾಯಿತಿ ಜಮಾಬಂದಿ ಅಧಿಕಾರಿಗಳು ಪರಿಶೀಲಿಸಿ ವರದಿಯಲ್ಲಿ ನಮೂದಿಸಬೇಕು. ಜಮಾಬಂದಿ ಅಧಿಕಾರಿಗಳು ಆಯ್ದ ಕಾಮಗಾರಿಗಳನ್ನು ಮತ್ತು ದೂರುಗಳಿರುವ ಕಾಮಗಾರಿಗಳ ತನಿಖೆ ನಡೆಸಬೇಕು. ಪರಿಶೀಲನೆಯ ಕಾರ್ಯ ಆದ ಮೇಲೆ ಜಮಾಬಂದಿ ಅಧಿಕಾರಿಯು ತಾನು ಗಮನಿಸಿದ ಅಂಶಗಳನ್ನೊಳಗೊಂಡ ಒಂದು ವಿವರವಾದ ವರದಿಯನ್ನು ಕಾರ್ಯನಿರ್ವಾಹಕ ಅಧಿಕಾರಿಗೆ ಸಲ್ಲಿಸಬೇಕು.

ಜಮಾಬಂದಿ ಕಾರ್ಯಕ್ರಮದಲ್ಲಿ ಭಾಗವಹಿಸುವ ಅಧಿಕಾರಿಗಳಲ್ಲದೆ ಹಾಜರಿರುವ ಎಲ್ಲಾ ಅಧಿಕಾರಿಗಳು ಸದಸ್ಯರು ಹಾಗೂ ಸಾರ್ವಜನಿಕರ ಸಹಿಯನ್ನು ಪಂಚಾಯಿತಿ ಕಾರ್ಯದರ್ಶಿಯು ಜಮಾಬಂದಿ ಹಾಜರಾತಿ ಪುಸ್ತಕದಲ್ಲಿ ಪಡೆಯಬೇಕು.[೨೧]

## ಕರ್ನಾಟಕ ಸಾಮಾಜಿಕ ಲೆಕ್ಕಪರಿಶೋಧನಾ ನಿಯಮಗಳು, ೨೦೧೧ರ ಯೋಜನಾ ಅನುಷ್ಠಾನ

ಗ್ರಾಮಸಭೆಗಳಿಂದ ಸಾಮಾಜಿಕ ಲೆಕ್ಕಪರಿಶೋಧನೆಯ ಅನುಷ್ಠಾನಕ್ಕಾಗಿ ಯೋಗ್ಯವೆಂದು ಭಾವಿಸುವಂತೆ ನಿಬಂಧನೆಗಳು ಮತ್ತು ಷರತ್ತುಗಳ ಮೇಲೆ ನೇಮಕ ಮಾಡಿಕೊಳ್ಳುವಂಥ ಅನುಕೂಲದಾರರನ್ನು ಒಳಗೊಂಡ ಒಂದು ಸ್ವತಂತ್ರ ಸಂಘವನ್ನು ರಚಿಸಲಾಗುತ್ತದೆ.

### ಸಾಮಾಜಿಕ ಲೆಕ್ಕಪರಿಶೋಧನೆ

೧. ಸಾಮಾಜಿಕ ಲೆಕ್ಕಪರಿಶೋಧನೆಯನ್ನು ನಡೆಸುವುದಕ್ಕಾಗಿ ಗ್ರಾಮಸಭೆಗಳ ಸಾಮರ್ಥ್ಯಗಳನ್ನು ಹೆಚ್ಚಿಸುವುದು.

೨. ಸಾಮಾಜಿಕ ಲೆಕ್ಕಪರಿಶೋಧನಾ ಪ್ರಕ್ರಿಯೆಗಾಗಿ ವರದಿಯ ನಮೂನೆ ಸಂಪನ್ಮೂಲ ಸಾಮಗ್ರಿ, ಮಾರ್ಗಸೂಚಿ ಮತ್ತು ಕೈಪಿಡಿಗಳನ್ನು ಸಿದ್ಧಪಡಿಸುವುದು.

೩. ಕಾರ್ಮಿಕರಿಗೆ ಅವರ ಹಕ್ಕುಗಳ ಮತ್ತು ಅರ್ಹತೆಗಳ ಬಗ್ಗೆ ಅರಿವನ್ನು ಮೂಡಿಸುವುದು.

೪. ಪ್ರಾಥಮಿಕ ಫಲಾನುಭವಿಗಳೊಂದಿಗೆ ಕಾಮಗಾರಿ ಸ್ಥಳಗಳು ಮತ್ತು ದಾಖಲೆಗಳನ್ನು ಪರಿಶೀಲಿಸಲು ಸಹಕರಿಸುವುದು.

೫. ಸಾಮಾಜಿಕ ಲೆಕ್ಕಪರಿಶೋಧನಾ ಗ್ರಾಮಸಭೆಗಳಲ್ಲಿ ವರದಿಗಳನ್ನು ಓದುವುದು, ಮುಕ್ತ ಚರ್ಚೆಯ ನಂತರ ತೀರ್ಮಾನ ತೆಗೆದುಕೊಳ್ಳುವುದು ಮತ್ತೆ ಸುಗಮವಾಗಿ ಗ್ರಾಮಸಭೆ ನಡೆಯಲು ಅನುವು ಮಾಡುವುದು.

## ಸಾಮಾಜಿಕ ಲೆಕ್ಕಪರಿಶೋಧನಾ ಕಾರ್ಯಾನುಷ್ಠಾನ ವಿಧಾನ

ಒಂದನೇ ದಿನ: ತಾಲ್ಲೂಕು ಸಂಪನ್ಮೂಲ ವ್ಯಕ್ತಿಗಳಿಂದ ಗ್ರಾಮಪಂಚಾಯಿತಿ ಸಂಪನ್ಮೂಲ ವ್ಯಕ್ತಿಗಳಿಗೆ ತರಬೇತಿ.

ಎರಡನೇ ದಿನ: ಗ್ರಾಮಪಂಚಾಯಿತಿ ಸಂಪನ್ಮೂಲ ವ್ಯಕ್ತಿಗಳು ಪ್ರತಿಯೊಂದು ಮನೆಯ ಸಮೀಕ್ಷೆಯನ್ನು ನಡೆಸಬೇಕು. ಉದ್ಯೋಗ ಚೀಟಿಯ ಪ್ರಕಾರ ವಿವರ ಮತ್ತು ಸಂದಾಯವನ್ನು ಪರಿಶೀಲಿಸುವುದು ಮತ್ತು ಇತರೆ ಮಾಹಿತಿಯನ್ನು ಸಂಗ್ರಹಿಸುವುದು.

ಮೂರನೇ/ನಾಲ್ಕನೇ ದಿನ: ವಾಸ್ತವವಾಗಿ ಕಾಮಗಾರಿಗಳ ಪರಿವೀಕ್ಷಣೆ ಮತ್ತು ಗುಣಮಟ್ಟ ವೀಕ್ಷಣೆ ಮತ್ತು ಕಾಮಗಾರಿ ಸ್ಥಳದಲ್ಲಿನ ಸೌಕರ್ಯಗಳನ್ನು ಗಮನಿಸುವುದು.

ಐದನೇ ದಿನ: ವರದಿಯನ್ನು ತಯಾರಿಸುವುದು.

ಆರನೇ ದಿನ: ಗ್ರಾಮಸಭೆ ಮತ್ತು ಸಾರ್ವಜನಿಕ ವಿಚಾರಣೆ.

## ಪಂಚಾಯಿತಿ ಜಮಾಬಂದಿ ವರದಿ

ಜಮಾಬಂದಿ ಅಧಿಕಾರಿಯು ಎರಡು ದಿನಗಳ ಅವಧಿಯೊಳಗೆ ವರದಿಯನ್ನು ಮಂಡಿಸಬೇಕು. ಈ ವರದಿಯು ಜಮಾಬಂದಿಯ ಸಮಯದಲ್ಲಿ ಗಮನಿಸಿದ ಅಕ್ರಮಗಳು ಮತ್ತು ಹಣಕಾಸು ದುರುಪಯೋಗ ಇತ್ಯಾದಿಗಳನ್ನು ಒಳಗೊಂಡಿರಬೇಕು. ಗ್ರಾಮಪಂಚಾಯಿತಿಗೆ ಸಂಬಂಧಿಸಿದಂತೆ ಯಾವುದೇ ಗುಣಾತ್ಮಕ ಅಂಶವನ್ನು ಗುರುತಿಸಿ ಗ್ರಾಮಪಂಚಾಯಿತಿ ಕಾರ್ಯದ ಸುಧಾರಣೆಗೆ ರಚನಾತ್ಮಕ ಸಲಹೆಗಳನ್ನು ಹೊಂದಿರುವ ವಿವರವಾದ ಮಾಹಿತಿಯನ್ನು ಹೊಂದಿರಬೇಕು. ಅಲ್ಲದೇ ಪಂಚಾಯತ್ ಜಮಾಬಂದಿಯ ಕಾರ್ಯದ ಸಾರಾಂಶವನ್ನು ಸಿದ್ಧಪಡಿಸಬೇಕು. ಈ ವರದಿಯನ್ನು ಕೆಳಕಂಡಂತೆ ಸಂಬಂಧಪಟ್ಟವರಿಗೆ ಸಲ್ಲಿಸಬೇಕು. ಸಂಬಂಧಪಟ್ಟ ಗ್ರಾಮಪಂಚಾಯಿತಿಗೆ ವರದಿಯನ್ನು ಕಳುಹಿಸಬೇಕು. ಈ ವರದಿಯ ಸಾರಾಂಶವನ್ನು ಪ್ರಮುಖವಾಗಿ ಕಾಣುವಂತೆ ಪ್ರಕಟಣಾ ಫಲಕದಲ್ಲಿ ಹಾಕಬೇಕು. ಅವಶ್ಯವಿದ್ದವರು ಈ ವರದಿಯ ಪೂರ್ಣಪ್ರತಿಯನ್ನು ನಿಯಮದಂತೆ ಶುಲ್ಕ ಪಾವತಿಸಿ ಪಡೆದುಕೊಳ್ಳಬಹುದು. ಗ್ರಾಮಪಂಚಾಯಿತಿ ಕಾರ್ಯದರ್ಶಿ ಈ ವರದಿಯನ್ನು ಗ್ರಾಮಸಭೆಯಲ್ಲಿ ಓದಬೇಕು. ವರದಿಯಲ್ಲಿ ಗಮನಿಸಿದ ಅಂಶಗಳ ಅನ್ವಯ ಸೂಕ್ತ ಕ್ರಮವನ್ನು ೧೫ ದಿನಗಳೊಳಗೆ ತೆಗೆದುಕೊಳ್ಳುವಂತೆ ಕಾರ್ಯನಿರ್ವಾಹಕ ಅಧಿಕಾರಿಯು ಸೂಚನೆ ನೀಡಬೇಕು. ಜಿಲ್ಲಾ ವಾರಪತ್ರಿಕೆಯಲ್ಲಿ ಪ್ರಕಟಿಸಲು ಪ್ರತಿಯನ್ನು ಕಳುಹಿಸಬಹುದು.

## ಜಮಾಬಂದಿ ವರದಿಯ ಮೇಲೆ ಕೈಗೊಳ್ಳಬೇಕಾದ ಅನುಸರಣಾ ಕ್ರಮ

ಕಾರ್ಯನಿರ್ವಾಹಕ ಅಧಿಕಾರಿಯು ಜಮಾಬಂದಿಯ ವರದಿಯನ್ನು ತಾಲ್ಲೂಕು ಪಂಚಾಯತ್‌ನ ಮುಂದಿನ ಸಭೆಯಲ್ಲಿ ಮಂಡಿಸಬೇಕು. ಕಾರ್ಯದರ್ಶಿಗಳ ಸಭೆಯಲ್ಲಿ ಹಾಗೂ ಕಾರ್ಯನಿರ್ವಾಹಕ ಅಧಿಕಾರಿಗಳ ಸಭೆಯಲ್ಲಿ ಜಮಾಬಂದಿಯ ವರದಿಯ ಬಗ್ಗೆ ಪ್ರಸ್ತಾಪಿಸಿ ಪರಿಶೀಲಿಸಬೇಕು. ವರದಿ ಅನ್ವಯ ಅನುಸರಣಾಕ್ರಮಗಳನ್ನು ಕೈಗೊಳ್ಳದಿದ್ದಲ್ಲಿ ಗಂಭೀರವಾಗಿ ಪರಿಗಣಿಸಿ ಶಿಸ್ತುಕ್ರಮ ಜರುಗಿಸಬೇಕು.

## ಜಮಾಬಂದಿ ನಿರ್ವಹಣೆಯಲ್ಲಿ ಹಿರಿಯ ಅಧಿಕಾರಿಗಳ ಕರ್ತವ್ಯ

ಜಿಲ್ಲಾಪಂಚಾಯಿತಿ ಮುಖ್ಯ ಕಾರ್ಯನಿರ್ವಾಹಕ ಅಧಿಕಾರಿ ಉಪಕಾರ್ಯದರ್ಶಿ ಹಾಗೂ ಸಹಾಯಕ ಕಾರ್ಯದರ್ಶಿಯವರು ಪಂಚಾಯತ್ ಜಮಾಬಂದಿಯನ್ನು ತಾಲ್ಲೂಕಿನ ಕನಿಷ್ಠ ಎರಡು ಗ್ರಾಮಪಂಚಾಯಿತಿಗಳಲ್ಲಿ ನಡೆಸಬೇಕು.

## ಸಾಮಾಜಿಕ ಲೆಕ್ಕಪರಿಶೋಧನೆಗೆ ಸಂಬಂಧಿಸಿದಂತೆ ಕೆಲವು ವ್ಯಕ್ತಿಗಳ ಹೊಣೆ

ಕಾರ್ಯಕ್ರಮ ಅಧಿಕಾರಿಯು ಉದ್ಯೋಗ ಭೇಟಿ ರಿಜಿಸ್ಟರ್, ಉದ್ಯೋಗ ರಿಜಿಸ್ಟರ್, ಕಾಮಗಾರಿ ರಿಜಿಸ್ಟರ್, ಗ್ರಾಮಸಭೆ ನಿರ್ಣಯ, ಮಂಜೂರಾತಿಯ ಪ್ರತಿಗಳು(ಆಡಳಿತಾತ್ಮಕ ಅಥವಾ ತಾಂತ್ರಿಕ ಅಥವಾ ಹಣಕಾಸು), ಕಾಮಗಾರಿ ಅಂದಾಜುಗಳು, ಕಾಮಗಾರಿ ಆರಂಭ, ಆದೇಶ ನೀಡಿದ ಹಾಜರಿ ಪಟ್ಟಿ ಮತ್ತು ಸ್ವೀಕೃತಿ ಪುಸ್ತಕ, ಮಜೂರಿ ಸಂದಾಯದ ಪುಸ್ತಕ ಮತ್ತು ಆದೇಶ, ಸಾಮಗ್ರಿಗಳು ಬಿಲ್ಲುಗಳು ಮತ್ತು ವೋಚರ್‌ಗಳು(ಪ್ರತಿ ಕಾಮಗಾರಿಗಳ), ಕಾಮಗಾರಿ ಅಳತೆ ಪುಸ್ತಕಗಳು(ಪ್ರತಿ ಕಾಮಗಾರಿಗಳ), ಆಸ್ತಿ ಪುಸ್ತಕ, ಹಿಂದಿನ ಸಾಮಾಜಿಕ ಪರಿಶೋಧನೆಗಳ ಮೇಲೆ ಕೈಗೊಂಡ ಕ್ರಮದ ವರದಿ, ಕುಂದುಕೊರತೆ ಅಥವಾ ದೂರುಗಳ ರಿಜಿಸ್ಟರುಗಳ ಅನುಷ್ಠಾನ ಏಜೆನ್ಸಿಗಳ ಎಲ್ಲಾ ಅಗತ್ಯ ಮಾಹಿತಿ ಮತ್ತು ದಾಖಲೆಗಳು, ಸಾಮಾಜಿಕ ಲೆಕ್ಕಪರಿಶೋಧನಾ ಘಟಕವು ಸಾಮಾಜಿಕ ಲೆಕ್ಕಪರಿಶೋಧನಾ ಪ್ರಕ್ರಿಯೆಯನ್ನು ನಡೆಸಲು ಅಗತ್ಯವಿರುವಂಥ ಯಾವುದೇ ಇತರೆ ದಸ್ತಾವೇಜುಗಳು ಅಗತ್ಯ ನಮೂನೆಗಳಲ್ಲಿ ಸೂಕ್ತವಾಗಿ ತಾಳೆ ಹೊಂದುತ್ತವೆಯೇ, ಅವುಗಳನ್ನು ಛಾಯಾ ಪ್ರತಿಗಳೊಂದಿಗೆ ಸಾಮಾಜಿಕ ಲೆಕ್ಕಪರಿಶೋಧನೆಯನ್ನು ನಡೆಸುವ ಗ್ರಾಮಸಭೆಯ ನಿಗದಿತ ಸಭೆಯ ದಿನಾಂಕಕ್ಕೆ ಕನಿಷ್ಠ ಹದಿನೈದು ದಿನಗಳು ಮುಂಚಿತವಾಗಿಯೇ ಸಾಮಾಜಿಕ ಲೆಕ್ಕಪರಿಶೋಧನಾ ಘಟಕಕ್ಕೆ ನೀಡಲಾಗಿದೆಯೇ ಎಂಬುದನ್ನು ದೃಢಪಡಿಸುವುದು.

(೧)ನೇ ಉಪಪ್ರಕರಣದಲ್ಲಿ ಉಲ್ಲೇಖಿಸಲಾದ ಮಾಹಿತಿಯು ಅದೇ ಸಮಯಕ್ಕೆ ಸಾರ್ವಜನಿಕ ರಿಗೆ ಲಭ್ಯವಾಗತಕ್ಕದ್ದು ಮತ್ತು ಛಾಯಾಪ್ರತಿಗಳು ನಾಮಮಾತ್ರ ವೆಚ್ಚಕ್ಕೆ ಲಭ್ಯವಾಗತಕ್ಕದ್ದು. ಪ್ರತಿ

ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿ ಅಥವಾ ಅವರ ಪರವಾಗಿ ಯಾವುದೇ ಅಧಿಕಾರಿಯು ಕಾರ್ಯಕ್ರಮ ಅಧಿಕಾರಿಯ ಮೂಲಕ ಅನುಷ್ಠಾನ ಏಜೆನ್ಸಿಗಳಿಂದ ಸಾಮಾಜಿಕ ಲೆಕ್ಕಪರಿಶೋಧನೆ ನಡೆಸಲು ಎಲ್ಲಾ ದಾಖಲೆಗಳನ್ನು ಸಾಮಾಜಿಕ ಲೆಕ್ಕಪರಿಶೋಧನಾ ಘಟಕಕ್ಕೆ ಒದಗಿಸಲಾಗಿದೆಯೇ ಎಂಬುದನ್ನು ಖಚಿತಪಡಿಸಿಕೊಳ್ಳತಕ್ಕದ್ದು. ಸಾಮಾಜಿಕ ಲೆಕ್ಕಪರಿಶೋಧನಾ ವರದಿಯ ಮೇಲೆ ಸರಿಯಾದ ಕ್ರಮ ತೆಗೆದುಕೊಳ್ಳಲಾಗಿದೆಯೇ ಎಂಬುದನ್ನು ಖಚಿತಪಡಿಸಿಕೊಳ್ಳುವುದು. ಹಣ ದುರುಪಯೋಗವಾದ ಅಥವಾ ಅನುಚಿತವಾಗಿ ಬಳಸಿದ ಮೊತ್ತವನ್ನು ವಸೂಲಿ ಮಾಡುವುದಕ್ಕೆ ಕ್ರಮಗಳನ್ನು ತೆಗೆದುಕೊಳ್ಳುವುದು ಮತ್ತು ಹಾಗೆ ವಸೂಲಿ ಮಾಡಲಾದ ಮೊತ್ತಕ್ಕಾಗಿ ಹಿಂಬರಹ ಅಥವಾ ಸ್ವೀಕೃತಿಯನ್ನು ನೀಡತಕ್ಕದ್ದು. ದುರುಪಯೋಗವಾಗಿದೆ ಎಂದು ಕಂಡುಬಂದ ಮಜೂರಿಗಳನ್ನು ಮತ್ತು ಮೊತ್ತವನ್ನು ವಸೂಲಿ ಮಾಡಿದ ಏಳು ದಿನಗಳ ಒಳಗೆ ಮಂಜೂರು ಕೋರುವವರಿಗೆ ನೀಡತಕ್ಕದ್ದು. ಸಾಮಾಜಿಕ ಲೆಕ್ಕಪರಿಶೋಧನಾ ಪ್ರಕ್ರಿಯೆಗಳ ಅವಧಿಯಲ್ಲಿ ವಸೂಲಾದ ಮೊತ್ತಕ್ಕಾಗಿ ಪ್ರತ್ಯೇಕ ಖಾತೆಯನ್ನು ನಿರ್ವಹಿಸಬೇಕು. ಈ ಅಧಿನಿಯಮದ ಮೇರೆಗೆ ಯೋಜನೆಗಳಿಗೆ ಮೀಸಲಿರಿಸಿದ ಮೊತ್ತವನ್ನು ದುರ್ಬಳಕೆ ಮಾಡಿದ ಅಥವಾ ದುರುಪಯೋಗ ಮಾಡಿದ ವ್ಯಕ್ತಿಗಳ ಅಥವಾ ಸಮೂಹಗಳ ವಿರುದ್ಧ ಸೂಕ್ತ ಕ್ರಮವನ್ನು ತೆಗೆದುಕೊಳ್ಳಲಾಗಿದೆಯೇ ಎಂಬುದನ್ನು ಖಚಿತಪಡಿಸತಕ್ಕದ್ದು.''

**ಸಾಮಾಜಿಕ ಲೆಕ್ಕಪರಿಶೋಧನೆಯ ಕಾರ್ಯಾನುಷ್ಠಾನ ವಿಧಾನ**

೧. ಸಾಮಾಜಿಕ ಲೆಕ್ಕಪರಿಶೋಧನಾ ಘಟಕವು ವರ್ಷದ ಪ್ರಾರಂಭದಲ್ಲಿ ಪ್ರತಿ ಆರು ತಿಂಗಳುಗಳಿಗೊಮ್ಮೆ ಪ್ರತಿಯೊಂದು ಗ್ರಾಮಪಂಚಾಯಿತಿಗಳಲ್ಲಿ ಕನಿಷ್ಠ ಒಂದು ಸಾಮಾಜಿಕ ಲೆಕ್ಕಪರಿಶೋಧನೆಯನ್ನು ನಡೆಸಲು ವಾರ್ಷಿಕ ವೇಳಾಪಟ್ಟಿಯನ್ನು ಸಿದ್ಧಪಡಿಸತಕ್ಕದ್ದು ಮತ್ತು ವೇಳಾಪಟ್ಟಿಯ ಒಂದು ಪ್ರತಿಯನ್ನು ಸೂಕ್ತ ಏರ್ಪಾಡುಗಳನ್ನು ಮಾಡಲು ಎಲ್ಲಾ ಜಿಲ್ಲಾ ಕಾರ್ಯಕ್ರಮ ಸಮನ್ವಯಗಾರರಿಗೆ ಕಳುಹಿಸತಕ್ಕದ್ದು.

೨. ಹಾಜರಾತಿ ಪಟ್ಟಿಯಲ್ಲಿ ಹೆಸರುಗಳು ನಮೂದಾಗಿರುವ ಮಜೂರಿ ಕೋರುವವರನ್ನು ಸಂಪರ್ಕಿಸುವುದರ ಮೂಲಕ ನಿರ್ದಿಷ್ಟ ಕಾಲಾವಧಿಯಲ್ಲಿ ಮಾಡಿದ ಹಾಜರಿ ಪಟ್ಟಿ ನಮೂದು ಮತ್ತು ಸಂದಾಯಗಳು.

೩. ಕಾಮಗಾರಿಯ ಸ್ಥಳ ಮತ್ತು ದಾಖಲೆಗಳ ಆಧಾರದ ಮೇಲೆ ಗುಣಮಟ್ಟದ ನಿರ್ಧಾರ ಮತ್ತು ಮಾಡಲಾದ ಕಾಮಗಾರಿಗಳ ಗುಣಮಟ್ಟ.

೪. ಹಣಕಾಸು ವರದಿಯ ನೈಜತೆ ಮತ್ತು ವಿಶ್ವಾಸಾರ್ಹತೆಯನ್ನು ಪರಿಶೀಲಿಸದಂತೆ ನಗದು ಪುಸ್ತಕ ಬ್ಯಾಂಕು ವಿವರ ಪಟ್ಟಿ ಮತ್ತು ಇತರೆ ಹಣಕಾಸು ದಾಖಲೆಗಳು.

೫. ಸಂಗ್ರಹಣೆ ಅಂದಾಜು ಮತ್ತು ರೂಪಿಸಿದ ಪ್ರಕ್ರಿಯೆ ಪ್ರಕಾರ ಸಂಗ್ರಹಣೆಗಳು ಮತ್ತು ಅವು ಆರ್ಥಿಕವಾಗಿ ಸೂಕ್ತವಾಗಿವೆಯೇ ಎಂಬುದನ್ನು ಪರೀಕ್ಷಿಸಲು ಸಾಮಗ್ರಿಗಳ ಸಂಗ್ರಹಣೆಗಾಗಿ ಬಳಸಿದ ಸರಕು ಪಟ್ಟಿಗಳು, ಬಿಲ್ಲುಗಳು, ವೋಚರುಗಳು ಮತ್ತು ಇತರೆ ಸಂಬಂಧಿತ ದಾಖಲೆಗಳು.

೬. ಸಂಪನ್ಮೂಲ ವ್ಯಕ್ತಿಗಳು ಮತ್ತು ಕಾರ್ಯಕ್ರಮ ಅಧಿಕಾರಿಗಳು ಗ್ರಾಮಸಭೆ ನಡೆಸುವ ಸಾಮಾಜಿಕ ಲೆಕ್ಕಪರಿಶೋಧನೆಯನ್ನು ಕಾರ್ಮಿಕರು ಮತ್ತು ಗ್ರಾಮಸಮುದಾಯಗಳಿಗೆ ಯತ್ನಿಸುವುದು ಮತ್ತು ಅವರು ಪೂರ್ಣವಾಗಿ ಭಾಗಿಯಾಗುವುದನ್ನು ಖಚಿತಪಡಿಸುವುದು.

೭. ಸಾಮಾಜಿಕ ಲೆಕ್ಕಪರಿಶೋಧನೆಯಲ್ಲಿ ಕಂಡುಹಿಡಿದ ಅಂಶಗಳ ಪರಿಶೀಲನೆ, ವರದಿಗಳ ಪಾರದರ್ಶಕತೆ ಮತ್ತು ಉತ್ತರದಾಯಿತ್ವಗಳ ಪುನರ್ವಿಮರ್ಶೆ, ಕಾರ್ಮಿಕ ಹಕ್ಕುಗಳು ಮತ್ತು ಅರ್ಹತೆಗಳ ಈಡೇರಿಕೆ, ನಿಧಿಗಳ ಸೂಕ್ತ ಬಳಕೆ ಬಗ್ಗೆ ಸಾಮಾಜಿಕ ಲೆಕ್ಕಪರಿಶೋಧನಾ ಪ್ರಕ್ರಿಯೆಯನ್ನು ನಡೆಸಲು ಒಂದು ಗ್ರಾಮಸಭೆಯನ್ನು ನಡೆಸುವುದು.

೮. ಮಾಹಿತಿಗಳನ್ನು ಸಂಗ್ರಹಿಸುವುದು ಮತ್ತು ನಿಗದಿಪಡಿಸಲಾದ ನಮೂನೆಯಲ್ಲಿ ಸಿದ್ಧಪಡಿಸಿದ ಮಾಹಿತಿಗಳನ್ನು ಓದುವುದು.

**ಸಾಮಾಜಿಕ ಲೆಕ್ಕಪರಿಶೋಧನೆಯ ಅವಧಿ**

ಅಧಿನಿಯಮದ ಅಡಿಯಲ್ಲಿ ತೆಗೆದುಕೊಂಡ ಕಾಮಗಾರಿಗಳನ್ನು ಪ್ರತಿ ಗ್ರಾಮಪಂಚಾಯಿತಿಯಲ್ಲಿ ಕನಿಷ್ಠ ಆರು ತಿಂಗಳಿಗೊಮ್ಮೆ ಈ ನಿಯಮಗಳ ಮೇರೆಗೆ ನಿಗದಿಪಡಿಸಿದ ರೀತಿಯಲ್ಲಿ ನಿರ್ವಹಿಸಲು ಸಾಮಾಜಿಕ ಲೆಕ್ಕಪರಿಶೋಧನೆಯು ಅನುಕೂಲ ಮಾಡಿಕೊಡುತ್ತದೆ.

೧. ಏಪ್ರಿಲ್‌ನಿಂದ ಪ್ರಾರಂಭಗೊಂಡು ಸೆಪ್ಟೆಂಬರ್‌ವರೆಗೆ ಇರುವ ಅವಧಿಗಾಗಿ ಆ ಆರ್ಥಿಕ ವರ್ಷದಲ್ಲಿ ಭರಿಸಿದ ವೆಚ್ಚವು ಅಕ್ಟೋಬರ್‌ನಿಂದ ಪ್ರಾರಂಭಗೊಂಡು ಮಾರ್ಚ್‌ವರೆಗಿನ ಅವಧಿಯು ಸಾಮಾಜಿಕ ಲೆಕ್ಕಪರಿಶೋಧನೆ ಒಳಪಡತಕ್ಕದ್ದು.

೨. ಅಕ್ಟೋಬರ್‌ನಿಂದ ಪ್ರಾರಂಭಗೊಂಡು ಮಾರ್ಚ್‌ವರೆಗೆ ಇರುವ ಅವಧಿಗಾಗಿ ಆ ಆರ್ಥಿಕ ವರ್ಷದಲ್ಲಿ ಭರಿಸಿದ ವೆಚ್ಚವು ಏಪ್ರಿಲ್‌ನಿಂದ ಪ್ರಾರಂಭಗೊಂಡು ಸೆಪ್ಟಂಬರ್‌ವರೆಗಿನ ಅವಧಿಯಲ್ಲಿ ನಡೆಸುವ ಸಾಮಾಜಿಕ ಲೆಕ್ಕಲೆಕ್ಕಪರಿಶೋಧನೆಗೆ ಒಳಪಡತಕ್ಕದ್ದು. ಸಾಮಾಜಿಕ ಲೆಕ್ಕಪರಿಶೋಧನೆಯ ಅಂತ್ಯದಲ್ಲಿ ಪತ್ತೆಯಾದ ಅಂಶಗಳ ಚರ್ಚೆಗಾಗಿ ಗ್ರಾಮಸಭೆಯಲ್ಲಿ ಮಂಡಿಸುವುದು. ಗ್ರಾಮಸಭೆಯಲ್ಲಿ ಸಾರ್ವಜನಿಕ ವಿಚಾರಣೆಗಳನ್ನು ನಡೆಸತಕ್ಕದ್ದು. ಗ್ರಾಮಸಭೆಯ ಪ್ರಕ್ರಿಯೆಯನ್ನು ವೀಡಿಯೊ ಮೂಲಕ ಚಿತ್ರೀಕರಣ ಮಾಡುವುದು.

ಪಂಚಾಯತ್ ಜಮಾಬಂದಿ ತಂಡವು ಪರಿಶೀಲಿಸಬೇಕಾದ ದಾಖಲೆಗಳು ಮತ್ತು ವ್ಯವಹಾರಗಳು ಆಸ್ತಿ ತೆರಿಗೆ ಫಾರಂ ೧೨ನ್ನು ಪರಿಶೀಲನೆ(ಕ್ರಾಸ್‌ಚೆಕ್) ಮಾಡುವುದು, ತೆರಿಗೆ ಪಾವತಿ ಮಾಡದವರ ವಿವರಗಳು, ರಸೀದಿ ಪುಸ್ತಕ ಸೂಕ್ತ ಕ್ರಮಸಂಖ್ಯೆಯೊಂದಿಗೆ ನೀಡಲ್ಪಟ್ಟಿದೆಯೇ? ರಸೀದಿ ಪುಸ್ತಕಗಳ ದಾಸ್ತಾನು ದಾಖಲೆ ಇದೆಯೇ? ದಿನವಹಿ ಪುಸ್ತಕ ಮತ್ತು ನಗದು ಪುಸ್ತಕ ದಾಖಲೆ ಹೊಂದಾಣಿಕೆ ಆಗುತ್ತಿವೆಯೇ? ಜಮಾ ದಾಖಲೆ ಪುಸ್ತಕದಲ್ಲಿ ಸಂಗ್ರಹಿಸಿದ ತೆರಿಗೆ ನಿಯತಕಾಲಿಕವಾಗಿ ಜಮಾ ಮಾಡಲ್ಪಟ್ಟಿದೆಯೇ ಎಂಬ ವಿಷಯಗಳನ್ನು ಪರಿಶೀಲಿಸಬೇಕು. ಪರವಾನಗಿ ಶುಲ್ಕ ಉಪಕರಣ (ಸೆಸ್) ನಿಯಮಾನುಸಾರ ಪರವಾನಗಿಗಳನ್ನು ನೀಡಲಾಗಿದೆಯೇ ಎಂಬುದನ್ನು, ಪರವಾನಗಿ ದಾಖಲೆ ಪುಸ್ತಕಗಳನ್ನು ಇಡಲಾಗಿದೆಯೇ ಮತ್ತು ಅದನ್ನು ಕಾಲಕ್ಕೆ ಸಮೀಕರಿಸಿದ ಕುರಿತು ಮತ್ತು ಸಂಗ್ರಹಿಸಿದ ಉಪಕರಣಗಳ(ಸೆಸ್) ಹಣವನ್ನು ಕ್ರಮವಾಗಿ ಜಮಾ ಮಾಡಲಾಗಿದೆಯೇ ಎಂಬುದನ್ನು ಪರಿಶೀಲಿಸಿ ನಂತರ ಬೇಡಿಕೆ, ವಸೂಲಿ, ಉಳಿಕೆ(ಡಿಸಿಬಿ) ವಸೂಲಿ ಶೇಕಡ ಮತ್ತು ತೃಪ್ತಿಕರ ಇದೆಯೇ ಎಂಬುದನ್ನು ನೋಡುವುದು.[೨೩]

### ಆಸ್ತಿ ದಾಖಲೆಗಳ ಪರಿಶೀಲನೆ

ಖಾತಾ(ಆಸ್ತಿ) ಬದಲಾವಣೆ ಇತ್ಯಾದಿಗಳ ಸಂಬಂಧ ಇತ್ಯರ್ಥವಾಗದಿರುವ ಅರ್ಜಿಗಳ ಸಂಖ್ಯೆ ಖಾತಾ(ಆಸ್ತಿ) ಬದಲಾವಣೆಗೆ ಸೂಕ್ತ ಕ್ರಮವನ್ನು ಅನುಸರಿಸಲಾಗಿದೆಯೇ ಮತ್ತು ಖಾತಾ (ಆಸ್ತಿ) ದಾಖಲೆ ಪುಸ್ತಕ ಮತ್ತು ಪರಿವರ್ತನೆ(ಮ್ಯುಟೇಶನ್) ದಾಖಲೆ ಪುಸ್ತಕಗಳು, ದಾಖಲೆಗಳ ಹೊಂದಾಣಿಕೆ ಮಾಡಲಾಗಿದೆಯೇ? ಸಂಪೂರ್ಣ ಗ್ರಾಮೀಣ ರೋಜ್‌ಗಾರ್ ಯೋಜನೆ ಸರ್ಕಾರದಿಂದ ಅನುದಾನ ಬಂದಿದ್ದು ಯಾವಾಗ? ಪಾಸ್‌ಬುಕ್ ದಾಖಲೆಗಳು ಕ್ರಿಯಾಯೋಜನೆಗೆ ಅಂಗೀಕರಿಸಲ್ಪಟ್ಟಿದೆಯೇ? ಹಾಗಿದ್ದರೆ ಯಾವಾಗ ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡಕ್ಕೆ ಸಂಬಂಧಪಟ್ಟ ಅನುದಾನವನ್ನು ಪ್ರತ್ಯೇಕವಾಗಿ ತೆಗೆದಿರಿಸಲಾಗಿದೆಯೇ ಎಂಬ ಅಂಶಗಳನ್ನು ಪರಿಶೀಲಿಸುವುದು.

೧೧ನೇ ಹಣಕಾಸಿನ ಆಯೋಗದ ಅನುದಾನ ಬಂದಿದೆಯೇ? ಸರ್ಕಾರದಿಂದ ಅನುದಾನ ಬಂದಿದ್ದು ಯಾವಾಗ? ಪಾಸ್‌ಬುಕ್ ದಾಖಲೆಗಳು ಕ್ರಿಯಾಯೋಜನೆಗೆ ಅಂಗೀಕರಿಸಲ್ಪಟ್ಟಿದೆಯೇ? ಹಾಗಿದ್ದರೆ ಯಾವಾಗ? ಪಂಚಾಯತ್ ದಾಖಲೆಗಳು? ಆಸ್ತಿ ದಾಖಲೆ ಪುಸ್ತಕ, ಇಡಲಾಗಿದೆಯೇ? ಬಿಪಿಎಲ್ ಪಟ್ಟಿ ಇಡಲಾಗಿದೆಯೇ? ಮನೆ/ನಿವೇಶನ ಇಲ್ಲದವರ ವಿವರಗಳನ್ನು ಇಡಲಾಗಿದೆಯೇ? ದಾಸ್ತಾನು ಪುಸ್ತಕಗಳನ್ನು ಇಡಲಾಗಿದೆಯೇ? ವಿತರಣಾ ದಾಖಲೆ ಪುಸ್ತಕ ವೇತನ ವಿದ್ಯುಚ್ಛಕ್ತಿ ಬಿಲ್ಲು ಇತ್ಯಾದಿಗಳಿಗೆ ಸಂಬಂಧಿಸಿದ ಬೇರೆ ಬೇರೆ ಓಚರುಗಳನ್ನು ಪರಿಶೀಲನೆಗೆ ಒಳಪಡಿಸುವುದು.

## ಸಾಮಾಜಿಕ ಲೆಕ್ಕಪರಿಶೋಧನೆಯ ತದನಂತರ ಪ್ರಕ್ರಿಯೆಗಳು

ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಅಧಿನಿಯಮದ ಪ್ರಕರಣ ಸಂ.೧೪(೩)(ಇ) ಮತ್ತು ೧೫(೫)ಡಿ ಪ್ರಕಾರ ಸಾಮಾಜಿಕ ಲೆಕ್ಕಪರಿಶೋಧನಾ ಗ್ರಾಮಸಭೆಯ ನಿರ್ಣಯಗಳ ಮೇಲೆ ಮುಂದಿನ ಕ್ರಮವನ್ನು ಕೈಗೊಳ್ಳಲು ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿ ಮತ್ತು ಕಾರ್ಯಕ್ರಮ ಅಧಿಕಾರಿಗಳು ಜವಾಬ್ದಾರರಾಗಿರುತ್ತಾರೆ.

ತಾಲ್ಲೂಕು ಸಾಮಾಜಿಕ ಲೆಕ್ಕಪರಿಶೋಧನಾ ಸಂಪನ್ಮೂಲ ವ್ಯಕ್ತಿಗಳಿಂದ ಎಂಐಎಸ್‌ನಲ್ಲಿ ಸಾಮಾಜಿಕ ಲೆಕ್ಕಪರಿಶೋಧನಾ ವರದಿಯನ್ನು ತಹಸಿಲ್‌ವರೆಗೆ ಪರಿಷ್ಕರಿಸತಕ್ಕದ್ದು. ತಾಲ್ಲೂಕು ಸಂಪನ್ಮೂಲ ವ್ಯಕ್ತಿಯು ಸಾಮಾಜಿಕ ಲೆಕ್ಕಪರಿಶೋಧನಾ ವರದಿಗಳನ್ನು ಕಾರ್ಯಕ್ರಮ ಅಧಿಕಾರಿ, ಜಿಲ್ಲಾ ಕಾರ್ಯಕ್ರಮ ಸಮನ್ವಯಾಧಿಕಾರಿಗಳು ಜಿಲ್ಲಾ/ರಾಜ್ಯಮಟ್ಟದ ಸಂಪನ್ಮೂಲ ವ್ಯಕ್ತಿಗಳಿಗೆ ಸಲ್ಲಿಸಬೇಕು. ನಂತರ ಸಾಮಾಜಿಕ ಲೆಕ್ಕಪರಿಶೋಧನೆಯ ಮೇಲೆ ಅನುಸರಣಾ ಕ್ರಮಗಳನ್ನು ಕೈಗೊಳ್ಳಬೇಕು. ಕೈಗೊಂಡ ಕ್ರಮದ ವರದಿಯನ್ನು ಮುಂದಿನ ಸಾಮಾಜಿಕ ಲೆಕ್ಕಪರಿಶೋಧನೆಯಲ್ಲಿ ಮಂಡಿಸತಕ್ಕದ್ದು, ನಿರ್ದೇಶನಾಲಯವು ಗ್ರಾಮಸಭೆಯ ನಿರ್ಣಯಗಳು ಮತ್ತು ಪ್ರತಿಯೊಂದು ಗ್ರಾಮಸಭೆಯು ಸಾರ್ವಜನಿಕ ವಿಚಾರಣೆಯನ್ನು ನಿಗದಿತ ನಮೂನೆಯಲ್ಲಿ ಅಧಿಕೃತ ಜಾಲತಾಣದಲ್ಲಿ ಪ್ರಕಟಿಸುವುದು. ಸಂಬಂಧಪಟ್ಟ ಪ್ರಾಧಿಕಾರವು ಸಾಮಾಜಿಕ ಲೆಕ್ಕಪರಿಶೋಧನೆಯ ವರದಿಗಳ ಮೇಲೆ ಕೈಗೊಂಡ ಕ್ರಮದ ವರದಿಯನ್ನು ಜಾಲತಾಣಕ್ಕೆ ಆರೋಹಣ ಮಾಡಬಹುದು.

ಗ್ರಾಮಪಂಚಾಯಿತಿಗಳಲ್ಲಿ ಪಂಚಾಯಿತಿ ಜಮಾಬಂದಿ ಗ್ರಾಮಸಭೆಯಲ್ಲಿ ಭಾಗವಹಿಸಿದ ಜನರಲ್ಲಿ ಆ ಕಾರ್ಯಕ್ರಮದ ಬಗ್ಗೆ ಮಾಹಿತಿ ಇಲ್ಲದಿರುವುದು ಕಂಡು ಬಂದಿದೆ. ಜಮಾಬಂದಿ ಎಂದರೆ ಕೇವಲ ಹಣಕಾಸಿನ ವಿಷಯಕ್ಕೆ ಸಂಬಂಧಿಸಿದ್ದು ಎಂದು ತಿಳಿದಿರುವುದು ಗ್ರಾಮಗಳ ಜನರಲ್ಲಿ ಕಂಡುಬಂದಿದೆ. ಈ ಜಮಾಬಂದಿ ಸಭೆಯಲ್ಲಿ ಕೇವಲ ಗ್ರಾಮದ ಕೆಲವೇ ಜನರು ಸೇರುವುದರಿಂದ ಈ ಸಾಮಾಜಿಕ ಜಮಾಬಂದಿಯು ಹೆಚ್ಚು ಚರ್ಚೆಗೆ ಒಳಪಡದಿರುವುದು ಕಂಡುಬಂದಿದೆ. ಈ ಸಭೆಯಲ್ಲಿ ಭಾಗವಹಿಸಿದ ಕೆಲವೇ ಜನರಲ್ಲಿ ಜಮಾಬಂದಿ ಸಭೆಯ ಸಂಪೂರ್ಣ ಮಾಹಿತಿ, ಅರಿವು ಇಲ್ಲದಿರುವುದರಿಂದ ಭಾಗವಹಿಸಿದ ಜನರು ಜಮಾಬಂದಿ ಸಭೆಯಲ್ಲಿ ಗ್ರಾಮಪಂಚಾಯಿತಿಯ ಆಡಳಿತದ ಮತ್ತು ಆಯ-ವ್ಯಯದ ಬಗ್ಗೆ ಯಾವುದೇ ಪ್ರಶ್ನೆಗಳು ಕೇಳದಿರುವುದು ನಾಲ್ಕು ಗ್ರಾಮಪಂಚಾಯಿತಿಗಳಲ್ಲಿ ಕಂಡುಬಂದಿದೆ. ಜಮಾಬಂದಿ ಸಭೆಯಲ್ಲಿ ಗ್ರಾಮಪಂಚಾಯಿತಿ ಸದಸ್ಯರು ಭಾಗವಹಿಸುತ್ತಾರೆ. ಅವರ ಬೆಂಬಲಿಗರು ಕೆಲವು ಜನರು ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿಯಲ್ಲಿ ಭಾಗವಹಿಸುತ್ತಾರೆ. ಭಾಗವಹಿಸಿದವರಿಗೆ ಹೆಚ್ಚಿನ ಅರಿವು ಇಲ್ಲದಿರುವುದು

ಕಂಡುಬಂದಿದೆ. ಇವೆಲ್ಲ ಸಾಮಾಜಿಕ ಜಮಾಬಂದಿಯು ಹೆಚ್ಚು ಸಾಮಾಜೀಕರಣಗೊಳ್ಳದೆಯೇ ಇರುವುದಕ್ಕೆ ಪ್ರಮುಖ ಕಾರಣವಾಗಿದೆ.

ಇದಷ್ಟೇ ಅಲ್ಲದೇ ಸಾಮಾಜಿಕ ಜಮಾಬಂದಿಯ ನಿರ್ವಹಣೆಯನ್ನು ಗ್ರಾಮಪಂಚಾಯಿತಿ ಕಾರ್ಯದರ್ಶಿಯವರು ವಹಿಸಿಕೊಂಡು ಜನರ ಪ್ರಶ್ನೆಗಳಿಗೆ ಅವರೇ ಉತ್ತರ ನೀಡುವುದು ಮತ್ತು ಅವರ ಪ್ರಶ್ನೆಗಳಿಗೆ ನಂತರ ಕಛೇರಿಗೆ ಬಂದು ಮಾಹಿತಿ ಪಡೆಯುವಂತೆ ಸೂಚಿಸಿ ಜನರು ಕೇಳಿದ ಪ್ರಶ್ನೆಗಳಿಗೆ ಉತ್ತರ ನೀಡದೆ ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯನ್ನು ಮುಕ್ತಾಯಗೊಳಿಸುವ ಸನ್ನಿವೇಶಗಳು ಕಂಡುಬರುತ್ತಿವೆ.

ಸಾಮಾಜಿಕ ಜಮಾಬಂದಿ ಅಧಿನಿಯಮದ ಪ್ರಕಾರವಾಗಿ ತಾಲ್ಲೂಕು ಮಟ್ಟದ ತಂಡದ ಅಧಿಕಾರಿಗಳು ಎರಡು ದಿನ ಮುಂಚಿತವಾಗಿ ಬಂದು ಕಛೇರಿಯ ಎಲ್ಲಾ ದಾಖಲೆಗಳನ್ನು ಪರಿಶೀಲಿಸಿ ಗ್ರಾಮಪಂಚಾಯಿತಿಯ ಆಡಳಿತ ಮತ್ತು ಕಾಮಗಾರಿಗಳನ್ನು ಪರಿಶೀಲಿಸಿ ವರದಿಯನ್ನು ತಯಾರಿಸುತ್ತಾರೆ. ಅದರೆ ಗ್ರಾಮಪಂಚಾಯಿತಿಯ ಸಾಮಾಜಿಕ ಜಮಾಬಂದಿಯನ್ನು ಆಯೋಜಿಸಲು ಗ್ರಾಮ ಪಂಚಾಯಿತಿಯ ಸಿಬ್ಬಂದಿಗೆ ತಿಳಿಸುತ್ತಾರೆ. ಗ್ರಾಮಪಂಚಾಯಿತಿಗಳ ಸಿಬ್ಬಂದಿಯು ಒಂದು ಎರಡು ದಿನಗಳಲ್ಲಿ ಪ್ರಚಾರ ಕಾರ್ಯವನ್ನು ಮಾಡುತ್ತಾರೆ.

ಇಂದಿಗೂ ಗ್ರಾಮಗಳಲ್ಲಿ ಹಲಗೆ ಹೊಡೆದು ಡಂಗುರ ಸಾರುವಂತಹ ಸ್ಥಿತಿಯಿದೆ. ಹಾಗಾಗಿ ಈ ಪ್ರಚಾರದ ಕಾರ್ಯ ಕೈಗೊಳ್ಳುವ ಸಮಯದಲ್ಲಿ ಗ್ರಾಮದಲ್ಲಿ ಜನರು ಇಲ್ಲದಿರುವುದನ್ನು ಗಮನಿಸಬಹುದು. ಸರಿಸುಮಾರು ಬೆಳ್ಳಗೆ ೧೧ರಿಂದ ೧ ಗಂಟೆಯೊಳಗೆ ಡಂಗುರ ಸಾರುವುದು ಕಂಡುಬಂದಿದೆ. ಈ ಡಂಗುರ ಸಾರುವವರು ಗ್ರಾಮದ ಪ್ರತಿ ಬೀದಿಗೆ ಹೋಗಿ ಸಾರುವುದಕ್ಕೆ ಆಗದೇ ಬೀದಿಯ ಮುಖ್ಯ ರಸ್ತೆಗಳಲ್ಲಿ ಪ್ರಚಾರವನ್ನು ಮಾಡುವುದರಿಂದ ಹೆಚ್ಚಿನ ಜನರಿಗೆ ಜಮಾಬಂದಿ ಗ್ರಾಮಸಭೆಯ ಮಾಹಿತಿ ಸಿಗದಿರುವುದು ಕ್ಷೇತ್ರಕಾರ್ಯದಲ್ಲಿ ಕಂಡುಬಂದಿದೆ. ಒಂದು ದಿನ ಮುಂಚಿತವಾಗಿ ಸ್ಥಳೀಯ ಪತ್ರಿಕೆಗಳಲ್ಲಿ ಪ್ರಕಟಿಸುವುದನ್ನು ಕಾಣಬಹುದು. ಗ್ರಾಮಪಂಚಾಯಿತಿಯ ಸಿಬ್ಬಂದಿಯವರು ಜಮಾಬಂದಿ ಗ್ರಾಮಸಭೆ ಕಾರ್ಯಕ್ರಮದಲ್ಲಿ ಯಾವ ವಿಷಯಗಳನ್ನು ಚರ್ಚಿಸಲಾಗು ತ್ತದೆ ಎಂಬುದರ ಕುರಿತಾದ ಕರಪತ್ರಗಳನ್ನು ಮುದ್ರಿಸಿ ಗ್ರಾಮದ ಜನರಿಗೆ ನೀಡದಿರುವುದರಿಂದ ಗ್ರಾಮದ ಜನರಿಗೆ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಸ್ವರೂಪದ ಬಗ್ಗೆ ಸಂಪೂರ್ಣ ಮಾಹಿತಿ ಇಲ್ಲದಿರುವುದು ಕಂಡುಬಂದಿದೆ. ಹಾಗಾಗಿ ಜನರು ಈ ಸಾಮಾಜಿಕ ಜಮಾಬಂದಿ ಸಭೆಯ ವಾಸ್ತವ ಕಾರ್ಯಾನುಷ್ಠಾನದ ಕುರಿತು ಹೆಚ್ಚಿನ ಅರಿವು ಹೊಂದಿರದೇ ಜಮಾಬಂದಿ ಸಭೆ ಯಿಂದ ದೂರ ಉಳಿದಿದ್ದಾರೆ.

ಈ ಜಮಾಬಂದಿಯಲ್ಲಿ ಭಾಗವಹಿಸಿದ ಜನರಲ್ಲಿ ಗ್ರಾಮಸಭೆಯ ಸ್ವರೂಪದ ಬಗ್ಗೆ ಸಂಪೂರ್ಣ ಮಾಹಿತಿ ಇಲ್ಲದಿರುವುದರಿಂದ ಜಮಾಬಂದಿ ಅಧಿಕಾರಿಗಳ ತಂಡಕ್ಕೆ ದೂರು ಸಲ್ಲಿಸುವ ಮತ್ತು ಕಾಮಗಾರಿಗಳ ಕುರಿತು ಪರಿಶೀಲಿಸುವಂತೆ ತಿಳಿಸುವ ಸ್ಥಿತಿಯು ಗ್ರಾಮಪಂಚಾಯಿತಿಗಳಲ್ಲಿ ಇಲ್ಲದಿರುವುದು ಕಂಡುಬಂದಿದೆ.

ಸಾಮಾಜಿಕ ಜಮಾಬಂದಿ ಅಧಿಕಾರಿಗಳ ತಂಡದವರನ್ನು ಗ್ರಾಮದ ಕೆಲವೇ ಬೀದಿಗಳಿಗೆ ಗ್ರಾಮಪಂಚಾಯಿತಿ ಸಿಬ್ಬಂದಿಯೇ ಕರೆದುಕೊಂಡು ಹೋಗುವ ಸ್ಥಿತಿ ಈ ಗ್ರಾಮಗಳಲ್ಲಿ ಕಂಡು ಬಂದಿದೆ. ಗ್ರಾಮಸಭೆಯಲ್ಲಿಯೂ ಹೆಚ್ಚು ಕಾಮಗಾರಿಗಳ ಬಿಲ್ಲುಗಳ ತೊಂದರೆ ಮತ್ತು ಕಾಮಗಾರಿಗಳ ವೆಚ್ಚದ ಬಗ್ಗೆ ಗ್ರಾಮಪಂಚಾಯಿತಿ ಸಿಬ್ಬಂದಿ, ಅಧಿಕಾರಿಗಳು ಮತ್ತು ಗ್ರಾಮಪಂಚಾಯಿತಿ ಸದಸ್ಯರ ನಡುವೆ ಚರ್ಚೆ ನಡೆಯುತ್ತದೆ. ಸಾರ್ವಜನಿಕರು ಚರ್ಚೆಯಲ್ಲಿ ಭಾಗವಹಿಸಿ ಮುಕ್ತವಾಗಿ ವರ್ಷದ ಗ್ರಾಮಪಂಚಾಯಿತಿ ಹಣಕಾಸಿನ ವಿವರಗಳನ್ನು ಪಡೆಯುವ ಸಮಯ ಸಿಗದೇ ಇರುವುದು ಕೇಲವು ಗ್ರಾಮಪಂಚಾಯಿತಿಗಳಲ್ಲಿ ಕಂಡುಬಂದಿದೆ.

### ಗ್ರಾಮಸಭಾ ಜವಾಬ್ದಾರಿಗಳು ಮತ್ತು ಕರ್ತವ್ಯಗಳು

ಗ್ರಾಮಪಂಚಾಯಿತಿಗಳ ವಾರ್ಷಿಕ ಲೆಕ್ಕಪತ್ರಗಳ ವಿವರಣೆ, ಹಿಂದಿನ ಹಣಕಾಸು ವರ್ಷದ ಆಡಳಿತ ವರದಿ, ಕಳೆದ ವರ್ಷದ ಲೆಕ್ಕಪರಿಶೋಧನಾ ಟಿಪ್ಪಣಿ ಹಾಗೂ ಅದಕ್ಕೆ ನೀಡಲಾದ ಉತ್ತರಗಳೇನಾದರೂ ಇದ್ದಲ್ಲಿ. ಗ್ರಾಮದಲ್ಲಿರುವ ಎಲ್ಲಾ ವರ್ಗಗಳ ಜನರಲ್ಲಿ ಸೌಹಾರ್ದತೆಯನ್ನು ಬೆಳೆಸಿ ತಮ್ಮ ಗ್ರಾಮ ಎಂಬ ಏಕತೆಯನ್ನು ಮೂಡಿಸುವುದು. ಗ್ರಾಮದಲ್ಲಿ ವಯಸ್ಕರ ಶಿಕ್ಷಣ ಕಾರ್ಯಕ್ರಮವನ್ನು ನಿರೂಪಿಸುವುದು ಮತ್ತು ನಿಗದಿತಗೊಳಿಸಬಹುದಾದಂಥ ಇನ್ನಿತರ ವಿಷಯಗಳು. ಗ್ರಾಮಪಂಚಾಯಿತಿಯು ಗ್ರಾಮಸಭೆಯ ಶಿಫಾರಸ್ಸುಗಳನ್ನು ಮತ್ತು ಸಲಹೆಗಳನ್ನು ಸೂಕ್ತವಾಗಿ ಪರಿಶೀಲಿಸುವುದು ಗ್ರಾಮಸಭೆಗಳನ್ನು ಕರೆಯುವ ಹಾಗೂ ನಡೆಸುವ ಕಾರ್ಯವಿಧಾನವನ್ನು ನಿಗದಿಪಡಿಸುವುದು. ಗ್ರಾಮಸಭೆಯ ಪ್ರತಿಯೊಂದು ಸಭೆಯ ಅಧ್ಯಕ್ಷತೆಯನ್ನು ಸಂಬಂಧಪಟ್ಟ ಗ್ರಾಮಪಂಚಾಯಿತಿ ಅಧ್ಯಕ್ಷರು ವಹಿಸತಕ್ಕದ್ದು ಮತ್ತು ಅವರ ಗೈರು ಹಾಜರಿಯಲ್ಲಿ ಗ್ರಾಮ ಪಂಚಾಯಿತಿಯ ಉಪಾಧ್ಯಕ್ಷರು ಅಥವಾ ಯಾವುದೇ ಸದಸ್ಯರು ವಹಿಸುವುದು ಗ್ರಾಮಸಭೆಯು ಈ ಕೆಳಗಿನ ಕಾರ್ಯಗಳನ್ನು ನಿರ್ವಹಿಸತಕ್ಕದ್ದು. ಸಮುದಾಯ ಕಲ್ಯಾಣ ಕಾರ್ಯಕ್ರಮಗಳಿಗಾಗಿ ಸ್ವಯಂ ಸೇವೆ ಹಾಗೂ ವಸ್ತುರೂಪದ ಮತ್ತು ನಗದು ರೂಪದ ಸಂದಾಯವನ್ನು ಸಂಗ್ರಹಿಸುವುದು. ಗ್ರಾಮಕ್ಕೆ ಸಂಬಂಧಪಟ್ಟ ಅಭಿವೃದ್ಧಿ ಯೋಜನೆಗಳನ್ನು ಕಾರ್ಯಗತಗೊಳಿಸುವ ಸಲುವಾಗಿ ಫಲಾನುಭವಿಗಳನ್ನು ಗುರುತಿಸುವುದು.[೨೪]

ಹಿಂದಿನ ವರ್ಷಕ್ಕೆ ಸಂಬಂಧಪಟ್ಟ ಅಭಿವೃದ್ಧಿ ಕಾರ್ಯಕ್ರಮಗಳ ಬಗ್ಗೆ ವರದಿ ಮತ್ತು ಪ್ರಸ್ತುತ ವರ್ಷದಲ್ಲಿ ಕೈಕೊಳ್ಳಬೇಕೆಂದು ಅಪೇಕ್ಷಿಸಲಾದ ಅಭಿವೃದ್ಧಿ ಕಾರ್ಯಕ್ರಮಗಳ ಅರಿವು ಮೂಡಿಸುವುದು. ಗ್ರಾಮಕ್ಕೆ ಸಂಬಂಧಪಟ್ಟ ಅಭಿವೃದ್ಧಿ ಯೋಜನೆಗಳನ್ನು ಕಾರ್ಯಗತಗೊಳಿಸುವಲ್ಲಿ ನೆರವಾಗುವುದು. ಗ್ರಾಮಪಂಚಾಯಿತಿಯ ಗ್ರಾಮಸಭೆಯಲ್ಲಿ ಹಲವಾರು ಸಮಸ್ಯೆಗಳು ಕಂಡುಬಂದವು. ಇಲ್ಲಿಯವರೆಗೆ ನಡೆದಿರುವ ಅಧ್ಯಯನಗಳಲ್ಲಿ ಗ್ರಾಮಸಭೆ ನಡೆಸಲು ಪ್ರಮುಖ ಸಮಸ್ಯೆ ಎಂದರೆ ಗ್ರಾಮಸ್ಥರು ಗ್ರಾಮಸಭೆಯಲ್ಲಿ ಭಾಗವಹಿಸದೇ ಇರುವುದು ಗ್ರಾಮಸಭೆಗಳಲ್ಲಿ ಗ್ರಾಮಸ್ಥರಲ್ಲಿ ಗ್ರಾಮಸಭೆಯ ಬಗ್ಗೆ ಅರಿವಿಲ್ಲದಿರುವುದು. ಜನರಿಗೆ ಅರಿವು ಮೂಡಿಸುವ ಕೆಲಸ ಪಂಚಾಯಿತಿಯ ಆಯ್ಕೆ ಸದಸ್ಯರು ಮತ್ತು ಗ್ರಾಮಪಂಚಾಯಿತಿ ಸಿಬ್ಬಂದಿಯವರದಾಗಿದೆ. ಆದರೆ ಗ್ರಾಮಸ್ಥರಿಗೆ ಗ್ರಾಮಸಭೆಯ ಬಗ್ಗೆ ಮತ್ತು ಗ್ರಾಮಪಂಚಾಯಿತಿ ಆಡಳಿತ ಬಗ್ಗೆ ಜನರಿಗೆ ಮಾಹಿತಿ ನೀಡುವುದರಲ್ಲಿ ಸಕ್ರಿಯವಾಗಿ ಕೆಲಸ ಮಾಡದೇ ಇರುವುದು ಕಂಡುಬಂದಿದೆ. ಗ್ರಾಮಸಭೆಯು ಸಕ್ರಿಯವಾಗಿ ನಡೆಯಲು ಹಲವಾರು ಸುಧಾರಣೆಗಳನ್ನು ಮಾಡಲಾಗಿದೆ. ಅದರ ಭಾಗವಾಗಿ ಪ್ರತಿ ಗ್ರಾಮಪಂಚಾಯಿತಿಯಲ್ಲಿ ಜಾರಿಗೆ ಬರುವಂತೆ ಕರ್ನಾಟಕ ಸರ್ಕಾರ ೨೦೦೫ರಲ್ಲಿ ಪಂಚಾಯಿತಿ ಜಮಾಬಂದಿ ನಿರ್ವಹಣೆ ಅಧಿನಿಯಮವನ್ನು "ಪಂಚಾಯಿತಿ ಜಮಾಬಂದಿ ನಿರ್ವಹಣೆ ನಿಯಮ ೨೦೦೪" ಎಂಬ ಶೀರ್ಷಿಕೆಯಲ್ಲಿ ಜಾರಿಗೆ ತಂದಿದೆ.

**೩.೩. ಮಾಹಿತಿ ಹಕ್ಕು ಕಾಯ್ದೆ ವಿಶ್ಲೇಷಣೆ(೨೦೦೫)**

ಮಾಹಿತಿ ಹಕ್ಕು ಎಂದರೆ ಸಾರ್ವಜನಿಕ ಪ್ರಾಧಿಕಾರಗಳು ತಮ್ಮಲ್ಲಿರುವ ಮಾಹಿತಿಗಳನ್ನು ಜನಸಾಮಾನ್ಯರಿಗೆ ನೀಡುವುದು.

**ಸಾರ್ವಜನಿಕ ಪ್ರಾಧಿಕಾರ ಎಂದರೆ ಸೆಕ್ಷನ್ ೨(ಬಿ)ಪ್ರಕಾರ :** ಸಂವಿಧಾನಾತ್ಮಕವಾಗಿ ರಚನೆಗೊಂಡ ಪ್ರಾಧಿಕಾರಗಳು ಮತ್ತು ಸಂಸ್ಥೆಗಳು, ಕೇಂದ್ರ ಮತ್ತು ರಾಜ್ಯ ಕಾನೂನಿನ ಅನ್ವಯ ಸ್ಥಾಪಿತವಾದ ಸಂಸ್ಥೆಗಳು, ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಹೊರಡಿಸುವ ಆದೇಶದ ಅನುಸಾರ ಸ್ಥಾಪಿತವಾದ ಪ್ರಾಧಿಕಾರಗಳು, ಸಂಸ್ಥೆಗಳು ಮತ್ತು ರಾಜ್ಯ, ಕೇಂದ್ರ ಸರ್ಕಾರಗಳ ಒಡೆತನದಲ್ಲಿರುವ ಆರ್ಥಿಕವಾಗಿ ಅನುದಾನ ಪಡೆದಿರುವ ಸಂಸ್ಥೆಗಳು ಹಾಗೂ ಆರ್ಥಿಕ ಸಹಾಯ ಪಡೆಯುವ ಸರ್ಕಾರೇತರ ಸಂಸ್ಥೆಗಳನ್ನು ಸಾರ್ವಜನಿಕ ಪ್ರಾಧಿಕಾರಿಗಳು ಎಂದು ಕಾಯ್ದೆಯಲ್ಲಿ ಗುರುತಿಸಲಾಗಿದೆ.

**ಸಾರ್ವಜನಿಕ ಮಾಹಿತಿಯನ್ನು ಪಡೆಯುಬಹುದಾದ ಸಂಸ್ಥೆಗಳು:** ಜಿಲ್ಲಾಪಂಚಾಯಿತಿ, ತಾಲ್ಲೂಕು, ಮತ್ತು ಗ್ರಾಮಪಂಚಾಯಿತಿ ಸಂಸ್ಥೆಗಳು. ಸಮಿತಿಗಳು, ಮಂಡಳಿಗಳು, ಜನಪದ ಪಂಚಾಯಿತಿಗಳು, ಮುನಿಸಿಪಾಲಿಟಿಗಳು, ಬ್ಲಾಕ್ ಅಭಿವೃದ್ಧಿ ಪ್ರಾಧಿಕಾರಗಳು, ಉಪವಿಭಾಗೀಯ ಕಛೇರಿಗಳು, ಜಿಲ್ಲಾ ಕಛೇರಿಗಳು, ಜಿಲ್ಲಾಧಿಕಾರಿಗಳ ಕಛೇರಿಗಳು, ಸಚಿವಾಲಯಗಳು, ಸಚಿವಾಲಯದ ಎಲ್ಲ ಕಛೇರಿಗಳು,

ಸರ್ಕಾರದಿಂದ ಸಹಾಯ ಪಡೆದಿರುವ ಕಛೇರಿಗಳು. ಶಾಲಾ, ಕಾಲೇಜುಗಳು, ವಿಶ್ವವಿದ್ಯಾಲಯಗಳು, ಸಾರ್ವಜನಿಕ ಉದ್ಯಮಿಗಳ ಕಛೇರಿಗಳು, ಸಾರ್ವಜನಿಕ ಬ್ಯಾಂಕುಗಳು, ಕೆಲವೊಂದು ಸರ್ಕಾರೇತರ ಸಂಸ್ಥೆಗಳಿಗೆ ಅನ್ವಯಿಸುತ್ತದೆ. ಕೇಂದ್ರ ಮತ್ತು ರಾಜ್ಯ ಸರ್ಕಾರಗಳಿಂದ ಹೆಚ್ಚಿನ ಆರ್ಥಿಕ ನೆರವು ಪಡೆದಿರುವ ಸರ್ಕಾರೇತರ ಸಂಸ್ಥೆಗಳು, ಆಸ್ಪತ್ರೆಗಳು ಮತ್ತು ಸರ್ಕಾರದ ಯೋಜನೆಗಳನ್ನು ಅನುಷ್ಠಾನಗೊಳಿಸುವಂತಹ ಧಾರ್ಮಿಕ ಸಂಸ್ಥೆಗಳನ್ನು ಒಳಗೊಂಡಂತೆ ೨೦೦೫ರ ಮಾಹಿತಿ ಹಕ್ಕು ಕಾಯ್ದೆಯಡಿಯಲ್ಲಿ ಸಾರ್ವಜನಿಕರು ಮಾಹಿತಿಗಳನ್ನು ಪಡೆಯಬಹುದಾಗಿದೆ.

**ನಾಗರಿಕರ ಮಾಹಿತಿ ಹಕ್ಕಿ ಅಧಿಕಾರಗಳು/ಸ್ವತಂತ್ರ:–** ಸಾರ್ವಜನಿಕರ ಹಿತಕ್ಕೆ ಧಕ್ಕೆ ತರುವಂತಹ ಮಾಹಿತಿಗಳನ್ನು ನಿರ್ಬಂಧಿಸಿದಂತೆ ಉಳಿದಂತೆ ಎಲ್ಲ ರೀತಿಯ ಮಾಹಿತಿಗಳನ್ನು ಬಹಿರಂಗಗೊಳಿಸುವ ಉದ್ದೇಶವನ್ನು ಈ ಕಾಯ್ದೆಯು ಹೊಂದಿದೆ. ಸಾರ್ವಜನಿಕ ಕಡತ, ಹಸ್ತಪ್ರತಿ, ಟಿಪ್ಪಣಿ, ಮೈಕ್ರೋಫಿಲ್ಮ್ ಫ್ಯಾಸಿಮೈಲ್, ದಾಖಲೆ, ಮೆಮೊ, ಇ–ಮೇಲ್ ಅಭಿಪ್ರಾಯ, ಸಲಹೆಗಳು, ಪತ್ರಿಕಾ ಪ್ರಕಟಣೆ, ಸುತ್ತೋಲೆ, ಆದೇಶ, ಲಾಗ್‌ಬುಕ್, ಗುತ್ತಿಗೆ, ವರದಿ, ಹಾಳೆ, ಮಾದರಿ ಪ್ರತಿಕೃತಿಗಳನ್ನು, ಅಂಕಿ–ಅಂಶಗಳನ್ನು ಎಲೆಕ್ಟ್ರಾನಿಕ್ ರೂಪದಲ್ಲಿರುವ ಮತ್ತು ಕಂಪ್ಯೂಟರ್‌ಗಳಲ್ಲಿನ ಈ ಎಲ್ಲ ರೀತಿಯ ಮಾಹಿತಿಗಳನ್ನು ನಾಗರಿಕರು ಪಡೆಯಬಹುದಾಗಿದೆ.

ನಾಗರಿಕರು ಕಾಯ್ದೆಯಡಿಯಲ್ಲಿ ಬರುವ ಸಂಸ್ಥೆಗಳ ಕಡತಗಳನ್ನು ಪರೀಕ್ಷಿಸುವ ಮತ್ತು ಪರಿಶೀಲಿಸುವ ಹಕ್ಕು ಹೊಂದಿರುತ್ತಾರೆ. ಕಾಮಗಾರಿಗಳನ್ನು ಪರಿಶೀಲಿಸಬಹುದು, ದಾಖಲೆಗಳು ಬೇಕಾದಲ್ಲಿ ನಕಲುಪ್ರತಿಗಳನ್ನು ಪಡೆಯಬಹುದು. ಕಡತಗಳಲ್ಲಿ ಅಂಶಗಳನ್ನು ಟಿಪ್ಪಣಿ ಮಾಡಿಕೊಳ್ಳ ಬಹುದು, ಕಾಮಗಾರಿಗಳಿಗೆ ಬಳಸಿದ ಸಾಮಗ್ರಿಗಳ ಮಾದರಿಗಳನ್ನು ಪಡೆಯಬಹುದು. ಲಿಖಿತ ರೂಪದಲ್ಲಿ ಅಥವಾ ಕಂಪ್ಯೂಟರ್ ಮೂಲಕ ಮಾಹಿತಿಗಳನ್ನು ಪಡೆಯಬಹುದು.

ಮಾಹಿತಿ ಹಕ್ಕು ಕಾನೂನು ಮೂಲಭೂತ ಪ್ರತಿಯೊಬ್ಬ ನಾಗರಿಕರಿಗೆ ಅನ್ವಯಿಸುವಂತಹ ಹಕ್ಕು. ಸರ್ಕಾರಿ ಮತ್ತು ಖಾಸಗಿ ಸಂಸ್ಥೆಗಳಿಂದ ಪ್ರತಿಯೊಬ್ಬ ಜವಾಬ್ದಾರಿಯುತ ನಾಗರಿಕರು ಪಡೆಯುವಂತಹ ಹಕ್ಕಾಗಿದೆ. ನಾಗರಿಕರು ಕೇಳಿದ/ ಕೇಳುವ ಮಾಹಿತಿಗಳನ್ನು ನೀಡುವುದು ಪ್ರತಿಯೊಂದು ಸರ್ಕಾರಿ ಮತ್ತು ಖಾಸಗಿ ಸಂಸ್ಥೆಗಳ ಜವಾಬ್ದಾರಿಯಾಗಿರುತ್ತದೆ. ಈ ಕಾಯ್ದೆಯಲ್ಲಿ ಯಾವ ಮಾಹಿತಿ ಯನ್ನು ವಿನಾಯಿತಿ ಅಡಿಯಲ್ಲಿ ಇರಿಸಲಾಗಿದೆಯೋ ಅಂತಹ ಮಾಹಿತಿಯನ್ನು ಹೊರತುಪಡಿಸಿ ಉಳಿದ ಎಲ್ಲಾ ಮಾಹಿತಿಗಳನ್ನು ಅರ್ಜಿ ಸಲ್ಲಿಸಿದ ನಾಗರಿಕರಿಗೆ ನೀಡಬೇಕಾಗಿರುತ್ತದೆ. ಸರ್ಕಾರಿ ಮತ್ತು ಖಾಸಗಿ ಸಂಸ್ಥೆಗಳು ನಾಗರಿಕರು ಯಾವ ಮಾಹಿತಿಯನ್ನು ಕೇಳದಿದ್ದರೂ ಕೆಲವೊಂದು ನಿಗದಿತ ಮಾಹಿತಿಗಳನ್ನು ಸ್ವಪ್ರೇರಣೆಯಿಂದ ಪ್ರಕಟಿಸುವುದು ಸಂಸ್ಥೆಗಳ ಕರ್ತವ್ಯವಾಗಿರುತ್ತದೆ.

ಹೀಗೆ ಸಾರ್ವಜನಿಕ ಪ್ರಾಧಿಕಾರಗಳ ಮಾಹಿತಿಯನ್ನು ಸಾರ್ವಜನಿಕಗೊಳಿಸುವ ಜವಾಬ್ದಾರಿಯನ್ನು ಹೊಂದಿರುತ್ತವೆ.

ಸರ್ಕಾರದ ಹಿಡಿತದಲ್ಲಿರುವ ಎಲ್ಲಾ ಮಾಹಿತಿಗಳು ನಾಗರಿಕ ಸ್ವತ್ತು ಎಂದು ಕಾಯ್ದೆ ವಿವರಿಸುತ್ತದೆ. ಯಾವುದೇ ಸಾರ್ವಜನಿಕ ಕಛೇರಿ ಮತ್ತು ಸರ್ಕಾರಿ ಇಲಾಖೆಗಳಲ್ಲಿನ ಮಾಹಿತಿಯ ಒಡೆತನವು ನಾಗರಿಕರಲ್ಲಿರುತ್ತದೆ. ಸಾರ್ವಜನಿಕ ಕ್ಷೇತ್ರದಲ್ಲಿ ಸಂಗ್ರಹಿಸಲಾದ ದಾಖಲೆಗಳು, ಮಾಹಿತಿಗಳ ಮೇಲ್ವಿಚಾರಣೆಗೆ ನಾಗರಿಕರ ಹಣ ಬಳಸಲಾಗಿರುತ್ತದೆ. ಹಾಗಾಗಿ ಸರ್ಕಾರಿ ಮತ್ತು ಸಾರ್ವಜನಿಕ ವಲಯದ ಯಾವುದೇ ಮಾಹಿತಿಗಳ ಮೇಲೆ ನಾಗರಿಕರಿಗೆ ಸಂಪೂರ್ಣ ಅಧಿಕಾರವಿರುತ್ತದೆ. ನಾಗರಿಕರು ಸರ್ಕಾರದ ಕಾರ್ಯವೈಖರಿಯನ್ನು ನಿರ್ಧರಿಸಿರುವ ವಿಧಾನಗಳ ಮತ್ತು ಕ್ರಮಗಳ ಕುರಿತಾದ ಮಾಹಿತಿಯನ್ನು ಪಡೆಯುವ ಹಕ್ಕು ದೇಶದ ನಾಗರಿಕರಿಗಿರುತ್ತದೆ.

**ಮಾಹಿತಿ ಹಕ್ಕು ಕುರಿತು ಸಾರ್ವಜನಿಕರ ಪ್ರಾಧಿಕಾರದ ಜವಾಬ್ದಾರಿಗಳು:** ಸರ್ಕಾರವು ಕಾಲಕಾಲಕ್ಕೆ ರೂಪಿಸಿದ ನಿಯಮಗಳು ಮತ್ತು ಯೋಜನೆಗಳಿಗೆ ಸಂಬಂಧಿಸಿದಂತೆ ಮಾಹಿತಿಗಳನ್ನು ಪ್ರಕಟಿಸಬೇಕು. ಸಾರ್ವಜನಿಕ ನಿರ್ಧಾರ ಕೈಗೊಳ್ಳುವ ಮುನ್ನ ಮಾಹಿತಿಗಳನ್ನು ಸಾರ್ವಜನಿಕವಾಗಿ ಪ್ರಕಟಿಸಬೇಕು. ಅದರಿಂದ ನಾಗರಿಕರಿಗೆ ಪ್ರಸ್ತುತ ಮಾಹಿತಿಯನ್ನು ಪಡೆಯುವ ಅವಕಾಶ ಸಿಗುತ್ತದೆ. ಸರ್ಕಾರವು ಯಾವುದಾದರೂ ವ್ಯಕ್ತಿಯ ಅಥವಾ ಗುಂಪಿಗೆ ಸಂಬಂಧಪಟ್ಟ ನಿರ್ಧಾರವನ್ನು ಕೈಗೊಳ್ಳುವಾಗ ಆ ವ್ಯಕ್ತಿ ಅಥವಾ ಗುಂಪಿಗೆ ಮಾಹಿತಿಯನ್ನು ತಿಳಿಸಬೇಕು.

ಮಾಹಿತಿಯನ್ನು ಕೋರಿ ನಾಗರಿಕರು ಲಿಖಿತ ರೂಪದ ಅರ್ಜಿಯನ್ನು ಸಲ್ಲಿಸಿ ನಿಗದಿತ ಶುಲ್ಕವನ್ನು ಪಾವತಿಸಿದ ಅಥವಾ ನೇರವಾಗಿ ಸಾರ್ವಜನಿಕ ಮಾಹಿತಿ ಅಧಿಕಾರಿಗಳಿಗೆ ನೀಡಿದ್ದಲ್ಲಿ ಅರ್ಜಿ ಸಲ್ಲಿಸಿದ ೩೦ ದಿನಗಳ ಒಳಗಾಗಿ ಮಾಹಿತಿಯನ್ನು ಸಂಬಂಧಪಟ್ಟವರಿಗೆ ನೀಡಬೇಕು. ಸಹಾಯಕ ಸಾರ್ವಜನಿಕ ಅಧಿಕಾರಿಗಳಿಗೆ ಅರ್ಜಿಯನ್ನು ನೀಡಿದಾಗ ೨೫ ದಿನಗಳ ಒಳಗಾಗಿ ಮಾಹಿತಿಯನ್ನು ನೀಡುವಂತೆ ಈ ಕಾಯ್ದೆ ವಿವರಿಸುತ್ತದೆ.

ಸಾರ್ವಜನಿಕ ಮಾಹಿತಿ ಅಧಿಕಾರಿಯು ನಾಗರಿಕ ಮಾಹಿತಿ ಅರ್ಜಿಯನ್ನು ತಿರಸ್ಕರಿಸುವ ನಿರ್ಧಾರ ಕೈಗೊಂಡರೆ ಅದನ್ನು ೩೦ ದಿನಗಳ ಅವಧಿಯಲ್ಲಿ ಲಿಖಿತ ರೂಪದಲ್ಲಿ ಅರ್ಜಿದಾರನಿಗೆ ತಿಳಿಸಬೇಕು. ಸೆಕ್ಷನ್ ೭(೮)ರನ್ವಯ ಮಾಹಿತಿ ನಿರಾಕರಿಸಲು ಸೂಕ್ತ ಕಾರಣಗಳು ಹಾಗೂ ಆ ನಿರ್ಧಾರ ಕೈಗೊಳ್ಳಲು ಪರಿಗಣಿಸಿದ ಆಧಾರಗಳ ವಿವರಣೆಯನ್ನು ನೀಡಬೇಕು. ನಿರಾಕರಣೆಯ ವಿರುದ್ಧ ಮೇಲ್ಮನವಿ ಸಲ್ಲಿಸಲು ಇರುವ ಕಾಲಾವಕಾಶ ಮತ್ತು ಮೇಲ್ಮನವಿ ಪ್ರಾಧಿಕಾರದ ಸಂಪರ್ಕ ವಿಳಾಸಗಳನ್ನು ಅರ್ಜಿದಾರರಿಗೆ ನೀಡಬೇಕು. ಒಂದು ವೇಳೆ ಸಾರ್ವಜನಿಕ ಮಾಹಿತಿ ಅಧಿಕಾರಿ

ಅರ್ಜಿಯನ್ನು ನಿರಾಕರಿಸಿದ ಕುರಿತು ಸ್ಪಷ್ಟನೆ ನೀಡದೇ ಇದ್ದಲ್ಲಿ ಅದನ್ನು ನಿರಾಕರಣೆ ಎಂದು ಭಾವಿಸಿ ಅಥವಾ ಪರಿಗಣಿಸಿ ಮೇಲ್ಮನವಿಯನ್ನು ಆಯೋಗದಲ್ಲಿ ಸಲ್ಲಿಸಬಹುದು.[೨೫]

**ಮಾಹಿತಿ ಹಕ್ಕಿನ ಅರಿವು**

ಗ್ರಾಮೀಣ ಭಾಗದಲ್ಲಿ ೨೦೦೫ರ ಮಾಹಿತಿ ಹಕ್ಕು ಜಾರಿ ಇರುವುದರ ಕುರಿತು ಜನರಲ್ಲಿ ಮಾಹಿತಿ ಇಲ್ಲದಿರುವುದು ಕಂಡುಬಂದಿದೆ. ಬಹಳಷ್ಟು ಕಡಿಮೆ ಪ್ರಮಾಣದಲ್ಲಿ ಗ್ರಾಮೀಣ ಜನರಲ್ಲಿ ಮಾಹಿತಿಯನ್ನು ಪಡೆಯುವ ಹಕ್ಕು ಇದೆ ಎಂದು ತಿಳಿಯದೇ ಇರುವುದು ಕಂಡುಬಂದಿದೆ. ಈ ಮಾಹಿತಿ ಹಕ್ಕು ಕುರಿತು ಎರಡನೇ ತಲೆಮಾರಿನ ಜನರಲ್ಲಿ ಸ್ವಲ್ಪ ಅರಿವಿದೆ. ಅದರೆ ಮೂರನೇ ತಲೆಮಾರಿನ ಯುವಕರಲ್ಲಿ ಮಾಹಿತಿ ಹಕ್ಕು ಕುರಿತು ಅರಿವು ಇಲ್ಲದಿರುವುದು ಕಂಡುಬಂದಿದೆ. ಹಾಗೆಯೇ ಗ್ರಾಮೀಣ ಪ್ರದೇಶದಲ್ಲಿ ಈ ಮಾಹಿತಿ ಹಕ್ಕಿನ ಬಳಕೆ ತೀರಾ ಕಡಿಮೆಯಿದೆ. ಹಾಗಾಗಿ ಈ ಗ್ರಾಮಪಂಚಾಯಿತಿಯ ಆಡಳಿತ ಮತ್ತು ಹಣಕಾಸಿನ ವಿವರಗಳನ್ನು ತಿಳಿದುಕೊಳ್ಳುವುದು ತಮ್ಮ ಹಕ್ಕು ಮತ್ತು ಗ್ರಾಮಪಂಚಾಯಿತಿ ಸಭೆಗಳಲ್ಲಿ ಭಾಗವಹಿಸಿ ತಮ್ಮ ಕುಟುಂಬಕ್ಕೆ ಅವಶ್ಯಕವಾದ ಸೌಲಭ್ಯಗಳನ್ನು ಪಡೆದುಕೊಳ್ಳುವುದು ಮತ್ತು ಗ್ರಾಮದ ಅಭಿವೃದ್ಧಿಗೆ ಸ್ಪಂದಿಸುವುದು ತಮ್ಮ ಕರ್ತವ್ಯ ಎಂದು ಗ್ರಾಮೀಣ ಭಾಗದ ಯುವಕರು ಅರಿಯದೇ ಇರುವುದರಿಂದ ಗ್ರಾಮಗಳ ಅಭಿವೃದ್ಧಿಯಲ್ಲಿ ಹಿಂದುಳಿದಿರುವುದಕ್ಕೆ ಒಂದು ಕಾರಣ ಎಂದು ಹೇಳಬಹುದು.

ಈ ಮಾಹಿತಿ ಹಕ್ಕು ಕುರಿತು ಅರಿವಿರುವ ವಿದ್ಯಾವಂತ ಯುವಕರು ತಮ್ಮ ಸಮಸ್ಯೆಗಳ ಸಂದರ್ಭದಲ್ಲಿ ಬಳಕೆ ಮಾಡಿಕೊಳ್ಳುತ್ತಾರೆ ಹೊರತು ಗ್ರಾಮದ ಸಮಸ್ತ ಅಥವಾ ಸಾರ್ವಜನಿಕ ಸಮಸ್ಯೆಗಳಿಗೆ ಮಾಹಿತಿ ಹಕ್ಕು ಬಳಕೆ ಮಾಡುವ ಸ್ಥಿತಿಯ ಇನ್ನೂ ಗ್ರಾಮಮಟ್ಟದಲ್ಲಿ ಇಲ್ಲದಿರುವುದು ಕಂಡುಬಂದಿದೆ. ಮಾಹಿತಿಗೂ ಮತ್ತು ಗ್ರಾಮದ ಅಭಿವೃದ್ಧಿಗೂ ನೇರ ಸಂಬಂಧವಿದೆ. ಹೇಗೆಂದರೆ ಗ್ರಾಮಪಂಚಾಯಿತಿಯಲ್ಲಿ ಜಾರಿಯಲ್ಲಿರುವ ಯೋಜನೆಗಳ ಬಗ್ಗೆ ಅರಿವಿದ್ದರೆ ತಮ್ಮ ಗ್ರಾಮದ ಅಭಿವೃದ್ಧಿಗೆ ಯಾವ ಯೋಜನೆಗಳು ಸೂಕ್ತ ಎಂದು ಗ್ರಾಮಸಭೆಯಲ್ಲಿ ಚರ್ಚಿಸಿ ಗ್ರಾಮಪಂಚಾಯಿತಿಯ ಅನುದಾನವನ್ನು ಸೂಕ್ತವಾಗಿ ಬಳಕೆ ಮಾಡಿಕೊಂಡು ಗ್ರಾಮಪಂಚಾಯಿತಿ ಸೌಕರ್ಯಗಳನ್ನು ನೀಡಲು ಸಾಧ್ಯವಾಗುತ್ತದೆ. ತಮ್ಮ ಸಮುದಾಯಗಳಿಗೆ ಯಾವ ತೆರನಾದ ಅಭಿವೃದ್ಧಿ ಯೋಜನೆಗಳು ಸಿಗುತ್ತಿವೆ ಎಂದು ತಿಳಿದು ಆ ಯೋಜನೆಗಳ ಫಲಾನುಭವಿಗಳಾಗಿ ಅಭಿವೃದ್ಧಿ ಹೊಂದಲು ಸಾಧ್ಯವಾಗುತ್ತದೆ. ಇತರೆ ಸಮುದಾಯಗಳ ಮಾದರಿಯಲ್ಲಿ ಜೀವನ ಸಾಗಿಸುವ ಸಾಮಾಜಿಕ ವಾತಾವರಣ ನಿರ್ಮಾಣವಾಗುತ್ತದೆ. ಮಾಹಿತಿಯನ್ನು ಪಡೆಯುವುದು ಪ್ರತಿಯೊಬ್ಬ ನಾಗರಿಕನ ಹಕ್ಕು ಹಾಗೂ ಸಾರ್ವಜನಿಕ ಸಂಸ್ಥೆಗಳು ತಮ್ಮ ಆಡಳಿತಾತ್ಮಕ ಮತ್ತು ಹಣಕಾಸಿನ ವ್ಯವಹಾರಗಳ ಕುರಿತು ಸಾರ್ವಜನಿಕರಿಗೆ ಮಾಹಿತಿ ನೀಡುವುದು ಆ ಸಂಸ್ಥೆಗಳ ಜವಾಬ್ದಾರಿಯೂ ಆಗಿರುತ್ತದೆ.

### ಸಾಮಾಜಿಕ ಜಮಾಬಂದಿಯಲ್ಲಿ ಚರ್ಚಿಸುವ ವಿಷಯಗಳು

ಸಾಮಾನ್ಯವಾಗಿ ಸಾರ್ವಜನಿಕರು ಗ್ರಾಮಸಭೆಗಳು ಎಂದರೆ ಫಲಾನುಭವಿಗಳ ಆಯ್ಕೆ ಮಾಡುವುದಕ್ಕೆ ಸೇರಿರುತ್ತಾರೆ ಎಂದು ಭಾವಿಸುತ್ತಾರೆ. ಅದಕ್ಕೆ ಸಾಮಾನ್ಯ ಗ್ರಾಮಸಭೆಯ ಸ್ವರೂಪ ಕಾರಣವೆಂದು ಹೇಳಬಹುದು. ಸಾಮಾಜಿಕ ಜಮಾಬಂದಿಯಲ್ಲಿ ಕೇವಲ ಆರ್ಥಿಕ ವಿಷಯಗಳ ಚರ್ಚೆಗಳು ಇರುತ್ತವೆ ಎಂದು ಹಲವು ಜನರು ಭಾವಿಸಿಕೊಂಡಿದ್ದಾರೆ. ಹಾಗಾಗಿ ಬಹಳಷ್ಟು ಅನಕ್ಷರಸ್ಥ ಗ್ರಾಮಸ್ಥರು ಭಾಗವಹಿಸುವುದಿಲ್ಲ. ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಯಾವ ವಿಷಯ ಗಳನ್ನು ಚರ್ಚಿಸಲು ಅವಕಾಶವಿದೆ ಎಂದು ಗ್ರಾಮಸ್ಥರಿಗೆ ಅರಿವಿಲ್ಲದಿರುವುದರಿಂದ ಸಾಮಾಜಿಕ ಜಮಾಬಂದಿಯು ನಿರೀಕ್ಷಿಸಿದ ಮಟ್ಟದಲ್ಲಿ ಕಾರ್ಯಾನುಷ್ಠಾನಗೊಳ್ಳದಿರುವುದು ಕಂಡು ಬಂದಿದೆ.

ಗ್ರಾಮಮಟ್ಟದಲ್ಲಿ ಇಂದಿಗೂ ಆರ್ಥಿಕ ಸಂಪನ್ಮೂಲಗಳ ಕೊರತೆಯಿಂದ ಹಲವು ಕುಟುಂಬಗಳು ಸಾಮಾನ್ಯ ಮೂಲಭೂತ ಸೌಕರ್ಯಗಳಿಂದ ದೂರ ಉಳಿದಿವೆ. ಸರ್ಕಾರದಿಂದ ಸಿಗಬೇಕಾದ ಸೌಲಭ್ಯಗಳ ಕುರಿತು ಮಾಹಿತಿ ಮತ್ತು ಅರಿವು ಇಲ್ಲದಿರುವುದರಿಂದ ಗ್ರಾಮಗಳಲ್ಲಿ ತಳ ಸಮುದಾಯಗಳು ಅಂದರೆ ಸಾಮಾಜಿಕವಾಗಿ ಹಿಂದುಳಿದಿರುವ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಜನರಿಗೆ ಇಂದಿಗೂ ಮೂಲಭೂತ ಸೌಕರ್ಯಗಳು ಸಿಗದಿರುವುದು ಕಂಡುಬರುತ್ತಿದೆ. ಹಿಂದುಳಿದ ಜನರು ಗ್ರಾಮಸಭೆಗಳಲ್ಲಿ ಭಾಗವಹಿಸದೆ ಸ್ಥಳೀಯ ರಾಜಕೀಯದಿಂದಾಗಿ ಗ್ರಾಮಪಂಚಾಯಿತಿ ಕಚೇರಿಗಳಿಂದ ದೂರ ಉಳಿದಿದ್ದಾರೆ. ಆ ಮೂಲಕ ಗ್ರಾಮಪಂಚಾಯಿತಿಯ ಯೋಜನೆಗಳನ್ನು ಪಡೆಯುವಲ್ಲಿ ತಳಸಮುದಾಯಗಳು ದೂರ ಉಳಿದಿರುವುದು ಕಂಡುಬಂದಿದೆ.

### ಸಾಮಾಜಿಕ ಜಮಾಬಂದಿ ತಂಡದ ಅಧಿಕಾರಿಗಳಿಗೆ ಎದುರಾಗುವ ಸಮಸ್ಯೆಗಳು

ಗ್ರಾಮಪಂಚಾಯಿತಿಯು ಸಾಮಾಜಿಕ ಜಮಾಬಂದಿ ಗ್ರಾಮಸಭೆ ಮಾಡುವಂತಹ ಅಧಿಕಾರಿಗಳ ತಂಡಕ್ಕೆ ಸೂಕ್ತ ತರಬೇತಿ ನೀಡಿದ ನಂತರ ಸೂಕ್ತವಾಗಿ ಕೆಲಸ ಮಾಡುವಂತಹ ಕಿಟ್‌ಗಳನ್ನು ನೀಡದಿರುವುದು ಸಾಮಾಜಿಕ ಜಮಾಬಂದಿಯ ಸಕ್ರಿಯ ಅನುಷ್ಠಾನಕ್ಕೆ ಅಡ್ಡಿಯುಂಟು ಮಾಡುತ್ತದೆ. ಹಾಗಾಗಿ ಜಿಲ್ಲಾ ಮತ್ತು ತಾಲ್ಲೂಕು ಹಂತದ ಕಛೇರಿಗಳಿಂದ ಕಾಲಕಾಲಕ್ಕೆ ಸರಿಯಾಗಿ ಸಾಮಾಜಿಕ ಜಮಾಬಂದಿ ನಡೆಸುವಂತಹ ಆದೇಶವನ್ನು ಹೊರಡಿಸಬೇಕು.

### ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯಲ್ಲಿನ ತೊಡಕುಗಳು

**ಸಾಮಾಜಿಕ ಕಾರಣಗಳು:** ಪ್ರತಿ ಗ್ರಾಮಪಂಚಾಯಿತಿಯಲ್ಲಿ ಒಂದೇ ತೆರನಾದ ಆಡಳಿತ ಮತ್ತು ಸಾಮಾಜಿಕ ಸ್ಥಿತಿಯು ಇರುವುದಿಲ್ಲ. ಇದಕ್ಕೆ ಸ್ಥಳೀಯ ರಾಜಕೀಯ ಅಂಶಗಳು ಕಾರಣವಾದರೆ ಮತ್ತೆ ಕೆಲವು ಗ್ರಾಮಪಂಚಾಯಿತಿಗಳಲ್ಲಿ ಸಾಮಾಜಿಕ ಮತ್ತು ಆರ್ಥಿಕ ಅಂಶಗಳು ಕಾರಣವಾಗುವುದು

ಕಂಡುಬರುತ್ತವೆ. ಗ್ರಾಮಪಂಚಾಯಿತಿಯ ಅಧಿಕಾರಿಗಳು ಬಹುಸಂಖ್ಯೆ ಸದಸ್ಯರ ಬೆಂಬಲ ಹೊಂದಿರುವ ಜನರ ಅಥವಾ ಸಮುದಾಯಗಳ ಕೈಯಲ್ಲಿ ಇರುವುದನ್ನು ಗಮನಿಸಬಹುದಾಗಿದೆ. ಆ ಸಮುದಾಯದ ಜನರು ತೆಗೆದುಕೊಳ್ಳುವ ನಿರ್ಧಾರವೇ ಗ್ರಾಮದಲ್ಲಿ ಅಂತಿಮ ಎಂಬ ರೀತಿಯಲ್ಲಿ ಗ್ರಾಮದ ಅಭಿಪ್ರಾಯವನ್ನು ಒಂದು ಅಥವಾ ಕೆಲವೇ ಸಮುದಾಯಗಳ ಕೈಯಲ್ಲಿ ಹಿಡಿದಿಟ್ಟುಕೊಂಡಿರುವುದು ಸಾಮಾಜಿಕ ಜಮಾಬಂದಿ ಗ್ರಾಮಸಭೆ ನಿಯಾಮನುಸಾರ ನಡೆಯಲು ಸಾಧ್ಯವಾಗದಿರುವುದಕ್ಕೆ ಕಾರಣವಾಗಿರುವುದು ಕಂಡುಬಂದಿದೆ.

**ರಾಜಕೀಯ ಕಾರಣಗಳು:** ನಗರಪ್ರದೇಶಕ್ಕೆ ಹತ್ತಿರ ಇರುವ ಗ್ರಾಮಪಂಚಾಯಿತಿಗಳ ಆಡಳಿತದ ಮೇಲೆ ಮತ್ತು ಸ್ಥಳೀಯ ರಾಜಕೀಯದ ಮೇಲೆ ನಗರದ ರಾಜಕೀಯ ನಾಯಕರ ಪ್ರಭಾವ ಮತ್ತು ರಾಜಕೀಯ ಪಕ್ಷಗಳ ಪ್ರಭಾವ ಅಧಿಕವಾಗಿರುತ್ತದೆ. ಗ್ರಾಮಪಂಚಾಯಿತಿಯ ಆಡಳಿತದಲ್ಲಿಯೂ ಪಕ್ಕದ ನಗರಪ್ರದೇಶದ ರಾಜಕೀಯ ನಾಯಕರ ಪ್ರಭಾವವನ್ನು ಬಳಸಿ ಚುನಾವಣೆಯಲ್ಲಿ ಗೆಲ್ಲುವುದು ಮತ್ತು ಆ ರಾಜಕೀಯ ನಾಯಕರ ಸಮುದಾಯದ ಪರವಾಗಿ ಸ್ಥಳೀಯ ಸಂಸ್ಥೆಗಳಲ್ಲಿ ಸದಸ್ಯರು ಕೆಲಸ ಮಾಡುವುದು ಕಂಡುಬಂದಿದೆ. ಸಾರ್ವಜನಿಕ ಹಿತಾಸಕ್ತಿಗಿಂತ ರಾಜಕೀಯ ನಾಯಕರ ಹಿತಾಸಕ್ತಿಗೆ ಗ್ರಾಮಪಂಚಾಯಿತಿಗಳು ಕೆಲಸ ಮಾಡುವುದರಿಂದ ಗ್ರಾಮಪಂಚಾಯಿತಿಗಳ ಆಡಳಿತವು ಜನಪರವಾಗಿರದೆ ಪಾರದರ್ಶಕತೆಯನ್ನು ಕಾಯ್ದುಕೊಳ್ಳಲಾಗುವುದಿಲ್ಲ. ಹಾಗಾಗಿ ಈ ಮಾದರಿ ರಾಜಕೀಯ ಕಾರಣಗಳಿಂದ ಸಾಮಾಜಿಕ ಜಮಾಬಂದಿ ಗ್ರಾಮಸಭೆಯು ಸಕ್ರಿಯವಾಗಿ ಆಗದಿರುವುದು ಕಂಡುಬಂದಿದೆ.

**ಆರ್ಥಿಕ ಕಾರಣಗಳು:** ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿಯ ಸಭೆಯನ್ನು ನಿರ್ವಹಿಸಲು ಮತ್ತು ಸಾಮಾಜಿಕ ಜಮಾಬಂದಿ ಸಭೆಯ ಪ್ರಚಾರಕ್ಕೆ ಬೇಕಾಗುವ ಹಣಕಾಸಿನ ಆರ್ಥಿಕ ಸಮಸ್ಯೆಗಳು ಕೆಲವು ಗ್ರಾಮಪಂಚಾಯಿತಿಗಳಲ್ಲಿ ಕಂಡುಬರುತ್ತವೆ.

**ಕೊನೆ ಟಿಪ್ಪಣಿಗಳು**

೧. ಸ್ಟಡೀಸ್ ಸ್ಟೇಟ್ ಅಡ್ಮಿನಿಸ್ಟ್ರೇಷನ್(ಎಡಿಟ್) ಸಿ.ಎಸ್.ಹಾಲಪ್ಪ, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ೧೯೭೦, ಪು.೯-೧೦

೨. ಅದೇ, ಪು.೨೧-೨೨

೩. ಕರ್ನಾಟಕ ಸಂಗಾತಿ, (ಸಂ) ಬರಗೂರು ರಾಮಚಂದ್ರಪ್ಪ, ಕನ್ನಡ ಅಭಿವೃದ್ಧಿ ಪ್ರಾಧಿಕಾರ ವಿಧಾನಸೌಧ, ಬೆಂಗಳೂರು, ೨೦೦೨-೨೦೧೩, ಪು.೧೧

೪. ಅದೇ, ಪು.೧೬-೧೮

೫. ಗ್ರಾಮೀಣ ಅಭಿವೃದ್ಧಿಯಲ್ಲಿ ಗ್ರಾಮಸಭೆ ಮತ್ತು ಗ್ರಾಮಪಂಚಾಯಿತಿಗಳ ಪಾತ್ರ , ಕೆ.ಚಂದ್ರಶೇಖರ, ವಿನುತ ಪಬ್ಲಿಕೇಷನ್, ಭದ್ರಾವತಿ, ೨೦೦೧, ಪು.೨೪-೨೬

೬. ಅದೇ, ಪು.೨೬-೨೮

೭. ಭಾರತದ ಇತಿಹಾಸ(ಮೂಲ), ರೊಮಿಲಾ ಥಾಪರ್(ಅನು) ಸದಾನಂದ ಕನವಳ್ಳಿ, ಕನ್ನಡ ಅಧ್ಯಯನ ಸಂಸ್ಥೆ ಮೈಸೂರು, ಮೈಸೂರು ವಿಶ್ವವಿದ್ಯಾನಿಲಯ, ೧೯೭೬, ಪು.೮೪

೮. ಸಮಗ್ರ ಭಾರತ ಇತಿಹಾಸ, ಕೆ.ಸದಾಶಿವ, ಪ್ರಿಯದರ್ಶಿನಿ ಪ್ರಕಾಶನ, ಮೈಸೂರು, ೨೦೦೬, ಪು.೪೯-೫೦

೯. ಕರ್ನಾಟಕ ಪಂಚಾಯತ್‌ರಾಜ್ ಅಧಿನಿಯಮ ೧೯೯೩ ಪ್ರೊ.ಎಂ.ಎಂ.ಬಡ್ಡಿ ಆಕಳವಾಡಿ ಬುಕ್ ಡಿಪೋ, ೧೯೯೩, ಪು.೪೭-೪೮

೧೦. ಪಂಚಾಯತ್ ಅಭಿವೃದ್ಧಿ ಆಧಿಕಾರಿಗಳಿಗೆ ಪಂಚಾಯತ್‌ರಾಜ್ ವ್ಯವಸ್ಥೆಯ ಕುರಿತು ಬುನಾದಿ, ತರಬೇತಿ ಕೈಪಿಡಿ, ೨೦೧೩-೧೪, ಭಾಗ-೧, ಅಬ್ದುಲ್ ನಜೀರ್‌ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆ, ಲಲಿತ ಮಹಲ್ ರಸ್ತೆ, ಮೈಸೂರು, ಪು.೧೫೬-೨೫೯

೧೧. ಅದೇ, ಪು.೧೬೨

೧೨. ಅದೇ, ಪು.೧೬೪

೧೩. ಸೋಷಿಯಲ್ ಆಡಿಟ್ ಗ್ರಾಮಸಭಾ ಮತ್ತು ಪಂಚಾಯತ್‌ರಾಜ್, ಪ್ಲಾನಿಂಗ್ ಕಮೀಷನ್ ಭಾರತ ಸರ್ಕಾರ, ಆಕ್ಟೋಬರ್, ೨೦೦೫, ಪು.೪-೯

೧೪. ಅದೇ, ಪು.೪-೯

೧೫. ಅದೇ, ಪು.೫೯

೧೬. ಅದೇ, ಪು.೬೧

೧೭. ಅದೇ, ಪು.೫೪-೫೫

೧೮. ಅದೇ, ಪು.೫೪-೫೫

೧೯. ಅದೇ, ಪು.೫೭

೨೦. ಕರ್ನಾಟಕ ರಾಜ್ಯ ಪತ್ರ ಭಾಗ-೪ಎ, ಸಂಪುಟ ೧೪೭, ಗುರುವಾರ ಜೂನ್ ಸಂಚಿಕೆ ೨೩, ೨೦೧೧, ಪು.೭೯೩-೭೯೫

೨೧. ಅದೇ, ಪು.೭೯೫

೨೩. ಅದೇ, ಪು.೭೯೭

೨೪. ಮಾಹಿತಿ ಹಕ್ಕು ಕಾನೂನು ೨೦೦೫ ಬಳಸುವುದು ಹೇಗೆ?(ಅನು)ವೈ.ಜಿ. ಮುರಳೀಧರ(ಸಂ), ಗ್ರಾಹಕರ ಹಕ್ಕು ಶಿಕ್ಷಣ ಮತ್ತು ಜಾಗೃತಿ ವೇದಿಕೆ, ಕ್ರಿಯೇಶನ್, ಬೆಂಗಳೂರು, ೨೦೦೯, ಪು.೧೦-೧೨

೨೫. ಅದೇ, ಪು.೧೯-೨೦

# ಅಧ್ಯಾಯ ನಾಲ್ಕು

## ಸಾಮಾಜಿಕ ಜಮಾಬಂದಿ

## ಗ್ರಾಮಸಭೆಯ ಸಾಮಾಜಿಕ ಆಯಾಮಗಳು

೪.೧. ಮಲಪನಗುಡಿ ಗ್ರಾಮಪಂಚಾಯಿತಿ ಜಮಾಬಂದಿ ಗ್ರಾಮಸಭೆ

೪.೨. ಸೊವೇನಹಳ್ಳಿ ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಗ್ರಾಮಸಭೆ

೪.೩. ಚೋರನೂರು ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಗ್ರಾಮಸಭೆ

೪.೪. ಸಂಗನಕಲ್ಲು ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಗ್ರಾಮಸಭೆ

೪.೫. ಮೋಕಾ ಗ್ರಾಮ ಪಂಚಾಯಿತಿಯ ಸಾಮಾಜಿಕ ಜಮಾಬಂದಿ ಗ್ರಾಮಸಭೆ

೪.೬. ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯ ಸಾಮಾಜಿಕ ಜಮಾಬಂದಿ ಗ್ರಾಮಸಭೆ

೪.೭. ಪಾಪಿನಾಯಕನಹಳ್ಳಿ ಗ್ರಾಮ ಪಂಚಾಯಿತಿಯ ಸಾಮಾಜಿಕ ಜಮಾಬಂದಿ ಗ್ರಾಮಸಭೆ

೪.೮. ಗುಡೆಕೋಟೆ ಗ್ರಾಮ ಪಂಚಾಯಿತಿಯ ಸಾಮಾಜಿಕ ಜಮಾಬಂದಿ ಗ್ರಾಮಸಭೆ

ಅಧ್ಯಾಯ ನಾಲ್ಕು

# ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಸಾಮಾಜಿಕ ಆಯಾಮಗಳು

**ಪೀಠಿಕೆ**

ಗ್ರಾಮಪಂಚಾಯಿತಿಗಳಲ್ಲಿ ೨೦೦೫ರಿಂದಲೇ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಪ್ರತಿ ವರ್ಷ ಆಗಸ್ಟ್ ೧೬ರಿಂದ ಸೆಪ್ಟೆಂಬರ್ ೧೫ರವರೆಗೆ ಗ್ರಾಮಪಂಚಾಯಿತಿಗಳ ಆರ್ಥಿಕ ಮತ್ತು ಆರ್ಥಿಕೇತರ ಕಾರ್ಯಚಟುವಟಿಕೆಗಳನ್ನು ಕುರಿತು ಸಾರ್ವಜನಿಕರ ಗ್ರಾಮಸಭೆಯನ್ನು ನಡೆಸಿ ಇಡೀ ವರ್ಷದ ಗ್ರಾಮಪಂಚಾಯಿತಿಯ ಪ್ರಗತಿಯನ್ನು ಜನತೆಯ ಸಮಕ್ಷಮದಲ್ಲಿ ವಿವರಿಸಿ ಮುಂದಿನ ವರ್ಷದ ಕಾಮಗಾರಿಗಳ ಅನುಮೋದನೆ ಪಡೆಯಲಾಗುವುದು. ಆದರೆ ಕ್ಷೇತ್ರಕಾರ್ಯ ಸಂದರ್ಭದಲ್ಲಿ ಗ್ರಾಮಪಂಚಾಯಿತಿಗಳ ಸಾಮಾಜಿಕ ಜಮಾಬಂದಿ ಗ್ರಾಮಸಭೆಗಳು ಯಾವ ವಿಷಯಗಳ ಕುರಿತು ಚರ್ಚಿಸಿದ್ದಾರೆ. ಯಾವ ಗ್ರಾಮಪಂಚಾಯಿತಿಯ ಜಮಾಬಂದಿ ಸಭೆಯಲ್ಲಿ ಎಷ್ಟು ಜನರು ಭಾಗವಹಿಸಿದ್ದಾರೆ. ಭಾಗವಹಿಸಿದ ಜನತೆಯಲ್ಲಿ ಯಾವುದಾದರೂ ಯೋಜನೆ ಫಲಾನುಭವಿಗಳ ಕುರಿತು, ಕಾಮಗಾರಿಗಳ ಗುಣಮಟ್ಟ ಕುರಿತು ಪ್ರಶ್ನೆಗಳು ಎತ್ತಲಾಗಿದೆಯೇ ಎಂಬ ಅಂಶಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ ಹಾಗೂ ಅಧ್ಯಯನದಲ್ಲಿ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಕುರಿತು ಗ್ರಾಮದ ಜನರಲ್ಲಿ ಎಷ್ಟರಮಟ್ಟಿಗೆ ಅರಿವು ಇದೆ. ಅರಿವು ಇರುವ ಜನತೆಯಲ್ಲಿ ಎಷ್ಟು ಸಾರ್ವಜನಿಕರು ಜಮಾಬಂದಿ ಸಭೆಯಲ್ಲಿ ಭಾಗವಹಿಸಿದ್ದಾರೆ ಎಂದು ತಿಳಿಯಬಹುದಾಗಿದೆ ಹಾಗೂ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳ ಜನತೆಯ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಫಲಾನುಭವಿಗಳು ಆಗಿದ್ದಾರೆಯೇ? ಎಂಬುದನ್ನು ಈ ಅಧ್ಯಾಯದಲ್ಲಿ ಗುರುತಿಸಲಾಗಿದೆ.

## ೪.೧. ಮಲಪನಗುಡಿ ಗ್ರಾಮಪಂಚಾಯಿತಿ ಜಮಾಬಂದಿ ಗ್ರಾಮಸಭೆ

೨೦೧೩-೧೪ನೇ ಸಾಲಿನ ಮಲಪನಗುಡಿ ಗ್ರಾಮಪಂಚಾಯಿತಿ ಜಮಾಬಂದಿ ಗ್ರಾಮಸಭೆ ನವೆಂಬರ್ ೨೦೧೪ ಬೆಳಗ್ಗೆ ೧೧ ಗಂಟೆಗೆ ಪಂಚಾಯಿತಿ ಕಾರ್ಯಾಲಯದಲ್ಲಿ ಸಭೆಯನ್ನು

ಆಯೋಜಿಸಲಾಯಿತು. ನೋಡಲ್ ಅಧಿಕಾರಿಗಳು, ಅಧ್ಯಕ್ಷರು, ಉಪಾಧ್ಯಕ್ಷರು ಪಂಚಾಯಿತಿ ಸದಸ್ಯರು ಮತ್ತು ಗ್ರಾಮಸ್ಥರು ಸೇರಿದಂತೆ ಸಭೆ ನಡೆಸಲಾಯಿತು.

**ಜಮಾಬಂದಿ ಗ್ರಾಮಸಭೆಯಲ್ಲಿ ಚರ್ಚಿಸಲಾದ ಅಂಶಗಳು**

೨೦೧೩-೧೪ನೇ ಸಾಲಿನ ಎಲ್ಲಾ ಯೋಜನೆಗಳ ಕಾಮಗಾರಿಗಳ ಕಡತ ಪರಿಶೀಲಿಸಿ ಓದಿ ಹೇಳಲಾಯಿತು.

ಕಾಮಗಾರಿಗಳ ಸ್ಥಳಕ್ಕೆ ಭೇಟಿ ಕೊಟ್ಟು ಕಾಮಗಾರಿ ಸ್ಥಳಗಳನ್ನು ಪರಿಶೀಲಿಸಲಾಯಿತು.

ಸದರಿ ಕಾಮಗಾರಿಗಳ ಕಡತವನ್ನು ಪರಿಶೀಲಿಸಿ ಕಾಮಗಾರಿಗಳನ್ನು ಪರಿಶೀಲಿಸಲಾಯಿತು.

೨೦೧೪ನೇ ಸಾಲಿನಲ್ಲಿ ಮಂಜೂರಾದ ಶೌಚಾಲಯಗಳನ್ನು ಪರಿಶೀಲನೆ ಮಾಡಲಾಯಿತು.

ಸದರಿ ಹೆಚ್ಚಿನ ದಾಖಲೆಗಳನ್ನು ಪರಿಶೀಲನೆ ಮಾಡಲಾಯಿತು. ಪಾಸ್‌ಪುಸ್ತಕ ಪ್ರಕಾರ ರೂ. ೧೯೭೪೯ ಇತ್ತು.

ಆಶ್ರಯ ಯೋಜನೆ ಕುರಿತಾದ ೨೦೧೪ನೇ ಸಾಲಿನಲ್ಲಿ ೧೭೬೦೫ ರೂ.ಹಣ ಬ್ಯಾಂಕ್ ಖಾತೆ ಇರಬೇಕಾಗಿತ್ತು. ಅದು ಸರಿಯಾಗಿತ್ತು. ೨೦೧೪ನೇ ಸಾಲಿನ ಹೊಂದಾಣಿಕೆ ಸರಿಯಾಗಿತ್ತು. ಐ.ಎ.ವೈ. ಯೋಜನೆ ನಗದು ಪುಸ್ತಕ ಸರಿಯಾದ ಕಾಮಗಾರಿಗಳಿಗೆ ಖರ್ಚು ಮಾಡಿರುವುದು ಕಂಡುಬಂದಿತ್ತು.

೧೩ನೇ ಹಣಕಾಸಿನ ಜಮಾಖರ್ಚುಗಳ ಹೊಂದಾಣಿಕೆಗಳ ಕುರಿತು ಜಮಾಬಂದಿ ಗ್ರಾಮಸಭೆಯಲ್ಲಿ ಓದಿ ಹೇಳಲಾಯಿತು.

ಹಣ ಖರ್ಚು ಮಾಡಿದ ವಿವರಗಳನ್ನು ಓದಿ ಹೇಳಲಾಯಿತು. ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ನಡವಳಿ ಪುಸ್ತಕದಲ್ಲಿ ದಾಖಲಿಸಲಾಯಿತು.

ಪಂಚಾಯಿತಿ ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ಕ್ಷೇತ್ರ ಶಿಕ್ಷಣಾಧಿಕಾರಿಗಳು ನೋಡಲ್ ಅಧಿಕಾರಿಯಾಗಿ ಸಭೆಯಲ್ಲಿ ಹಾಜರಾಗಿದ್ದರು. ಇಬ್ಬರು ಡಿ.ಆರ್.ಪಿ.ಗಳು ಒಬ್ಬರು ಸಿ.ಆರ್.ಪಿ. ಗ್ರಾಮಪಂಚಾಯಿತಿ ಅಧ್ಯಕ್ಷರು, ಪಂಚಾಯಿತಿ ಪಿ.ಡಿ.ಓ. ಸೇರಿದಂತೆ ಗ್ರಾಮಸ್ಥರು ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿಸಿದ್ದರು. ಜಮಾಬಂದಿ ಗ್ರಾಮಸಭೆಯಲ್ಲಿ ಭಾಗವಹಿಸಿದ ೩೦ ಜನರಲ್ಲಿ ಮೂವರು ಅನಕ್ಷರಸ್ಥರು ಭಾಗವಹಿಸಿರುವುದನ್ನು ಗಮನಿಸಬಹುದಾಗಿದೆ. ಭಾಗವಹಿಸ್ಲಿ ಸಾಕ್ಷಿ ಸಹಿ ಮಾಡಿದ ಗ್ರಾಮಸ್ಥರು ಅಕ್ಷರಸ್ಥರಾಗಿರುವುದು ದಾಖಲೆಗಳಿಂದ ತಿಳಿದುಬಂದಿತ್ತು.

**೨೦೧೫ನೇ ಸಾಮಾಜಿಕ ಜಮಾಬಂದಿಯ ಗ್ರಾಮಸಭೆಯ ವಿವರಗಳು**

ಅಕ್ಟೋಬರ್ ೨೦೧೫ರಂದು ಮಧ್ಯಾಹ್ನ ೧.೩೦ಕ್ಕೆ ಗ್ರಾಮಪಂಚಾಯಿತಿಯ ಕಾರ್ಯಾಲಯದಲ್ಲಿ ಗ್ರಾಮಪಂಚಾಯಿತಿ ಅಧ್ಯಕ್ಷರ ಅಧ್ಯಕ್ಷತೆಯಲ್ಲಿ ಪಂಚಾಯಿತಿ ಜಮಾಬಂದಿ ಸಭೆಯನ್ನು ನಡೆಸಲಾಯಿತು. ಈ ಸಭೆಯಲ್ಲಿ ಮಲಪನಗುಡಿ ಪಿ.ಡಿ.ಓ. ಅಧ್ಯಕ್ಷರು, ಇಬ್ಬರು ಬಿ.ಆರ್.ಪಿ. ಹೊಸಪೇಟೆ ಸೇರಿದಂತೆ ೪೬ ಜನರು ಸಭೆಯ ಸಾಕ್ಷಿಯಾಗಿ ಸಹಿ ಹಾಕಿರುವುದನ್ನು ನಡವಳಿ ದಾಖಲೆಗಳಲ್ಲಿ ನಮೂದಿಸಲಾಗಿದೆ.

**ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ಚರ್ಚಿಸಲಾದ ಅಂಶಗಳು**

ಎಲ್ಲಾ ಯೋಜನೆಗಳ ಕಾಮಗಾರಿಗಳ ಕಡತ ಪರಿಶೀಲಿಸಿ ಓದಿ ಹೇಳಲಾಯಿತು. ರಿಜಿಸ್ಟರ್‌ಗಳನ್ನು ಪರಿಶೀಲಿಸಲಾಯಿತು.

ಕಾಮಗಾರಿ ಸ್ಥಳಕ್ಕೆ ಭೇಟಿ ಕೊಟ್ಟು ಕಾಮಗಾರಿ ಸ್ಥಳವನ್ನು ಪರಿಶೀಲಿಸಲಾಯಿತು.

೨೦೧೪-೧೫ನೇ ಸಾಲಿನ ಮಂಜೂರಾದ ಶೌಚಾಲಯಗಳನ್ನು ಪರಿಶೀಲನೆ ಮಾಡಲಾಯಿತು.

ಸದರಿ ಹೆಚ್ಚಿನ ವ್ಯವಹಾರಗಳನ್ನು ಪರಿಶೀಲಿಸಿ ಓದಿ ಹೇಳಲಾಯಿತು.

೨೦೧೪-೧೫ನೇ ಸಾಲಿನ ಪಾಸ್‌ಬುಕ್ ಪರಿಶೀಲಿಸಲಾಯಿತು.

೨೦೧೫ರ ಆಶ್ರಯ ಯೋಜನೆ ಪಾಸ್‌ಬುಕ್ಕನ್ನು ಖರ್ಚು ವೆಚ್ಚಗಳ ಲೆಕ್ಕ ಪರಿಶೋಧನೆಗೆ ಒಳಪಡಿಸಲಾಯಿತು.

ಕುಡಿಯುವ ನೀರಿನ ಕುರಿತಾಗಿ ಖರ್ಚು ವೆಚ್ಚಗಳ ಪರಿಶೀಲನೆ ಐ.ಓ.ವೈ. ಮತ್ತು ೧೩ನೇ ಹಣಕಾಸಿನ ಕುರಿತಾಗಿ ಪಾಸ್‌ಬುಕ್‌ಗಳ ಪರಿಶೀಲನೆ ಮಾಡಲಾಯಿತು. ಎಂ.ಎನ್.ಆರ್.ಇ.ಜಿ.ಎ. ಈ ಎಲ್ಲಾ ಯೋಜನೆಗಳಿಗೆ ಮಾಡಿದ ಖರ್ಚು ವೆಚ್ಚಗಳ ವಿವರಗಳನ್ನು ಸಭೆಯಲ್ಲಿ ಓದಿ ಗ್ರಾಮಸ್ಥರಿಗೆ ತಿಳಿಸಲಾಯಿತು. ಈ ಜಮಾಬಂದಿ ಸಭೆಗೆ ೪೬ ಗ್ರಾಮಸ್ಥರು ಸಾಕ್ಷಿಯಾಗಿದ್ದಾರೆ.

**೪.೨. ಸೋವೇನಹಳ್ಳಿ ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಗ್ರಾಮಸಭೆ**

೨೦೦೫-೦೬ನೇ ಸಾಲಿನ ಜಮಾಬಂದಿ ಗ್ರಾಮಸಭೆಯನ್ನು ನಡೆಸಲಾಗಿತ್ತು. ವೀರಮ್ಮ ಅವರ ಅಧ್ಯಕ್ಷತೆಯಲ್ಲಿ ಜಮಾಬಂದಿ ಅಧಿಕಾರಿಗಳು, ಕಿರಿಯ ಅಭಿಯಂತರರು, ಗ್ರಾಮಪಂಚಾಯಿತಿಯ ಎಲ್ಲಾ ಸದಸ್ಯರು, ಗ್ರಾಮದ ಜನರು ಸೇರಿ ಜಮಾಬಂದಿ ಗ್ರಾಮಸಭೆಯನ್ನು ನಡೆಸಿದರು. ಆದರೆ ಈ ಗ್ರಾಮಸಭೆಯಲ್ಲಿ ಯಾವ ವಿಷಯಗಳನ್ನು ಚರ್ಚಿಸಲಾಯಿತು ಎಂಬ ವಿಷಯವನ್ನು ನಮೂದಿಸಲಾಗಿಲ್ಲ. ಈ ಜಮಾಬಂದಿ ಗ್ರಾಮಸಭೆಯಲ್ಲಿ ೩೬ ಜನರ ಸಹಿ ಪಡೆಯಲಾಯಿತು.

೨೦೦೬-೦೭ನೇ ಸಾಲಿನ ಸೆಪ್ಟೆಂಬರ್ ತಿಂಗಳಿನಲ್ಲಿ ಗ್ರಾಮಪಂಚಾಯಿತಿ ಕಾರ್ಯಾಲಯದಲ್ಲಿ ಆಯೋಜಿಸಲಾಯಿತು. ಸಭೆಯನ್ನು ತಾಲ್ಲೂಕು ನೋಡಲ್ ಅಧಿಕಾರಿ, ಕಿರಿಯ ಅಭಿಯಂತರರು, ಎಲ್ಲಾ ಪಂಚಾಯಿತಿ ಸದಸ್ಯರು ಈ ಪಂಚಾಯಿತಿ ಜಮಾಬಂದಿ ಗ್ರಾಮಸಭೆಯಲ್ಲಿ ಭಾಗವಹಿಸಿ ಸಭೆಯನ್ನು ಯಶಸ್ವಿಗೊಳಿಸಿದರು ಎಂದು ದಾಖಲಿಸಲಾಗಿದೆ.

ಪಂಚಾಯಿತಿ ಜಮಾಬಂದಿ ಗ್ರಾಮಸಭೆಯಲ್ಲಿ ೫೪ ಜನರು ಸಹಿ ಮಾಡಿದ್ದಾರೆ. ಇವರಲ್ಲಿ ಯಾರು ಅನಕ್ಷರಸ್ಥರು ಇಲ್ಲ ಎಂದು ಕಂಡುಬಂದಿದೆ.

**೨೦೧೪ನೇ ಸಾಲಿನ ಜಮಾಬಂದಿ ಗ್ರಾಮಸಭೆ**

೧ ನವೆಂಬರ್, ೨೦೧೪ರಂದು ಬೆಳಗ್ಗೆ ೧೧.೦೦ ಗಂಟೆಗೆ ಗ್ರಾಮಪಂಚಾಯಿತಿ ಕಾರ್ಯಾಲಯ ದಲ್ಲಿ ತಾಲ್ಲೂಕು ನೋಡಲ್ ಅಧಿಕಾರಿಗಳ ಅಧ್ಯಕ್ಷತೆಯಲ್ಲಿ ಸಭೆಯನ್ನು ಕರೆಯಲಾಯಿತು. ಜಮಾಬಂದಿಯ ತಾಲ್ಲೂಕು ಸಂಯೋಜಕರು ಸಭೆಯಲ್ಲಿ ಭಾಗವಹಿಸಿದ್ದರು. ಗ್ರಾಮಪಂಚಾಯಿತಿ ಎಲ್ಲಾ ಸದಸ್ಯರು ಸಂಪನ್ಮೂಲ ವ್ಯಕ್ತಿಗಳು, ಗ್ರಾಮದ ಸಾರ್ವಜನಿಕರು ಸಭೆಗೆ ಆಗಮಿಸಿ ಗ್ರಾಮಪಂಚಾಯಿತಿ ಜಮಾಬಂದಿ ಗ್ರಾಮಸಭೆಯಲ್ಲಿ ಚರ್ಚಿಸಿದರು.

**ಚರ್ಚಿಸಿದ ವಿಷಯಗಳು**

ಗ್ರಾಮಪಂಚಾಯಿತಿ ಕಡತಗಳ ಪರಿಶೀಲನೆ ನಡೆಸಲಾಯಿತು. ಫಲಾನುಭವಿಗಳ ಮನೆಗಳಿಗೆ ಭೇಟಿ ಅವರ ಅಭಿಪ್ರಾಯಗಳನ್ನು ಸಂಗ್ರಹಿಸಲಾಗಿತ್ತು. ಈ ಗ್ರಾಮಸಭೆಯಲ್ಲಿ ಸುಮಾರು ೨೦ ಜನರ ಸಹಿಯೊಂದಿಗೆ ನಡವಳಿಯಲ್ಲಿ ದಾಖಲೆಯನ್ನು ನಮೂದಿಸಲಾಗಿದೆ. ಸಭೆಯಲ್ಲಿ ಭಾಗವಹಿಸಿ ಸಾಕ್ಷಿಯಾಗಿ ಸಹಿ ಮಾಡಿದವರು ಎಲ್ಲಾ ಅಕ್ಷರಸ್ಥರಾಗಿರುವುದನ್ನು ಗಮನಿಸಬಹುದಾಗಿದೆ.

**೨೦೧೫ನೇ ಸಾಲಿನ ಜಮಾಬಂದಿ ಗ್ರಾಮಸಭೆ**

ಆಗಸ್ಟ್ ೨೦೧೫ರಂದು ಬೆಳಗ್ಗೆ ೧೧ ಗಂಟೆಗೆ ಗ್ರಾಮಪಂಚಾಯಿತಿ ಕಾರ್ಯಾಲಯದಲ್ಲಿ, ಗ್ರಾಮಪಂಚಾಯಿತಿ ಅಧ್ಯಕ್ಷರಾದ ಎಚ್.ಈರಮ್ಮ ಇವರ ಅಧ್ಯಕ್ಷತೆಯಲ್ಲಿ ಈ ಜಮಾಬಂದಿ ಗ್ರಾಮಸಭೆ ಯನ್ನು ಆಯೋಜಿಸಲಾಯಿತು. ತಾಲ್ಲೂಕು ಶಿಕ್ಷಣಾಧಿಕಾರಿಗಳು ಮತ್ತು ಗ್ರಾಮಪಂಚಾಯಿತಿ ಸದಸ್ಯರು ಉಪಸ್ಥಿತಿಯಲ್ಲಿ ಗ್ರಾಮಪಂಚಾಯಿತಿ ಜಮಾಬಂದಿ ಸಭೆ ನಡೆಸಲಾಯಿತು.

ಈ ಜಮಾಬಂದಿ ಗ್ರಾಮಸಭೆಯಲ್ಲಿ ಕಳೆದ ವರ್ಷದ ಮಾಹಿತಿಯನ್ನು ಮತ್ತು ಸಭೆಯ ಅಂತಿಮ ವರದಿಯನ್ನು ಎಲ್ಲರ ಸಮಕ್ಷಮದಲ್ಲಿ ತಿಳಿಸಲಾಯಿತು. ನಡವಳಿ ದಾಖಲೆಗಳಲ್ಲಿ ಗ್ರಾಮಪಂಚಾಯಿತಿ ಜಮಾಬಂದಿ ಗ್ರಾಮಸಭೆಯಲ್ಲಿ ಚರ್ಚಿಸಿ ವಿಷಯಗಳ ಕುರಿತು ಸಮೂದಿಸಲಾಗಿಲ್ಲ.

ಗ್ರಾಮಪಂಚಾಯಿತಿಯ ಅಧ್ಯಕ್ಷರು ಉಪಾಧ್ಯಕ್ಷರು, ರಾಜಕೀಯ ಅಧಿಕಾರಿಗಳಾಗಿ ಮತ್ತು ಆಡಳಿತ ಅಧಿಕಾರಿಗಳಾಗಿ, ಪಿ.ಡಿ.ಓ ಮತ್ತು ತಾಲ್ಲೂಕು ಕ್ಷೇತ್ರ ಶಿಕ್ಷಣಾಧಿಕಾರಿಗಳು ಸಭೆಯಲ್ಲಿ ಭಾಗವಹಿಸಿದ್ದಾರೆ. ಗ್ರಾಮಸ್ಥರು ಈ ಗ್ರಾಮಪಂಚಾಯಿತಿ ಜಮಾಬಂದಿ ಸಭೆಯ ಸಾಕ್ಷಿಯಾಗಿ ಸಹಿ ಆಗಿರುವುದನ್ನು ಗಮನಿಸಬಹುದಾಗಿದೆ.

**೨೦೧೫-೧೬ನೇ ಸಾಲಿನ ಪಂಚಾಯಿತಿ ಜಮಾಬಂದಿ ಗ್ರಾಮಸಭೆ**

ಆಗಸ್ಟ್ ತಿಂಗಳ ೨೦೧೫ರಂದು ಬೆಳಗ್ಗೆ ೧೧ ಗಂಟೆಗೆ ಗ್ರಾಮಪಂಚಾಯಿತಿ ಕಾರ್ಯಾಲಯದಲ್ಲಿ ಸಭೆಯನ್ನು ಆಯೋಜಿಸಲಾಯಿತು. ತಾಲ್ಲೂಕು ನೋಡಲ್ ಅಧಿಕಾರಿ ಅಧ್ಯಕ್ಷತೆಯಲ್ಲಿ ಜಮಾಬಂದಿ ಗ್ರಾಮಸಭೆ ನಡೆಸಲಾಯಿತು. ಈ ಜಮಾಬಂದಿ ಗ್ರಾಮಸಭೆಯಲ್ಲಿ ಅಧ್ಯಕ್ಷರು, ಉಪಾಧ್ಯಕ್ಷರು, ಸದಸ್ಯರು ಮತ್ತು ಸಂಪನ್ಮೂಲ ವ್ಯಕ್ತಿಗಳು ಭಾಗವಹಿಸಿದ್ದರು.

**ಗ್ರಾಮಸಭೆಯಲ್ಲಿ ಚರ್ಚಿಸಲಾದ ವಿಷಯಗಳು**

೧. ಹಿಂದಿನ ಸಭೆಯ ನಡವಳಿಯನ್ನು ಇಂದಿನ ಸಭೆಗೆ ಓದಿ ತಿಳಿಸಲಾಯಿತು.

೨೦೧೪ರಿಂದ ೨೦೧೫ರವರೆಗೆ ಆದ ಖರ್ಚು ರೂ.೭೦.೬೫ ಲಕ್ಷಕ್ಕೆ ಅನುಮೋದನೆ ದೊರೆತಿದ್ದು ಅದರಲ್ಲಿ ೧೭ ಕಾಮಗಾರಿಗಳ ಮಾಹಿತಿ ನೀಡಲಾಯಿತು.

ಸಾರ್ವಜಿಕ ಬೇಡಿಕೆ ೨ರಿಂದ ನಮೂನೆ ೫-೭ ನಿರ್ವಹಿಸಲಾಯಿತು. ಪ್ರಸ್ತುತ ವರ್ಷದ ಕಾಮಗಾರಿಗಳಿಗೆ ದೊರೆತ ಒಪ್ಪಿಗೆಯನ್ನು ಓದಿ ತಿಳಿಸಲಾಯಿತು. ಫಲಾನುಭವಿಗಳ ಮನೆಗಳಿಗೆ ಭೇಟಿ ನೀಡಿದ ಮಾಹಿತಿಯನ್ನು ಸಭೆಯಲ್ಲಿ ಓದಲಾಯಿತು. ಆಗ ಚಿಕ್ಕ ಮಕ್ಕಳನ್ನು ಕೂಲಿ ಕಾರ್ಮಿಕರಾಗಿ ಬಳಸಿಕೊಂಡ ಹಣ ಪಡೆದಿರುವುದು ಕಂಡುಬಂದಿತ್ತು. ಮನೆಯಲ್ಲಿ ವಾಸವಿಲ್ಲದವರು ಹೆಸರಲ್ಲಿ ಹಣ ಪಾವತಿಯಾಗಿರುವುದು ಮನೆ ಭೇಟಿಯ ಸಮಯದಲ್ಲಿ ತಿಳಿದುಬಂದಿತ್ತು.

೨೫ ಜನರು ಗ್ರಾಮಪಂಚಾಯಿತಿ ಜಮಾಬಂದಿ ಗ್ರಾಮಸಭೆಯಲ್ಲಿ ಭಾಗವಹಿಸಿ ಸಹಿ ಮಾಡಿರುವುದನ್ನು ಗಮನಿಸಲಾಯಿತು.

**೪.೩. ಚೋರನೂರು ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಗ್ರಾಮಸಭೆ**

ಚೋರನೂರು ಗ್ರಾಮಪಂಚಾಯಿತಿಯಲ್ಲಿ ೨೦೧೪-೧೫ನೇ ಸಾಲಿನ ಸಾಮಾಜಿಕ ಲೆಕ್ಕ ಪರಿಶೋಧನೆ ಗ್ರಾಮಸಭೆಯನ್ನು ನಡೆಸಲಾಯಿತು. ಸಾಮಾಜಿಕ ಲೆಕ್ಕಪರಿಶೋಧನಾ ಗ್ರಾಮಸಭೆಯನ್ನು ಜುಲೈ ೮ನೇ ತಾರೀಕು ಬೆಳಗ್ಗೆ ೧೧.೦೦ ಗಂಟೆಗೆ ಗ್ರಾಮಪಂಚಾಯಿತಿ ಆವರಣದಲ್ಲಿ ಆಯೋಜಿಸ ಲಾಯಿತು. ಈ ಗ್ರಾಮಸಭೆಯು ಅಧ್ಯಕ್ಷರು, ಉಪಾಧ್ಯಕ್ಷರು, ಸರ್ವಸದಸ್ಯರು ಸಾಮಾಜಿಕ ಲೆಕ್ಕ

ಪರಿಶೋಧನಾ ತಂಡದ ಅಧಿಕಾರಿಗಳನ್ನೊಳಗೊಂಡಂತೆ ಪ್ರಾರಂಭವಾಯಿತು. ಸಾಮಾಜಿಕ ಲೆಕ್ಕ ಪರಿಶೋಧಕರ ನೇತೃತ್ವದಲ್ಲಿ ಸಭೆಯನ್ನು ಆರಂಭಿಸಲಾಯಿತು.

**ಸಾಮಾಜಿಕ ಲೆಕ್ಕಪರಿಶೋಧನಾ ಗ್ರಾಮಸಭೆಯಲ್ಲಿ ಚರ್ಚಿಸಲಾದ ವಿಷಯಗಳು**

ಈ ಹಿಂದಿನ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ನಡವಳಿಯನ್ನು ಸಭೆಗೆ ಓದಿ ತಿಳಿಸಲಾಯಿತು. ೨೦೧೪-೧೫ನೇ ಸಾಲಿನಲ್ಲಿ MNREGA ಯೋಜನೆಯಲ್ಲಿರುವ ಕಾಮಗಾರಿಗಳ ವಿವರನ್ನು ಸಭೆಗೆ ತಿಳಿಸಲಾಯಿತು. ಸಾಮಾಜಿಕ ಲೆಕ್ಕಪರಿಶೋಧಕರ ತಂಡ ಕಾಮಗಾರಿಗಳ ಪರಿವೀಕ್ಷಣೆ ಮಾಡಿದ ಬಗ್ಗೆ ಸಭೆಗೆ ವಿವರಗಳನ್ನು ನೀಡಲಾಯಿತು. ಹಿಂದಿನ ವರ್ಷದಲ್ಲಿ ಪೂರ್ಣಗೊಂಡ ಕಾಮಗಾರಿಗಳ ಮಾಹಿತಿಯನ್ನು ಸಭೆಗೆ ಓದಿ ತಿಳಿಸಲಾಯಿತು. ಒಟ್ಟು ೬ ಕಾಮಗಾರಿಗಳ ಕುರಿತು ಗ್ರಾಮಸಭೆಯಲ್ಲಿ ಭಾಗವಹಿಸಿದ ಸಭಿಕರಿಗೆ ಓದಿ ಮಾಹಿತಿ ನೀಡಲಾಯಿತು.

ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ಗ್ರಾಮಸ್ಥರು ಕೇಳಿದ ಪ್ರಶ್ನೆಗಳನ್ನು ದಾಖಲೆ ಮಾಡಿಕೊಳ್ಳಲಾಯಿತು.

MNREGA ಕೂಲಿ ಕೆಲಸಕ್ಕೆ ಅರ್ಜಿ ಸಲ್ಲಿಸಿದವರಿಗೆ ಕೆಲಸ ನೀಡುವುದಾಗಿ ಈ ಗ್ರಾಮಸಭೆಯಲ್ಲಿ ಸರ್ವಾನುಮತದಿಂದ ಅಂಗೀಕರಿಸಲಾಯಿತು. ಸಾಮಾಜಿಕ ಲೆಕ್ಕಪರಿಶೋಧನೆಯ ಸದಸ್ಯರನ್ನು ಒಳಗೊಂಡಂತೆ ಕಾಮಗಾರಿಗಳನ್ನು ಪರಿಶೀಲಿಸಿದ ಮಾಹಿತಿ ನೀಡಿದರು. ಕಡತಗಳನ್ನು ಸಭೆಯಲ್ಲಿ ಪರಿಶೀಲಿಸಲಾಯಿತು. ಗ್ರಾಮಪಂಚಾಯಿತಿ ಅಧ್ಯಕ್ಷರು, ಸಾಮಾಜಿಕ ಲೆಕ್ಕಪರಿಶೋಧನಾ ಗ್ರಾಮಸಭೆಯ ಅಧ್ಯಕ್ಷತೆಯನ್ನು ವಹಿಸಲಾಯಿತು.

ನೋಡಲ್ ಅಧಿಕಾರಿಗಳು, ಸಾಮಾಜಿಕ ಲೆಕ್ಕಪರಿಶೋಧಕರು ಮತ್ತು ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗಳು ಸಾರ್ವಜನಿಕರು ಗ್ರಾಮಪಂಚಾಯಿತಿ ಸದಸ್ಯರು ಸೇರಿ ಗ್ರಾಮಸಭೆಯನ್ನು ನಿರ್ವಹಿಸಿದರು.

ಸಾಮಾಜಿಕ ಲೆಕ್ಕಪರಿಶೋಧನಾ ಗ್ರಾಮಸಭೆಯಲ್ಲಿ ೩೯ ಸಾರ್ವಜನಿಕರ ಸಹಿಯನ್ನು ಪಡೆಯಲಾಗಿದೆ. ಅದರಲ್ಲಿ ೩ ಜನರು ಅನಕ್ಷರಸ್ಥರು. ಉಳಿದ ೩೬ ಅಕ್ಷರಸ್ಥರಾಗಿರುವುದನ್ನು ಗಮನಿಸಬಹುದಾಗಿದೆ. ಈ ಮಾಹಿತಿಯನ್ನು ಗ್ರಾಮಸಭೆಯ ನಡಾವಳಿಯಲ್ಲಿ ಸಹಿ ಮಾಡಿದವರ ವಿವರಗಳಿವೆ. ಆದರೆ ಗ್ರಾಮಸಭೆಯಲ್ಲಿ ಸುಮಾರು ನೂರರಿಂದ ನೂರಾಮೂವತ್ತು ಜನರು ಭಾಗವಹಿಸಿರುವುದನ್ನು ಗಮನಿಸಲಾಯಿತು.

೨೦೧೪-೧೫ನೇ ಸಾಲಿನ ಎರಡನೇ ಸಾಮಾಜಿಕ ಜಮಾಬಂದಿ ಗ್ರಾಮಸಭೆಯು ೨೦೧೫ರ ಫೆಬ್ರವರಿಯಲ್ಲಿ ನಡೆಸಲಾಯಿತು. ಈ ಗ್ರಾಮಸಭೆ, ಬೆಳಗ್ಗೆ ೧೧.೦೦ ಗಂಟೆಗೆ ಗ್ರಾಮಪಂಚಾಯಿತಿ ಆವರಣದಲ್ಲಿ ಆಯೋಜಿಸಲಾಯಿತು.

ಈ ಸಾಮಾಜಿಕ ಜಮಾಬಂದಿ ಗ್ರಾಮಸಭೆಯು ತಾಲ್ಲೂಕು ನೋಡಲ್ ಅಧಿಕಾರಿ ಅವರ ಅಧ್ಯಕ್ಷತೆಯಲ್ಲಿ ನಡೆಸಲಾಯಿತು. ಸಭೆಯಲ್ಲಿ ಗ್ರಾಮಪಂಚಾಯಿತಿಯ ಅಧ್ಯಕ್ಷರು, ಉಪಾಧ್ಯಕ್ಷರು, ಸರ್ವಸದಸ್ಯರು, ಅಧಿಕಾರಿಗಳು, ಸಂಯೋಜಕರು, ತಾಲ್ಲೂಕು ಮಟ್ಟದ ಅಧಿಕಾರಿಗಳು ಹಾಗೂ ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗಳು ಮತ್ತು ಗ್ರಾಮಸ್ಥರು ಸೇರಿದ್ದರು.

ಸಾಮಾಜಿಕ ಲೆಕ್ಕಪರಿಶೋಧಕರ ನೇತೃತ್ವದಲ್ಲಿ ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗಳ ಸ್ವಾಗತದೊಂದಿಗೆ ಸಾಮಾಜಿಕ ಜಮಾಬಂದಿ ಸಭೆಯು ಆರಂಭವಾಯಿತು. ಕಳೆದ ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ಚರ್ಚಿಸಿದ ವಿಷಯಗಳ್ನು ಓದಿ ಹೇಳಲಾಯಿತು. MNREGA ಯೋಜನೆಗಳ ಕಾಮಗಾರಿಗಳನ್ನು ಜಮಾಬಂದಿ ಸಭೆಯಲ್ಲಿ ಓದಿ ಹೇಳಲಾಯಿತು. ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ಸಾಮಾಜಿಕ ಲೆಕ್ಕಪರಿಶೋಧಕರ ತಂಡದವರು ವೀಕ್ಷಣೆ ಮಾಡಿದ ಮಾಹಿತಿಯನ್ನು ಓದಿ ಹೇಳಲಾಯಿತು. ಒಟ್ಟು ಈ ಗ್ರಾಮಸಭೆಯ ಎಂಟು ಕಾಮಗಾರಿಗಳ ಕುರಿತು ಸಭೆಯಲ್ಲಿ ಭಾಗವಹಿಸಿದವರಿಗೆ ಮಾಹಿತಿ ನೀಡಲಾಯಿತು.

೧. ಮೊದಲನೆಯದು ರಸ್ತೆ ಅಭಿವೃದ್ಧಿ ಕಾಮಗಾರಿಯಾಗಿತ್ತು.

೨. ಸಕ್ರಿಜನಾ ಬೀದಿ ಅಭಿವೃದ್ಧಿ ಕುರಿತು ಅನುಮೋದನೆ.

೩. ವೈಯಕ್ತಿಕ ಫಲಾನುಭವಿಗೆ ದನದ ಕೊಟ್ಟಿಗೆ ನಿರ್ಮಾಣಕ್ಕೆ ಅನುಮೋದನೆ

೪. ತಡೆಗೋಡೆ ನಿರ್ಮಾಣ ಮಾಡಲಾಗಿತ್ತು.

೫. ರಸ್ತೆ ಅಭಿವೃದ್ಧಿ ಕಾಮಗಾರಿಗೆ ಅನುಮೋದನೆ ಪಡೆಯಲಾಯಿತು.

೬. ಹೊಲದಲ್ಲಿ ಕೃಷಿ ಹೊಂಡ ನಿರ್ಮಾಣ ಕಾಮಗಾರಿಗೆ ಅನುಮೋದನೆ

೭. ದನದ ಕೊಟ್ಟಿಗೆ ನಿರ್ಮಾಣಕ್ಕೆ ಅನುಮೋದನೆ.

ಈ ಕಾಮಗಾರಿಗಳ ಅನುಮೋದನೆಗೆ ಸಾಮಾಜಿಕ ಲೆಕ್ಕಪರಿಶೋಧನೆಯ ಸಭೆ ಸರ್ವಾನು ಮತದಿಂದ ಅನುಮೋದನೆ ನೀಡಿತು. ಗ್ರಾಮಸಭೆಯ ನಂತರ ಸಾರ್ವಜನಿಕರಿಗೆ ಪ್ರಶ್ನೆಗಳನ್ನು ಕೇಳಲು ಅವಕಾಶ ನೀಡಲಾಯಿತು.

ನರೇಗಾ ಯೋಜನೆ ಅಡಿಯಲ್ಲಿ ಕೆಲಸ ಕೋರಿ ಅರ್ಜಿ ಸಲ್ಲಿಸಿದವರಿಗೆ ಕೆಲಸ ನೀಡುವುದಾಗಿ ಸರ್ವಾನುಮತದಿಂದ ಅನುಮತಿ ನೀಡಲಾಯಿತು. ಸಾರ್ವಜನಿಕರಿಗೆ ಸಭೆ ಕಡತ ಪರಿಶೀಲನೆಗೆ ಅವಕಾಶ ನೀಡಲಾಯಿತು.

ಈ ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ನಾಲ್ಕು ಜನ ಗ್ರಾಮಪಂಚಾಯಿತಿ ಸದಸ್ಯರು, ೧೮ ಜನರ ಗ್ರಾಮಸ್ಥರ ಸಹಿಯನ್ನು ಪಡೆಯಲಾಗಿದೆ.

ಈ ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ಉಪಾಧ್ಯಕ್ಷರು ಗೈರು ಹಾರಾಜರಾಗಿದ್ದರು. ನೋಡಲ್ ಅಧಿಕಾರಿ ಮತ್ತು ಸಾಮಾಜಿಕ ಲೆಕ್ಕಪರಿಶೋಧಕರು ಗೈರು ಹಾಜರಾಗಿದ್ದರು. ಗ್ರಾಮಸಭೆಯಲ್ಲಿ ಇಬ್ಬರು ಅನಕ್ಷರಸ್ಥರಿದ್ದಾರೆ.

## ೨೦೧೫-೧೬ನೇ ಸಾಲಿನ ಚೋರನೂರು ಗ್ರಾಮಪಂಚಾಯಿತಿ ಸಾಮಾಜಿಕ ಲೆಕ್ಕಪರಿಶೋಧನಾ ಗ್ರಾಮಸಭೆ ಕಾರ್ಯಾನುಷ್ಠಾನ ವಿಧಾನ

೨೦೧೫-೧೬ನೇ ಸಾಲಿನ ೧ನೇ ಹಂತದ ಸಾಮಾಜಿಕ ಲೆಕ್ಕ ಪರಿಶೋಧನಾ ಗ್ರಾಮಸಭೆ.

ಜೂನ್ ೨೫ರಂದು ಬೆಳಗ್ಗೆ ೧೨ ಗಂಟೆಗೆ ಗ್ರಾಮಪಂಚಾಯಿತಿಯ ಆವರಣದಲ್ಲಿ ಗ್ರಾಮ ಪಂಚಾಯಿತಿ ನೋಡಲ್ ಅಧಿಕಾರಿಯ ಅಧ್ಯಕ್ಷತೆಯಲ್ಲಿ ಗ್ರಾಮಸಭೆ ನಡೆಸಲಾಯಿತು. ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ಗ್ರಾಮಪಂಚಾಯಿತಿ ಅಧ್ಯಕ್ಷರು, ಉಪಾಧ್ಯಕ್ಷರು, ಸರ್ವಸದಸ್ಯರು, ಜಿ.ಪಂ. ಸದಸ್ಯರು, ಜಿಲ್ಲಾಪಂಚಾಯಿತಿ ತಾಲ್ಲೂಕುಪಂಚಾಯಿತಿ ಸದಸ್ಯರು, ಅಧಿಕಾರಿಗಳು, ಗ್ರಾಮಸ್ಥರು, ಸಾಮಾಜಿಕ ಲೆಕ್ಕಪರಿಶೋಧಕರು ಪಂಚಾಯಿತಿಯ ಪಿ.ಡಿ.ಓ. ಮತ್ತು ಕಾರ್ಯದರ್ಶಿ ಉಪಸ್ಥಿತಿಯಲ್ಲಿ ಈ ಗ್ರಾಮಸಭೆ ನಡೆಯಿತು.

## ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಚರ್ಚಿಸಿದ ಅಂಶಗಳು

೧. ಹಿಂದಿನ ಅಥವಾ ಕಳೆದ ಸಭೆಯ ನಡವಳಿಯ ಕುರಿತು ಚರ್ಚಿಸಲಾಯಿತು. ಪ್ರಸಕ್ತ ಸಾಲಿನಲ್ಲಿ ನರೇಗಾ ಯೋಜನೆಯ ಕ್ರಿಯಾ ಯೋಜನೆಯನ್ನು ತಯಾರಿಸಲಾಯಿತು. ಆ ಕಾಮಗಾರಿಗಳ ಅನುಮೋದನೆಗೆ ಕಳಿಸಿದ್ದರ ಕುರಿತು ಮಾಹಿತಿ ನೀಡಲಾಯಿತು.

೨೦೧೪-೧೫ನೇ ಸಾಲಿನ ಕಾಮಗಾರಿಗಳ ಕಡತಗಳನ್ನು ಸಭೆಯಲ್ಲಿ ಸಾರ್ವಜನಿಕವಾಗಿ ಪರಿಶೋಧಿಸಲಾಯಿತು. ಕೆಲವು ಕಾಮಗಾರಿಗಳಿಗೆ ತಡವಾಗಿ ಹಣ ಬಿಡುಗಡೆ ಮಾಡಿರುವುದು ತಿಳಿದುಬಂದಿತ್ತು. ಗ್ರಾಮಸಭೆ ಪ್ರಶ್ನಾವಳಿ ಸಮಯದಲ್ಲಿ ನಾಗರಿಕರು ಪ್ರಶ್ನೆಗಳನ್ನು ಕೇಳಿದರು.

ಗ್ರಾಮಸ್ಥರು ಕೂಲಿ ಕೆಲಸಕ್ಕಾಗಿ ಅರ್ಜಿ ಸಲ್ಲಿಸಿದ ವಿಷಯವನ್ನು ಚರ್ಚಿಸಿ ಕಾಮಗಾರಿಯನ್ನು ಪ್ರಾರಂಭಿಸುವುದಾಗಿ ತಿಳಿಸಿದರು.

ವೈಯಕ್ತಿಕ ಕಾಮಗಾರಿಗಳಿಗೆ ಮೊದಲ ಪ್ರಾಶಸ್ತ್ಯ ನೀಡುವುದು ಎಂದು ಸಭೆಯಲ್ಲಿ ತಿಳಿಸಲಾಯಿತು.

ಸಾಮಾಜಿಕ ಲೆಕ್ಕಪರಿಶೋಧನೆಯ ಸಮಯದಲ್ಲಿ, ದಾಖಲಾತಿಗಳ ಪರಿಶೀಲನೆಯಲ್ಲಿ, ಕಾಮಗಾರಿಗಳ ಸ್ಥಳ ಪರಿಶೀಲನೆಯಲ್ಲಿ, ಅಕುಶಲ ಕೂಲಿ ಕಾರ್ಮಿಕರ ಮನೆ ಮನೆಗೆ ಭೇಟಿ ಮಾಡಿ, ಗ್ರಾಮಸ್ಥರಿಂದ ಬಂದ ಅಂಶಗಳನ್ನು, ಅಭಿಪ್ರಾಯಗಳನ್ನು ಗ್ರಾಮಸಭೆಯಲ್ಲಿ ಚರ್ಚಿಸಲಾಯಿತು.

ಸಾರ್ವಜನಿಕ ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಉದ್ದೇಶ ಹಾಗೂ ಯೋಜನೆಯ ಅರಿವು ಮೂಡಿಸಲಾಯಿತು.

ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಒಟ್ಟು ೬೧ ಗ್ರಾಮಸ್ಥರು ಸಭೆಯ ನಡವಳಿ ಪುಸ್ತಕದಲ್ಲಿ ಸಹಿ ಹಾಕಿರುವುದು ಗ್ರಾಮಸಭೆಯು ಯಶಸ್ವಿಯಾಗಿರುವುದನ್ನು ತೋರಿಸಿಕೊಡುತ್ತದೆ.

**೪.೪. ಸಂಗನಕಲ್ಲು ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಗ್ರಾಮಸಭೆ**

**೨೦೧೨-೧೩ನೇ ಸಾಲಿನ ಸಂಗನಕಲ್ಲು ಗ್ರಾಮಪಂಚಾಯಿತಿ ಜಮಾಬಂದಿ ಗ್ರಾಮಸಭೆ**

ಡಿಸೆಂಬರ್ ೨೦೧೩ರಂದು ಬೆಳಗ್ಗೆ ೧೧ ಗಂಟೆಗೆ ಗ್ರಾಮಪಂಚಾಯಿತಿಯ ಕಾರ್ಯಾಲಯದಲ್ಲಿ ಜಮಾಬಂದಿ ಗ್ರಾಮಸಭೆಯು ಪಿ.ಡಿ.ಓ.ಅವರ ಸ್ವಾಗತ ಮಾತುಗಳಿಂದ ಪ್ರಾರಂಭವಾಯಿತು.

ಗ್ರಾಮಪಂಚಾಯಿತಿ ಸಾಮಾಜಿಕ ಲೆಕ್ಕಪರಿಶೋಧನಾ ಸಭೆಯಲ್ಲಿ ಭಾಗವಹಿಸಲು ಬಂದಿದ್ದ ಒಬ್ಬರನ್ನು ಆಯ್ಕೆ ಮಾಡಿಕೊಂಡು ಅವರಿಗೆ ಜಮಾಬಂದಿ ಗ್ರಾಮಸಭೆಯ ಅಧ್ಯಕ್ಷತೆಯನ್ನು ವಹಿಸಲಾಯಿತು. ಈ ಸಭೆಯಲ್ಲಿ ಪಿ.ಡಿ.ಓ. ಮತ್ತು ಗ್ರಾಮಪಂಚಾಯಿತಿ ಅಧ್ಯಕ್ಷರು ಈ ಸಭೆಯಲ್ಲಿ ಭಾಗವಹಿಸಿದ್ದರು.

ಈ ಜಮಾಬಂದಿ ಗ್ರಾಮಸಭೆಯಲ್ಲಿ ಕಳೆದ ವರ್ಷ ಅನುಮೋದನೆಗೊಂಡ ಕಾಮಗಾರಿಗಳ ಪ್ರಗತಿ ಕುರಿತು ಚರ್ಚಿಸಲಾಯಿತು. ನಂತರ ಈ ವರ್ಷದಲ್ಲಿ ಅನುಮೋದನೆ ಮಾಡಬೇಕಾದ ಕಾಮಗಾರಿಗಳ ಕುರಿತು ಸಭೆಯಲ್ಲಿ ಓದಿ ತಿಳಿಸಲಾಯಿತು.

**೨೦೧೪-೧೫ನೇ ಸಾಲಿನ ಸಂಗನಕಲ್ಲು ಗ್ರಾಮಪಂಚಾಯಿತಿಯ ಜಮಾಬಂದಿ ಗ್ರಾಮಸಭೆ ವಿವರಗಳು**

ಅಕ್ಟೋಬರ್ ೨೦೧೫ರಂದು ಗ್ರಾಮಪಂಚಾಯಿತಿಯ ಕಾರ್ಯಾಲಯದಲ್ಲಿ ಜಮಾಬಂದಿ ಗ್ರಾಮಸಭೆಯನ್ನು ಆಯೋಜಿಸಲಾಯಿತು. ಈ ಸಭೆಯು ಗ್ರಾಮಪಂಚಾಯಿತಿ ಅಧ್ಯಕ್ಷರ ಅಧ್ಯತೆಯಲ್ಲಿ ನಡೆಸಿತು. ಸಿ.ಡಿ.ಪಿ.ಓ. ಸಾಮಾಜಿಕ ಲೆಕ್ಕಪರಿಶೋಧನಾ ಅಧಿಕಾರಿಗಳು, ಉಪಾಧ್ಯಕ್ಷರು, ಸದಸ್ಯರು ಮತ್ತು ಗ್ರಾಮಸ್ಥರು ಸೇರಿದಂತೆ ಜಮಾಬಂದಿ ಗ್ರಾಮಸಭೆ ನಡೆಸಲಾಯಿತು.

**ಜಮಾಬಂದಿ ಗ್ರಾಮಸಭೆಯಲ್ಲಿ ಚರ್ಚಿಸಿದ ವಿಷಯಗಳು**

ಅಕ್ಟೋಬರ್ ೨೦೧೪ರಿಂದ ೨೦೧೫ರವರೆಗೆ ಅನುಷ್ಠಾನಗೊಂಡ ಕಾಮಗಾರಿಗಳ ಕಡತ ಗಳನ್ನು ಪರಿಶೀಲಿಸಲಾಗಿತ್ತು. ಕಡತಗಳನ್ನು ಸರಿಯಾಗಿ ನಿರ್ವಹಿಸಿಲ್ಲ ಹಾಗೂ ಸಾಮಗ್ರಿ ಖರೀದಿಗೆ ಓಚರ್‌ಗಳನ್ನು ಸರಿಯಾಗಿ ನಿರ್ವಹಿಸಿಲ್ಲವೆಂದು ಸಾಮಾಜಿಕ ಲೆಕ್ಕಪರಿಶೋಧಕರು ಆಕ್ಷೇಪಿಸಿದರು.

## ೪.೫. ಅಪ್ಪಯ್ಯನಹಳ್ಳಿ ಗ್ರಾಮ ಪಂಚಾಯಿತಿಯ ಸಾಮಾಜಿಕ ಜಮಾಬಂದಿ ಗ್ರಾಮಸಭೆ

೨೦೧೫-೧೬ನೇ ಸಾಲಿನ ಸಾಮಾಜಿಕ ಜಮಾಬಂದಿ ಗ್ರಾಮಸಭೆ ಅನುಷ್ಠಾನ ಕುರಿತು

ಮಹಾತ್ಮ ಗಾಂಧಿ ಗಾಂಧಿ ರಾಷ್ಟ್ರೀಯ ಉದ್ಯೋಗ ಖಾತರಿ ಯೋಜನೆ ೨೦೧೫-೧೬ನೇ ಸಾಲಿನ ಸಾಮಾಜಿಕ ಲೆಕ್ಕಪರಿಶೋಧನೆ, ಎಂ.ಎನ್.ಆರ್.ಇ.ಜಿ.ಎ. ಯೋಜನೆಯಡಿಯಲ್ಲಿ ಕೈಗೊಳ್ಳ ಬೇಕಾದ ಕಾಮಗಾರಿಗಳನ್ನು ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಮಂಡಿಸಲಾಯಿತು. ಕಾಮಗಾರಿಗಳಿಗೆ ಈಗಾಗಲೇ ತಗುಲಿದ ವೆಚ್ಚವನ್ನು ಕುರಿತು ಸಭೆಯಲ್ಲಿ ಮಂಡಿಸಲಾಯಿತು. ಸದರಿ ಕಾಮಗಾರಿಗಳನ್ನು ಈಗಾಗಲೇ ತಾಲೂಕು ಸಾಮಾಜಿಕ ಲೆಕ್ಕಪರಿಶೋಧನ ತಂಡದಿಂದ ಪರಿಶೀಲಿಸಲಾಗಿತ್ತು. ಈ ಸಭೆಯಲ್ಲಿ ಸದರಿ ಕಾಮಗಾರಿಗಳ ಬಗ್ಗೆ ಜನರಿಗೆ ತಮ್ಮ ಅಭಿಪ್ರಾಯಗಳನ್ನು ಹೇಳುವ ಪ್ರಶ್ನೆಗಳಿದ್ದಲ್ಲಿ ಪರಿಶೀಲಿಸುವ ಅವಕಾಶವನ್ನು ನೀಡಲಾಗಿತ್ತು. ಸಾರ್ವಜನಿಕರು ಸಭೆಯಲ್ಲಿ ಯಾವುದೇ ಪ್ರಶ್ನೆಗಳನ್ನು ಎತ್ತಲಿಲ್ಲ. ಸಾರ್ವಜನಿಕರು ಸಭೆಯಲ್ಲಿ ಪ್ರಶ್ನಿಸಿರುವುದನ್ನು ಈ ಗ್ರಾಮ ಪಂಚಾಯಿತಿಯಲ್ಲಿ ನೋಡಲಾಗಿದೆ.

**ರೈತರ ಸಿರಿ ಯೋಜನೆಯ ಫಲಾನುಭವಿಗಳ ಆಯ್ಕೆ:** ಈ ವಿಷಯ ಕುರಿತು ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡ ಹಾಗೂ ಸಣ್ಣ, ಅತಿ ಸಣ್ಣ ಹಿಡುವಳಿದಾರರ ಆದಾಯವನ್ನು ಹೆಚ್ಚಿಸಲು ಅವರ ಜಮೀನುಗಳಲ್ಲಿ ಗಿಡ ಮರಗಳನ್ನು ಬೆಳೆಯಲು ಅವಕಾಶವಿದ್ದು ಸಭೆಯ ಅನುಮತಿ ಮೇರೆಗೆ ಯೋಜನೆಯ ಫಲಾನುಭವಿಗಳನ್ನು ಆಯ್ಕೆ ಮಾಡಲಾಯಿತು.

**೨೦೧೬-೧೭ನೇ ಸಾಲಿನ ಅಂಬೇಡ್ಕರ್ ನಿವಾಸ ಯೋಜನೆ ಫಲಾನುಭವಿಗಳ ಆಯ್ಕೆ:** ಸದರಿ ಸಾಲಿನಲ್ಲಿ ಅಪ್ಪಯ್ಯಹಳ್ಳಿ ಗ್ರಾಮಪಂಚಾಯಿತಿಯಲ್ಲಿ ೨೧ ಮನೆ ಅಥವಾ ನಿವೇಶನಗಳು ಅನುಮೋದನೆಯಾಗಿವೆ. ಈ ಯೋಜನೆಗೆ ಫಲಾನುಭವಿಗಳನ್ನು ಆಯ್ಕೆ ಮಾಡಲಾಯಿತು. ಪರಿಶಿಷ್ಟ ಜಾತಿಯ ೯ ಅರ್ಹ ಫಲಾನುಭವಿಗಳನ್ನು ಆಯ್ಕೆ ಮಾಡಿಕೊಡಲಾಯಿತು. ಪರಿಶಿಷ್ಟ ಪಂಗಡದ ೧೨ ಜನರನ್ನು ಫಲಾನುಭವಿಗಳನ್ನಾಗಿ ಆಯ್ಕೆ ಮಾಡಲಾಯಿತು. ಈ ಅರ್ಹ ಫಲಾನುಭವಿಗಳನ್ನು ಕೂಲಂಕಷವಾಗಿ ಚರ್ಚಿಸಿ ಆಯ್ಕೆ ಮಾಡಲಾಯಿತು.

ವಸತಿ ಮನೆಗಳನ್ನು ಹಂಚಲು ಮಹಿಳಾ ಫಲಾನುಭವಿಗಳನ್ನು ಆಯ್ಕೆ ಮಾಡುವಾಗ ಅವರು ತಮ್ಮ ಗಂಡನ ಅಥವಾ ಕುಟುಂಬದವರು ಮನೆಯನ್ನು ಹೊಂದಿರುವುದನ್ನು ಸಭೆಯಲ್ಲಿ

ಚರ್ಚಿಸಲಾಯಿತು. ಹಾಗಾಗಿ ಈ ನಿವೇಶನ ಹೋದಿರುವ ಮಹಿಳೆಯರಿಗೆ ಈ ಯೋಜನೆಯ ಸೌಲಭ್ಯವನ್ನು ರದ್ದುಗೊಳಿಸುವಂತೆ ಈ ಗ್ರಾಮಸಭೆ ತಿರ್ಮಾನಿಸಿತು. ಪುರುಷ ಫಲಾನುಭವಿಗಳ ಸಂಧರ್ಭದಲ್ಲಿ ಹಿರಿಯ ನಾಗರಿಕರನ್ನು, ಮಾಜಿ ಸೈನಿಕರನ್ನು ಹಿಂದುಳಿದ ವರ್ಗಗಳನ್ನು ಫಲಾನುಭವಿಗಳಾಗಿ ಆಯ್ಕೆ ಮಾಡಲಾಯಿತು.

ಗ್ರಾಮಪಂಚಾಯಿತಿಯ ಗ್ರಾಮಸಭೆಯು ಮಹಾತ್ಮಗಾಂಧಿ ರಾಷ್ಟ್ರಿಯ ಉದ್ಯೋಗ ಖಾತರಿ ಯೋಜನೆಯಡಿಯಲ್ಲಿ ರೈತ ಸಿರಿ ಯೋಜನೆಯ ಕುರಿತು ಉದ್ಯೋಗ ಖಾತರಿ ಸಾಮಾಜಿಕ ಜಮಾಬಂದಿ ನಡೆಸಲಾಯಿತು.

ಅನಂತರ ವಸತಿ ನಿವೇಶನಗಳ ಫಲಾನುಭವಿಗಳ ಆಯ್ಕೆಯನ್ನು ಮಾಡಲು ಸಭೆ ನಡೆಸಲಾಯಿತು.

ಈ ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ೬೨ ಗ್ರಾಮಸ್ಥರು ಹಾಜರಾತಿ ಸಹಿ ಮಾಡಿದ್ದಾರೆ. ಸಹಿ ಮಾಡಿದ ೬೨ ಜನರು ಅಕ್ಷರಸ್ಥರು ಹಾಗೂ ವಿದ್ಯಾವಂತರಾಗಿರುವುದು ಕಂಡು ಬಂದಿದೆ. ಅನಕ್ಷಸ್ಥರು ಗ್ರಾಮಸಭೆಯಲ್ಲಿ ಕಡಿಮೆ ಸಂಖ್ಯೆಯಲ್ಲಿ ಭಾಗವಹಿಸಿದ್ದಾರೆ. ಮಹಿಳೆಯರು ಸಭೆಯಲ್ಲಿ ತೀರಾ ಕಡಿಮೆ ಭಾಗವಹಿಸಿರುವುದು ಈ ಸಾಮಾಜಿಕ ಜಮಾಬಂದಿ ಗ್ರಾಮ ಸಭೆಯಿಂದ ತಿಳಿದುಬಂದಿದೆ. ಗ್ರಾಮದ ಬಹುಪಾಲು ಜನರು ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿಸಿಲ್ಲ. ಅದರಿಂದ ಸಭೆಯಲ್ಲಿ ಜನರಿಂದ ಯಾವುದೇ ಪ್ರಶ್ನೆಗಳು ಮತ್ತು ದೂರುಗಳು ಬಂದಿಲ್ಲದೆ ಇರುವುದನ್ನು ಗಮನಿಸಬಹುದು.

**ಕೋಷ್ಟಕ ೪.೧**

**ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆಯ ಆರ್ಥಿಕ ಪ್ರಗತಿ**

| ಕ್ರ.ಸಂ | ಆರ್ಥಿಕ ವರ್ಷ | ಆರಂಭಿಕ ಶಿಲ್ಕು | ಒಟ್ಟು ಬಿಡುಗಡೆ | ಇತರೆ ರಶೀದಿಗಳು | ಒಟ್ಟು ಲಭ್ಯವಿರುವ ಮೊತ್ತ | ವೆಚ್ಚ |
|---|---|---|---|---|---|---|
| ೧ | ೨೦೦೬–೦೭ | ೭೧೭೧.೭೮ | ೨೬೪೩೦.೯೧ | ೨೮೭೩೫ | ೩೩೯೦೦.೦೪ | ೨೨೪೯೧.೫೩ |
| ೨ | ೨೦೦೭–೦೮ | ೧೧೯೩೦.೭೨ | ೨೯೯೭೦.೫೫ | ೮೭೧.೧೧ | ೪೧೭೭೨.೩೯ | ೧೯೯೫೯.೧೭ |
| ೩ | ೨೦೦೮–೦೯ | ೨೫೦೭೦.೮೮ | ೪೫೪೨೮.೯೫ | ೨೨೩೩.೨೮ | ೭೨೭೩೩.೧೦ | ೩೭೩೬೦.೭೮ |
| ೪ | ೨೦೦೯–೧೦ | ೩೫೩೪೨.೨೭ | ೨೬೬೦೭೯.೭೧ | ೨೪೫೮.೨೦ | ೩೦೩೮೮೦.೧೮ | ೨೨೧೬೯೩.೧೮ |
| ೫ | ೨೦೧೦–೧೧ | ೮೨೧೮೭೦೦ | ೨೦೮೫೦೭೭೫ | ೪೯೪೫.೬೮ | ೨೯೫೬೪೦.೩೮ | ೧೮೬೦೪೭೨೮ |
| ೬ | ೨೦೧೧–೧೨ | ೧೦೯೫೯೩.೧೦ | ೮೨೧೯೩.೦೯ | ೩೭೮೧.೫೯ | ೧೯೫೫೬೭೭೮ | ೧೬೪೦೯೯.೩೯ |

| ಕ್ರ.ಸಂ | ಆರ್ಥಿಕ ವರ್ಷ | ಆರಂಭಿಕ ಶಿಲ್ಕು | ಒಟ್ಟು ಬಿಡುಗಡೆ | ಇತರೆ ರಶೀದಿಗಳು | ಒಟ್ಟು ಲಭ್ಯವಿರುವ ಮೊತ್ತ | ವೆಚ್ಚ |
|---|---|---|---|---|---|---|
| ೭ | ೨೦೧೨-೧೩ | ೩೧೪೬೮.೩೯ | ೧೪೨೯೨.೬೩ | ೪೪೩೦.೨೯ | ೧೨೯೨೯೧.೩೧ | ೧೪೭೬೪೮.೫೪ |
| ೮ | ೨೦೧೩-೧೪ | ೩೨೦೧೫.೧೯ | ೧೮೬೧೧೦.೩೦ | ೨೦೫೯.೬೦ | ೨೨೦೧೮೫.೦೯ | ೨೦೮೪೪೨.೦೬ |
| ೯ | ೨೦೧೪-೧೫ | ೧೧೯೪೩.೦೩ | ೧೭೦೭೬೧.೫೦ | ೪೨೪.೭೫ | ೧೮೨೯೨೯.೨೮ | ೧೬೮೩೬೫.೩೭ |

ಮೂಲ: ವಾರ್ಷಿಕ ವರದಿ-೨೦೧೪-೧೫, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ

ಈ ಮೇಲಿನ ಕೋಷ್ಟಕವನ್ನು ಗಮನಿಸಿದರೆ ೨೦೦೬ರಿಂದ ಪ್ರತಿ ವರ್ಷದ ಆರಂಭಿಕ ಶಿಲ್ಕು ಮತ್ತು ಒಟ್ಟು ಬಿಡುಗಡೆ ಆದ ಹಣ ಲಭ್ಯತೆಯಲ್ಲಿರುವ ಅನುದಾನಗಳು ಮತ್ತು ವಾರ್ಷಿಕ ವೆಚ್ಚಗಳು ವರ್ಷದಿಂದ ವರ್ಷಕ್ಕೆ ಪ್ರಗತಿ ಸಾಧಿಸುತ್ತಾ ಬರುತ್ತಿರುವುದನ್ನು ಗಮನಿಸಬಹುದು. ಈ ರೀತಿಯ ಆರ್ಥಿಕ ಪ್ರಗತಿಗೆ ಗ್ರಾಮ ಪಂಚಾಯಿತಿಯಲ್ಲಿ ಸಾಮಾಜಿಕ ಜಮಾಬಂದಿ ಗ್ರಾಮಸಭೆಯು ಕಾರಣವಾಗಿರುವುದನ್ನು ಗಮನಿಸಲಾಗಿದೆ. ೨೦೦೫ರಲ್ಲಿ ಜಾರಿಗೆ ಬಂದ ಸಾಮಾಜಿಕ ಜಮಾಬಂದಿ ಕಾಯ್ದೆ ಗ್ರಾಮ ಪಂಚಾಯಿತಿಗಳ ಪ್ರಗತಿ ವರದಿಗಳನ್ನು ಸಾರ್ವಜನಿಕಗೊಳಿಸುವುದರಿಂದಾಗಿ ಪಂಚಾಯಿತಿಗಳಲ್ಲಿ ಯೋಜನೆಗಳ ಅನುಷ್ಠಾನದಲ್ಲಿ ಪ್ರಗತಿ ಸಾಧಿಸಿರುವುದನ್ನು ಗಮನಿಸಲಾಗಿದೆ.

ನರೇಗಾ ಯೋಜನೆಯಲ್ಲಿ ೨೦೦೯ರಲ್ಲಿ ಸಾಮಾಜಿಕ ಲೆಕ್ಕಪರಿಶೋಧನಾ ಕಾರ್ಯಕ್ರಮವನ್ನು ಜಾರಿಗೆ ತರಲಾಯಿತು. ಈ ಯೋಜನೆಯು ಪ್ರತಿ ವರ್ಷದಲ್ಲಿ ಎರಡು ಬಾರಿ ಯೋಜನೆ ಅನುಷ್ಠಾನದ ಪ್ರಗತಿಯನ್ನು ವರದಿ ಮಾಡಿ, ಸಾರ್ವಜನಿಕಗೊಳಿಸಿ, ಅನುಷ್ಠಾನದಲ್ಲಿ ಸಮಸ್ಯೆ ಉಂಟಾದಲ್ಲಿ ಅವುಗಳೇ ಸೂಕ್ತ ಸಲಹೆ ಸೂಚನೆಗಳನ್ನು ನೀಡಿ ಕಾರ್ಯಗತಗೊಳಿಸಲಾಗುತ್ತದೆ. ಈ ಆರ್ಥಿಕ ಪ್ರಗತಿಯು ಕರ್ನಾಟಕದ ಜಿಲ್ಲೆಗಳಿಗನುಸಾರವಾಗಿ ನೀಡಲಾದ ದತ್ತಾಂಶವಾಗಿದೆ.

**ಕೋಷ್ಟಕ ೪.೨.**

**ಮಹಾತ್ಮಗಾಂಧಿ ರಾಷ್ಟ್ರೀಯ ಗ್ರಾಮೀಣ ಉದ್ಯೋಗ ಖಾತರಿ ಯೋಜನೆ ಬಳ್ಳಾರಿ ಜಿಲ್ಲೆ ಆರ್ಥಿಕ ಪ್ರಗತಿ ೨೦೧೪**

| ಕ್ರ.ಸಂ | ಆರ್ಥಿಕ ವರ್ಷ | ಆರಂಭಿಕ ಶಿಲ್ಕು | ಒಟ್ಟು ಬಿಡುಗಡೆ | ಇತರೆ ರಶೀದಿಗಳು | ಒಟ್ಟು ಲಭ್ಯವಿರುವ ಮೊತ್ತ | ವೆಚ್ಚ |
|---|---|---|---|---|---|---|
| ೧ | ಬಳ್ಳಾರಿ | ೩೪೮.೨೦ | ೯೩೪.೭೫ | ೪.೩೦ | ೪೨೮೭.೧೭ | ೪೦೪೯.೮೦ |

ಮೂಲ: ವಾರ್ಷಿಕ ವರದಿ-೨೦೧೪-೧೫, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ

ಈ ಮೇಲಿನ ಕೋಷ್ಟಕವು ಬಳ್ಳಾರಿ ಜಿಲ್ಲೆಯ ೨೦೧೪-೧೫ರ ಆರ್ಥಿಕ ಪ್ರಗತಿ ಸಾಧನೆಯನ್ನು ಸೂಚಿಸುತ್ತದೆ. ಈ ಮೂಲಕ ಜಿಲ್ಲೆಯ ಸಾಮಾಜಿಕ ಲೆಕ್ಕಪರಿಶೋಧನಾ ಕಾರ್ಯಕ್ರಮ ಪರಿಣಾಮಕಾರಿಯಾಗಿ ಅನುಷ್ಠಾನಗೊಳ್ಳುತ್ತಿರುವುದನ್ನು ಗಮನಿಸಲಾಗಿದೆ. ಬಳ್ಳಾರಿ ಜಿಲ್ಲೆಯಲ್ಲಿ ೨೧೨೬೮೫ ನರೇಗಾ ಉದ್ಯೋಗ ಚೀಟಿಗಳನ್ನು ವಿತರಿಸಲಾಗಿದೆ. ೪೩೮೫೦ ಕುಟುಂಬಗಳು ಉದ್ಯೋಗ ಕೇಳಿದ ಕುಟುಂಬಗಳಾಗಿವೆ. ೨೭೯೬೨ ಕುಟುಂಬಗಳಿಗೆ ಉದ್ಯೋಗ ನೀಡಲಾಗಿದೆ. ಒಟ್ಟು ಜಿಲ್ಲೆಯಲ್ಲಿ ೧೨೫೫೯೪೭ ಮಾನವ ದಿನಗಳ ಉದ್ಯೋಗ ಸೃಷ್ಟಿಯಾಗಿದೆ. ೯೪೯ ಕುಟುಂಬಗಳು ೧೦೦ ದಿನಗಳ ಉದ್ಯೋಗವನ್ನು ಪೂರೈಸಿದ ಕುಟುಂಬಗಳು ಜಿಲ್ಲೆಯಲ್ಲಿ ದಾಖಲಾಗಿವೆ.

ಬಳ್ಳಾರಿ ಜಿಲ್ಲೆಯಲ್ಲಿ ನರೇಗಾ ಯೋಜನೆಯ ಭೌತಿಕ ಮತ್ತು ಆರ್ಥಿಕ ಪ್ರಗತಿ ವರದಿಗಳು ಜಿಲ್ಲೆಯಲ್ಲಿ ಸ್ಥಳೀಯ ಪಂಚಾಯಿತಿ ಸಂಸ್ಥೆ ಆಡಳಿತಾತ್ಮಕ ಮತ್ತು ಆರ್ಥಿಕ ಪ್ರಗತಿಗಳ ಸಾಧನೆಯನ್ನು ಸೂಚಿಸುತ್ತದೆ. ಸಾಮಾಜಿಕ ಲೆಕ್ಕಪರಿಶೋಧನೆ ಪಾತ್ರವನ್ನು ಪ್ರಧಾನವಾಗಿ ಗುರುತಿಸಬೇಕಾಗಿದೆ.

**ಕೋಷ್ಟಕ ೪.೩**

**ಬಳ್ಳಾರಿ ಜಿಲ್ಲೆಯ ಪಂಚಾಯತ್ ಸಂಸ್ಥೆಗಳ ಯೋಜನಾ ಆರ್ಥಿಕ ಪ್ರಗತಿ**

| ಕ್ರಸಂ | ವರ್ಷ | ನಿಗದಿಪಡಿಸಿದ ಮೊತ್ತ | ಬಿಡುಗಡೆಯಾದ ಮೊತ್ತ | ವೆಚ್ಚವಾದ ಮೊತ್ತ | % ಶೇಕಡವಾರು ಪ್ರಗತಿ |
|---|---|---|---|---|---|
| ೧ | ೨೦೦೭-೦೮ | ೧೩೧೬೮.೬೮ | ೧೧೬೪೩.೯೦ | ೧೦೩೧೪.೦೭ | ೮೮ |
| ೨ | ೨೦೦೮-೦೯ | ೧೩೪೩೫.೩೯ | ೧೫೮೩೬೫೯ | ೧೨೮೬೫.೭೯ | ೮೧ |
| ೩ | ೨೦೦೯-೧೦ | ೧೬೧೮೪.೦೪ | ೧೮೨೧೧.೩೧ | ೧೭೮೯೦.೮೭ | ೯೮ |
| ೪ | ೨೦೧೦-೧೧ | ೨೦೦೪೪.೬೮ | ೧೬೭೫೯.೫೧ | ೧೭೦೪೨.೩೨ | ೧೦೧.೭೯ |
| ೫ | ೨೦೧೧-೧೨ | ೧೫೯೮೮೨೪ | ೧೬೫೫೭೫೭ | ೧೫೨೬೮.೫೪ | ೯೨.೨೧ |

**ಮೂಲ:** ವಾರ್ಷಿಕ ವರದಿ-೨೦೧೪-೧೫, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ

ಈ ಮೇಲಿನ ಕೋಷ್ಟಕದಲ್ಲಿ ಬಳ್ಳಾರಿ ಜಿಲ್ಲೆಯ ಪಂಚಾಯಿತಿ ಸಂಸ್ಥೆಗಳಾದ ಜಿಲ್ಲಾಪಂಚಾಯಿತಿ, ತಾಲ್ಲೂಕು ಪಂಚಾಯಿತಿ ಮತ್ತು ಗ್ರಾಮಪಂಚಾಯಿತಿಗಳಿಗೆ ನಿಗದಿಪಡಿಸಿದ ಹಣಕಾಸು ಬೇಡಿಕೆಗಳು ವರ್ಷದಿಂದ ವರ್ಷಕ್ಕೆ ಹೆಚ್ಚಾಗುತ್ತಿವೆ. ಅದೇ ರೀತಿ ಬಿಡುಗಡೆಯಾದ ಹಣದ ಮೊತ್ತ ಮತ್ತು ವಾರ್ಷಿಕ ವೆಚ್ಚಗಳು ವರ್ಷದಿಂದ ವರ್ಷಕ್ಕೆ ಹೆಚ್ಚಾಗಿರುವುದು ಕಂಡುಬಂದಿದೆ. ಜಿಲ್ಲೆಯ ಪಂಚಾಯಿತಿ ಸಂಸ್ಥೆಗಳ ಕಾಮಗಾರಿಗಳ ಯೋಜನಾ ಅನುಷ್ಠಾನಗಳು ವರ್ಷದಿಂದ ವರ್ಷಕ್ಕೆ ಉತ್ತಮ ಪ್ರಗತಿ ಸಾಧಿಸಿರುವುದನ್ನು ಗಮನಿಸಬಹುದು. ಜಿಲ್ಲೆಯ ಯೋಜನೆಗಳು ಮತ್ತು ಕಾಮಗಾರಿಗಳು ಹೆಚ್ಚು

ಸಮಾಜೀಕರಣಗೊಂಡು ಜನರಿಗೆ ತಲುಪಿರುವುದನ್ನು ಈ ಕೋಷ್ಟಕದಿಂದ ಅರ್ಥ ಮಾಡಿಕೊಳ್ಳಲಾಗಿದೆ. ಸಾರ್ವಜನಿಕ ಪಂಚಾಯಿತಿ ಸಂಸ್ಥೆಗಳಲ್ಲಿ ಸಕ್ರಿಯವಾಗಿ ಭಾಗವಹಿಸಿರುವುದು ಕಂಡು ಬರುತ್ತದೆ.

**ಕೋಷ್ಟಕ ೪.೪.**

**ತೆಂಡುಲ್ಕರ್ ಸಮಿತಿ**

**೨೦೦೯ ಎಕ್ಸ್‌ಪರ್ಟ್ ಗ್ರೂಪ್‌ನ ಪ್ರಕಾರ ಬದಲಾದ ಭಾರತದ ಬಡತನ ಮತ್ತು ಬಿ.ಪಿ.ಎಲ್ ಜನರ ವಿವರಗಳ ಪಟ್ಟಿ.**

| ವರ್ಷ | ಬಡತನ ಶೇಕಡವಾರು | | | ಬಿ.ಪಿ.ಎಲ್. ಜನಸಂಖ್ಯೆ | | |
|---|---|---|---|---|---|---|
| | ಗ್ರಾಮೀಣ | ನಗರ | ಒಟ್ಟು | ಗ್ರಾಮೀಣ | ನಗರ | ಒಟ್ಟು |
| ೧೯೯೩-೯೪ | ೫೦.೧ | ೩೧.೮ | ೪೫.೩ | ೩೨೮.೬ | ೭೪೫ | ೪೦೩.೭ |
| ೨೦೦೪-೦೫ | ೪೧.೮ | ೨೫.೭ | ೩೭.೨ | ೩೨೫.೮೧ | ೮೧.೪೧ | ೪೦೭.೨೨ |
| ೨೦೦೯-೨೦೧೦ | ೩೩.೮ | ೨೦.೯ | ೨೯.೮ | ೨೭೮.೨೧ | ೭೬.೪೭ | ೩೫೪.೬೮ |

ಮೂಲ: ವಾರ್ಷಿಕ ವರದಿ-೨೦೧೪-೧೫, ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯತ್‌ರಾಜ್ ಇಲಾಖೆ

**ಕೋಷ್ಟಕ ೪.೫.**

**ಪಾಪಿನಾಯಕನಹಳ್ಳಿ ಸಾಮಾಜಿಕ ಜಮಾಬಂದಿಯ ಫಲಾನುಭವಿಗಳ ಪಟ್ಟಿ**

| ಸಾಮಾಜಿಕ ವರ್ಗ | ಪುರುಷರು | ಮಹಿಳೆಯರು | ಬಿ.ಪಿ.ಎಲ್ | ಶೌಚಾಲಯ ಹೊಂದಿದ್ದಾರೆ |
|---|---|---|---|---|
| ಪರಿಶಿಷ್ಟ ಜಾತಿ | ೧೪ | ೧೪ | ಎಲ್ಲ | ಹೌದು |
| ಪರಿಶಿಷ್ಟ ಪಂಗಡ | ೧೮ | ೫ | ಎಲ್ಲ | ಹೌದು |
| ಹಿಂದುಳಿದ ವರ್ಗ | ೩ | ೧ | ಎಲ್ಲ | ಹೌದು |
| ಇತರೆ | ೪೪ | ೯ | ಎಲ್ಲ | ಹೌದು |
| ಅಲ್ಪಸಂಖ್ಯಾತರು | ೩ | ೧ | ಎಲ್ಲ | ಹೌದು |

ಮೂಲ: ಡಬ್ಲ್ಯು.ಡಬ್ಲ್ಯು.ಡಬ್ಲ್ಯು.ಆರ್‌ಡಿಪಿಆರ್.ಕೆಆರ್.ಇನ್

### ಕೋಷ್ಟಕ ೪.೬.

### ಮೋಕಾ ಗ್ರಾಮದ ಸಾಮಾಜಿಕ ಜಮಾಬಂದಿ ಫಲಾನುಭವಿಗಳ ವಿವರ

| ಸಾಮಾಜಿಕ ವರ್ಗ | ಪುರುಷರು | ಮಹಿಳೆಯರು | ಬಿ.ಪಿ.ಎಲ್ | ಶೌಚಾಲಯ ಹೊಂದಿದ್ದಾರೆ |
|---|---|---|---|---|
| ಪರಿಶಿಷ್ಟ ಜಾತಿ | ೫ | ೨ | ಎಲ್ಲ | ಹೌದು |
| ಪರಿಶಿಷ್ಟ ಪಂಗಡ | ೩೦ | ೧೮ | ಎಲ್ಲ | ಹೌದು |
| ಹಿಂದುಳಿದ ವರ್ಗ | ೧೭ | ೧೫ | ಎಲ್ಲ | ಹೌದು |
| ಇತರೆ | ೧೪ | ೧೨ | ಎಲ್ಲ | ಹೌದು |
| ಅಲ್ಪಸಂಖ್ಯಾತರು | ೨೭ | ೧೮ | ಎಲ್ಲ | ಹೌದು |

ಮೂಲ: ಡಬ್ಲ್ಯು.ಡಬ್ಲ್ಯು.ಡಬ್ಲ್ಯು/ಆರ್‌ಡಿಪಿಆರ್/ಕೆಆರ್/ಇನ್

### ಕೋಷ್ಟಕ ೪.೭.

### ಸಂಗನಕಲ್ಲು ಸಾಮಾಜಿಕ ಜಮಾಬಂದಿಯ ಫಲಾನುಭವಿಗಳ ವಿವರ

| ಸಾಮಾಜಿಕ ವರ್ಗ | ಪುರುಷರು | ಮಹಿಳೆಯರು | ಬಿ.ಪಿ.ಎಲ್. | ಶೌಚಾಲಯ ಹೊಂದಿದ್ದಾರೆ |
|---|---|---|---|---|
| ಪರಿಶಿಷ್ಟ ಜಾತಿ | ೧೩ | ೨ | ಎಲ್ಲ | ಹೌದು |
| ಪರಿಶಿಷ್ಟ ಪಂಗಡ | ೦ | ೧ | ಎಲ್ಲ | ಹೌದು |
| ಹಿಂದುಳಿದ ವರ್ಗ | ೧ | ೧ | ಎಲ್ಲ | ಹೌದು |
| ಇತರೆ | ೨೩ | ೭ | ಎಲ್ಲ | ಹೌದು |
| ಅಲ್ಪಸಂಖ್ಯಾತರು | ೦ | ೦ | ಎಲ್ಲ | ಹೌದು |

ಮೂಲ: ಡಬ್ಲ್ಯು.ಡಬ್ಲ್ಯು.ಡಬ್ಲ್ಯು/ಆರ್‌ಡಿಪಿಆರ್/ಕೆಆರ್/ಇನ್

### ಕೋಷ್ಟಕ ೪.೮.

### ಮಲಪನಗುಡಿ ಗ್ರಾಮದ ಸಾಮಾಜಿಕ ಜಮಾಬಂದಿ ಫಲಾನುಭವಿಗಳ ವಿವರ

| ಸಾಮಾಜಿಕ ವರ್ಗ | ಪುರುಷರು | ಮಹಿಳೆಯರು | ಬಿ.ಪಿ.ಎಲ್ | ಶೌಚಾಲಯ ಹೊಂದಿದ್ದಾರೆ |
|---|---|---|---|---|
| ಪರಿಶಿಷ್ಟ ಜಾತಿ | ೨೧ | ೧೨ | ಬಿ.ಪಿ.ಎಲ್ | ಹೌದು |
| ಪರಿಶಿಷ್ಟ ಪಂಗಡ | ೧೩ | ೭ | | ಹೌದು |
| ಹಿಂದುಳಿದ ವರ್ಗ | ೪ | ೨ | | ಹೌದು |
| ಇತರೆ | ೧೬ | ೧೦ | | |
| ಅಲ್ಪಸಂಖ್ಯಾತರು | ೧ | ೧ | | |

ಮೂಲ: ಡಬ್ಲ್ಯು.ಡಬ್ಲ್ಯು.ಡಬ್ಲ್ಯು/ಆರ್‌ಡಿಪಿಆರ್/ಕೆಆರ್/ಇನ್

## ಕೋಷ್ಟಕ ೪.೯.

### ಗುಡೆಕೋಟೆ ಗ್ರಾಮದ ಸಾಮಾಜಿಕ ಜಮಾಬಂದಿ ಫಲಾನುಭವಿಗಳ ಪಟ್ಟಿ.

| ಸಾಮಾಜಿಕ ವರ್ಗ | ಪುರುಷರು | ಮಹಿಳೆಯರು | ಬಿ.ಪಿ.ಎಲ್ | ಶೌಚಾಲಯ ಹೊಂದಿದ್ದಾರೆ |
|---|---|---|---|---|
| ಪರಿಶಿಷ್ಟ ಜಾತಿ | ೨೧ | ೫ | | ಹೌದು |
| ಪರಿಶಿಷ್ಟ ಪಂಗಡ | ೪೦ | ೨೪ | | ಹೌದು |
| ಹಿಂದುಳಿದ ವರ್ಗ | ೧ | ೧ | ಬಿ.ಪಿ.ಎಲ್ | ಹೌದು |
| ಇತರೆ | ೫೭ | ೧೫ | ಬಿ.ಪಿ.ಎಲ್ | ಹೌದು |
| ಅಲ್ಪಸಂಖ್ಯಾತರು | ೬ | ೪ | ಬಿ.ಪಿ.ಎಲ್ | ಹೌದು |

ಮೂಲ: ಡಬ್ಲ್ಯು.ಡಬ್ಲ್ಯು.ಡಬ್ಲ್ಯು/ಆರ್‌ಡಿಪಿಆರ್/ಕೆಆರ್/ಇನ್

## ಕೋಷ್ಟಕ ೪.೧೦.

### ಚೋರನೂರು ಗ್ರಾಮದ ಸಾಮಾಜಿಕ ಜಮಾಬಂದಿ ಫಲಾನುಭವಿಗಳ ಪಟ್ಟಿ

| ಸಾಮಾಜಿಕ ವರ್ಗ | ಪುರುಷರು | ಮಹಿಳೆಯರು | ಬಿ.ಪಿ.ಎಲ್. | ಶೌಚಾಲಯ ಹೊಂದಿದ್ದಾರೆ |
|---|---|---|---|---|
| ಪರಿಶಿಷ್ಟ ಜಾತಿ | ೧ | ೧ | ಬಿ.ಪಿ.ಎಲ್. | ಹೌದು |
| ಪರಿಶಿಷ್ಟ ಪಂಗಡ | ೫ | ೨ | ಬಿ.ಪಿ.ಎಲ್. | ಹೌದು |
| ಹಿಂದುಳಿದ ವರ್ಗ | ೭ | ೦ | ಬಿ.ಪಿ.ಎಲ್. | ಹೌದು |
| ಇತರೆ | ೨೪ | ೮ | ಬಿ.ಪಿ.ಎಲ್. | ಹೌದು |
| ಅಲ್ಪಸಂಖ್ಯಾತರು | ೦ | ೦ | ಬಿ.ಪಿ.ಎಲ್. | ಹೌದು |

ಮೂಲ: ಡಬ್ಲ್ಯು.ಡಬ್ಲ್ಯು.ಡಬ್ಲ್ಯು/ಆರ್‌ಡಿಪಿಆರ್/ಕೆಆರ್/ಇನ್

## ಕೋಷ್ಟಕ ೪.೧೧

### ಸೋವೆಹಳ್ಳಿ ಗ್ರಾಮದ ಸಾಮಾಜಿಕ ಜಮಾಬಂದಿ ಫಲಾನುಭವಿಗಳ ಪಟ್ಟಿ

| ಸಾಮಾಜಿಕ ವರ್ಗ | ಪುರುಷರು | ಮಹಿಳೆಯರು | ಬಿ.ಪಿ.ಎಲ್ | ಶೌಚಾಲಯ ಹೊಂದಿದ್ದಾರೆ |
|---|---|---|---|---|
| ಪರಿಶಿಷ್ಟ ಜಾತಿ | ೨ | ೦ | ಬಿ.ಪಿ.ಎಲ್ | ಹೌದು |
| ಪರಿಶಿಷ್ಟ ಪಂಗಡ | ೯ | ೧ | ಬಿ.ಪಿ.ಎಲ್ | ಹೌದು |
| ಹಿಂದುಳಿದ ವರ್ಗ | ೯ | ೧ | ಬಿ.ಪಿ.ಎಲ್ | ಹೌದು |
| ಇತರೆ | ೩ | ೦ | ಬಿ.ಪಿ.ಎಲ್ | ಹೌದು |
| ಅಲ್ಪಸಂಖ್ಯಾತರು | ೦ | ೦ | ಬಿ.ಪಿ.ಎಲ್ | ಹೌದು |

ಮೂಲ: ಡಬ್ಲ್ಯು.ಡಬ್ಲ್ಯು.ಡಬ್ಲ್ಯು/ಆರ್‌ಡಿಪಿಆರ್/ಕೆಆರ್/ಇನ್

### ಕೋಷ್ಟಕ ೪.೧೨

### ಅಪ್ಪನಯ್ಯನಹಳ್ಳಿ ಗ್ರಾಮದ ಸಾಮಾಜಿಕ ಜಮಾಬಂದಿ ಫಲಾನುಭವಿಗಳ ವಿವರ ಪಟ್ಟಿ

| ಸಾಮಾಜಿಕ ವರ್ಗ | ಪುರುಷರು | ಮಹಿಳೆಯರು | ಬಿ.ಪಿ.ಎಲ್ | ಶೌಚಾಲಯ ಹೊಂದಿದ್ದಾರೆ |
|---|---|---|---|---|
| ಪರಿಶಿಷ್ಟ ಜಾತಿ | ೧೧ | ೭ | ಹೌದು | ಹೌದು |
| ಪರಿಶಿಷ್ಟ ಪಂಗಡ | ೫ | ३ | ಹೌದು | ಹೌದು |
| ಹಿಂದುಳಿದ ವರ್ಗ | ೮ | ೬ | ಹೌದು | ಹೌದು |
| ಇತರೆ | ೨ | ೦ | ಹೌದು | ಹೌದು |
| ಅಲ್ಪಸಂಖ್ಯಾತರು | ೦ | ೦ | ಹೌದು | ಹೌದು |

ಈ ಅಧ್ಯಾಯದಲ್ಲಿ ಗ್ರಾಮಪಂಚಾಯಿತಿಯ ಮತದಾರ ಸದಸ್ಯರ ಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯ ಕುರಿತು ಅರಿವು ಇದೆಯೇ ಎನ್ನುವುದನ್ನು ಪ್ರಮುಖವಾಗಿ ಪರಿಶೀಲಿಸಲಾಗುವುದು ಹಾಗೂ ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ಗ್ರಾಮಸ್ಥರ ಭಾಗವಹಿಸುವಿಕೆ ಯಾವ ಮಟ್ಟದಲ್ಲಿ ಇದೆ ಎಂಬುದನ್ನು ವಿಶ್ಲೇಷಿಸಲಾಗುವುದು. ಗ್ರಾಮದ ಜನರು ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿಸದೇ ಇರುವುದಕ್ಕೆ ಕಾರಣಗಳನ್ನು ತಿಳಿಯುವುದು ಈ ಅಧ್ಯಾಯ ಪ್ರಮುಖವಾದ ಉದ್ದೇಶವಾಗಿದೆ. ಗ್ರಾಮಪಂಚಾಯಿತಿಗಳು ಗ್ರಾಮೀಣ ಭಾಗದ ಪ್ರಾಥಮಿಕ ಸಾರ್ವಜನಿಕ ಸರ್ಕಾರಿ ಸಂಸ್ಥೆಯಾಗಿದೆ. ಈ ಗ್ರಾಮಪಂಚಾಯಿತಿಗಳು ಗ್ರಾಮೀಣ ಭಾಗದ ಜನರಿಗೆ ಹತ್ತಿರದಲ್ಲಿದ್ದು ವಿದೇಶಿ ನೆರವಿನಿಂದ ರೂಪಿತವಾದ ಯೋಜನೆಗಳನ್ನು ಗ್ರಾಮೀಣ ಜನರಿಗೆ ತಲುಪಿಸುವ ಕೆಲಸ ಮಾಡುತ್ತದೆ. ಅದಷ್ಟೇ ಅಲ್ಲದೆ ಕೇಂದ್ರ ಸರ್ಕಾರದ ಅಭಿವೃದ್ಧಿ ಯೋಜನೆಗಳನ್ನು ಮತ್ತು ರಾಜ್ಯ ಸರ್ಕಾರದ ಯೋಜನೆಗಳನ್ನು, ವಿದೇಶಿ ಸಂಸ್ಥೆಗಳಿಂದ ಬರುವ ಯೋಜನೆ ಹಾಗೂ ಧನಸಹಾಯವನ್ನು ಗ್ರಾಮೀಣ ಜನರಿಗೆ ತಿಳಿಯಪಡಿಸಿ ಯೋಜನೆಗಳನ್ನು ಪಡೆಯಲು ಹೊಂದಿರಬೇಕಾದ ಅರ್ಹತೆಗಳನ್ನು ಜನರಿಗೆ ವಿವರಿಸುತ್ತದೆ. ಅರ್ಹತೆ ಹೊಂದಿದ ಜನರಿಗೆ ಯೋಜನೆಗಳನ್ನು ಮಂಜೂರು ಮಾಡುವುದು ಅವರನ್ನು ಫಲಾನುಭವಿಗಳನ್ನಾಗಿ ಮಾಡುವುದು ಮತ್ತು ಗ್ರಾಮಪಂಚಾಯಿತಿ ಕೆಲಸವಾಗಿರುತ್ತದೆ.

ಗ್ರಾಮಪಂಚಾಯಿತಿಗೆ ಬಂದಿರು ಅಭಿವೃದ್ಧಿ ಯೋಜನೆಗಳ ಬಗ್ಗೆ ಧನಸಹಾಯ ಮತ್ತು ತೆರಿಗೆ ವೆಚ್ಚಗಳ ಕುರಿತು ಗ್ರಾಮಪಂಚಾಯಿತಿಯ ಸಿಬ್ಬಂದಿವರ್ಗವು ಸಾರ್ವಜನಿಕರಿಗೆ, ಆ ಪಂಚಾಯಿತಿ ಮತದಾರರಿಗೆ ಪ್ರಚಾರಗೊಳಿಸಿ ತಿಳಿಸಬೇಕು. ಡಂಗುರ ಹಾಕಿಸುವುದರ ಮೂಲಕ ಸ್ಥಳೀಯ ಪತ್ರಿಕೆಗಳ ಪ್ರಕಟಣೆ ಮೂಲಕ ಪಂಚಾಯಿತಿ ವ್ಯಾಪ್ತಿಗೆ ಬರುವ ಮತದಾರರನ್ನು ಸೇರಿದಂತೆ ಸಾರ್ವಜನಿಕ

ಗ್ರಾಮಸಭೆ ಆಯೋಜಿಸಿ ಸಾರ್ವತ್ರಿಕಗೊಳಿಸಬೇಕಾಗಿರುವುದು ಗ್ರಾಮಪಂಚಾಯಿತಿಯ ಜವಾಬ್ದಾರಿಯಾಗಿರುತ್ತದೆ. ಪ್ರತಿಕ್ಷಣ ಪಂಚಾಯಿತಿಯ ಆಡಳಿತಾತ್ಮಕ ಆರ್ಥಿಕ ಮತ್ತು ಆರ್ಥಿಕೇತರ ಪ್ರಗತಿಯನ್ನು ಜನರಿಗೆ ತಿಳಿಸುವ ಮತ್ತು ಪಂಚಾಯಿತಿಗಳ ಪಾರದರ್ಶಕತೆಯನ್ನು ಸಾರ್ವತ್ರಿಕಗೊಳಿಸಿ ಉತ್ತಮ ಸೇವೆ ನೀಡಲು ಅವಕಾಶ ಮಾಡಿಕೊಡುವ ಸಾಮಾಜಿಕ ಪಂಚಾಯಿತಿ ಜಮಾಬಂದಿ ಸಭೆಯ ಕುರಿತು ಜನರಲ್ಲಿ ಅರಿವು ಮಾಡಿಸುವುದು ಗ್ರಾಮಪಂಚಾಯಿತಿಗಳ ಮುಖ್ಯ ಕರ್ತವ್ಯಗಳಲ್ಲಿ ಒಂದಾಗಿದೆ. ಗ್ರಾಮದ ಮತದಾರರು ಈ ಮೇಲಿನ ಮಾಹಿತಿಗಳನ್ನು ತಿಳಿದಿರುವ ಮತ್ತು ಪಡೆಯುವ ಹಕ್ಕನ್ನು ಹೊಂದಿರುತ್ತಾರೆ.

ಬಳ್ಳಾರಿ ಜಿಲ್ಲೆಯ ಗ್ರಾಮಪಂಚಾಯಿತಿಗಳ ಸಾಮಾಜಿಕ ಜಮಾಬಂದಿ ಗ್ರಾಮಸಭೆಗಳಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡ ಗ್ರಾಮಪಂಚಾಯಿತಿಗಳಲ್ಲಿ ಗ್ರಾಮದ ವಿವಿಧ ಸಾಮಾಜಿಕ ಗುಂಪುಗಳಾದ, ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಅಲ್ಪಸಂಖ್ಯಾತ ಸಮುದಾಯಗಳು ಮತ್ತು ಸಾಮಾನ್ಯ ಹಿಂದುಳಿದ ವರ್ಗಗಳಿಗೆ ಪಂಚಾಯಿತಿ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಕುರಿತು ಎಷ್ಟು ಜನರಲ್ಲಿ ಅರಿವು ಇದೆ ಎಂಬುದನ್ನು ಪರಿಗಣಿಸಲಾಗಿದೆ. ಅರಿವು ಹೊಂದಿರುವ ಜನರಲ್ಲಿ ಎಷ್ಟು ಜನರು ಭಾಗವಹಿಸಿದ್ದಾರೆ, ಮತ್ತು ಪ್ರತಿ ಗ್ರಾಮಪಂಚಾಯಿತಿಯಲ್ಲಿ ವಿವಿಧ ಸಾಮಾಜಿಕ ವರ್ಗದ ಎಷ್ಟು ಜನರು ಭಾಗವಹಿಸಿದ್ದಾರೆ, ಪಂಚಾಯಿತಿ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಫಲಾನುಭವಿಗಳಾಗಿದ್ದಾರೆ ಎಂಬುದರ ಕುರಿತು ಅಧ್ಯಯನ ಮಾಡಲಾಗಿದೆ.

**ಪಾಪಿನಾಯಕನಹಳ್ಳಿ ಗ್ರಾಮದ ಸಾಮಾಜಿಕ ಆಯಾಮಗಳ ವಿವರಗಳ ಪಟ್ಟಿ**

| ಸಾಮಾಜಿಕ ವರ್ಗ | ಒಟ್ಟು ಸಂದರ್ಶಕರು | ಜಮಾಬಂದಿ ಅರಿವು ಹೊಂದಿದವರು | ಜಮಾಬಂದಿ ಭಾಗವಹಿಸಿದವರು | ಕಡತ ಪರಿಶೀಲನೆ | ಪುರುಷ | ಮಹಿಳೆ |
|---|---|---|---|---|---|---|
| ಪರಿಶಿಷ್ಟ ಜಾತಿ | ೧೪ | ೬ | ೪ | ೧ | ೧೪ | ೧೪ |
| ಪರಿಶಿಷ್ಟ ಪಂಗಡ | ೯ | ೩ | ೨ | ೦೦ | ೧೮ | ೫ |
| ಹಿಂದುಳಿದ ವರ್ಗ | ೧೬ | ೧೦ | ೮ | ೨ | ೩ | ೧ |
| ಇತರೆ | ೭ | ೪ | ೪ | ೨ | ೪೪ | ೦೯ |
| ಅಲ್ಪಸಂಖ್ಯಾತ | ೪ | ೨ | ೧ | ೦೦ | ೩ | ೧ |
| ಒಟ್ಟು | ೫೦ | ೨೫ | ೧೯ | ೫ | ೮೨ | ೩೦ |

**ಮೂಲ:** ಕ್ಷೇತ್ರಕಾರ್ಯದ ಮಾಹಿತಿ

ಪಾಪಿನಾಯಕನಹಳ್ಳಿಯ ೫೦ ಜನ ಸಂದರ್ಶಕರಲ್ಲಿ ೫೦ ಜನರಿಗೆ ಸಾಮಾಜಿಕ ಜಮಾಬಂದಿ ಇರುವುದು ಕಂಡುಬಂದಿದೆ. ಶೇ.೪೨ ಜನರು ಸಾಮಾಜಿಕ ಜಮಾಬಂದಿಯಲ್ಲಿ ಭಾಗವಹಿಸಿದ್ದಾರೆ. ಶೇ.೧೦ರಷ್ಟು ಸಂದರ್ಶಕರು ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ಸಕ್ರಿಯವಾಗಿ ಭಾಗವಹಿಸಿ ಕಡತಗಳನ್ನು ಪರಿಶೀಲಿಸಿದ್ದಾರೆ. ಈ ಗ್ರಾಮದಲ್ಲಿ ಪರಿಶಿಷ್ಟ ಜಾತಿಯವರಲ್ಲಿ ಶೇ.೨೪ರಷ್ಟು ಸಾಮಾಜಿಕ ಜಮಾಬಂದಿ ಅರಿವು ಇದೆ, ಶೇ.೧೧ರಷ್ಟು ಮತ್ತು ಶೇ. ೮ರಷ್ಟು ಜನರು ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ಭಾಗವಹಿಸಿದ್ದಾರೆ. ಒಟ್ಟು ವರ್ಷದಲ್ಲಿ ಪರಿಶಿಷ್ಟ ಜಾತಿಯ ೨೮ ಜನರು ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಪಲಾನುಭವಿಗಳಾಗಿ ಆಯ್ಕೆಯಾಗಿದ್ದಾರೆ. ಈ ಗ್ರಾಮದಲ್ಲಿ ಪರಿಶಿಷ್ಟ ಜಾತಿಯವರ ಜನಸಂಖ್ಯೆಯು ಶೇ.೪೬ರಷ್ಟು ಕಂಡುಬರುತ್ತದೆ. ಪರಿಶಿಷ್ಟ ಪಂಗಡದ ಜನರನ್ನು ಒಟು ೯ ಜನರನ್ನು ಸಂದರ್ಶನ ಮಾಡಲಾಗಿದೆ. ಅವರಲ್ಲಿ ೬ ಜನರು ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಅರಿವು ಹೊಂದಿದ್ದಾರೆ. ಆ ಜನರಲ್ಲಿ ೪ ಜನರು ಮಾತ್ರ ಜಮಾಬಂದಿ ಗ್ರಾಮಸಭೆಯಲ್ಲಿ ಭಾಗವಹಿಸಿದ್ದಾರೆ. ಈ ಗ್ರಾಮದಲ್ಲಿ ೨೩ ಜನರು ಪಂಚಾಯಿತಿ ಸಾಮಾಜಿಕ ಜಮಾಬಂದಿಯ ಫಲಾನುಭವವನ್ನು ಪಡೆದಿದ್ದಾರೆ. ಹಿಂದುಳಿದ ವರ್ಗದವರು ೧೬ ಜನರನ್ನು ಸಂದರ್ಶಿಸಲಾಯಿತು. ಅವರಲ್ಲಿ ೧೦ ಜನರು ಅರಿವು ಹೊಂದಿದ್ದಾರೆ. ಅರಿವು ಹೊಂದಿದ ೧೦ ಜನರಲ್ಲಿ ೮ ಜನರು ಭಾಗವಹಿಸಿದ್ದಾರೆ. ಒಟ್ಟು ಜನರು ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ಸಕ್ರಿಯವಾಗಿ ಭಾಗವಹಿಸಿ ಫಲಾನುಭವಿಗಳಾಗಿ ಜಮಾಬಂದಿ ಸಭೆಯ ಅನುಕೂಲತೆಗಳನ್ನು ಪಡೆದಿದ್ದಾರೆ. ಇತರೆ ಅಥವಾ ಸಾಮಾನ್ಯವರ್ಗದ ೭ ಜನರನ್ನು ಸಂದರ್ಶಿಸಲಾಯಿತು. ಅವರಲ್ಲಿ ೪ ಜನರಿಗೆ ಜಮಾಬಂದಿಯ ಅರಿವಿದೆ. ೪ ಜನರು ಭಾಗವಹಿಸಿದ್ದಾರೆ. ಒಟ್ಟು ೫೩ ಜನರು ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಫಲಾನುಭವಿಗಳಾಗಿದ್ದಾರೆ. ೪ ಜನ ಅಲ್ಪಸಂಖ್ಯಾತರನ್ನು ಪಂಚಾಯಿತಿ ಜಮಾಬಂದಿಯು ಸಂದರ್ಶಿಸಲಾಯಿತು. ಅವರಲ್ಲಿ ೨ ಜನರಿಗೆ ಜಮಾಬಂದಿಯ ಅರಿವಿದೆ. ಒಬ್ಬರು ಮಾತ್ರ ಸಕ್ರಿಯವಾಗಿ ಭಾಗವಹಿಸಿದ್ದಾರೆ. ಈ ಗ್ರಾಮದಲ್ಲಿ ೪ ಜನರು ಪಂಚಾಯಿತಿ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಅನುಕೂಲತೆಯನ್ನು ಪಡೆದಿದ್ದಾರೆ. ಒಟ್ಟು ಈ ಗ್ರಾಮಪಂಚಾಯಿತಿಯಲ್ಲಿ ೧೧೨ ಜನರು ಸಾಮಾಜಿಕ ಜಮಾಬಂದಿಯ ಅನುಕೂಲತೆಯನ್ನು ಪಡೆದಿದ್ದಾರೆ.

## ಸಂಗನಕಲ್ಲು ಗ್ರಾಮಪಂಚಾಯಿತಿಯ ಸಾಮಾಜಿಕ ಆಯಾಮಗಳು

| ಸಾಮಾಜಿಕ ವರ್ಗ | ಒಟ್ಟು ಸಂದರ್ಶಕರು | ಜಮಾಬಂದಿ ಅರಿವು ಹೊಂದಿದವರು | ಜಮಾಬಂದಿ ಭಾಗವಹಿಸಿದವರು | ಕಡತ ಪರಿಶೀಲನೆ | ಪುರುಷ | ಮಹಿಳೆ |
|---|---|---|---|---|---|---|
| ಪರಿಶಿಷ್ಟ ಜಾತಿ | ೨೪ | ೧೧ | ೫ | ೩ | ೧೩ | ೦೦ |
| ಪರಿಶಿಷ್ಟ ಪಂಗಡ | ೦೮ | ೪ | ೩ | ೦೦ | ೦೦ | ೧ |
| ಹಿಂದುಳಿದ ವರ್ಗ | ೧೦ | ೭ | ೧ | ೧ | ೧ | ೧ |
| ಇತರೆ | ೪ | ೩ | ೧ | ೧ | ೨೩ | ೦೭ |
| ಅಲ್ಪಸಂಖ್ಯಾತ | ೪ | ೧ | ೧ | ೦೦ | ೦೦ | ೦೦ |
| ಒಟ್ಟು | ೫೦ | ೨೬ | ೧೧ | ೫ | ೩೭ | ೧೦ |

**ಮೂಲ:** ಕ್ಷೇತ್ರಕಾರ್ಯದ ಮಾಹಿತಿ

ಸಂಗನಕಲ್ಲು ಗ್ರಾಮಪಂಚಾಯಿತಿಯಲ್ಲಿ ೨೪ ಪರಿಶಿಷ್ಟ ಜಾತಿಯವರನ್ನು ಸಂದರ್ಶಿಸಲಾಯಿತು. ಅವರಲ್ಲಿ ೧೧ ಜನರಿಗೆ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಅರಿವಿದೆ. ೫ ಜನರು ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ಭಾಗವಹಿಸಿದ್ದಾರೆ. ೩ ಜನರು ಜಮಾಬಂದಿ ಸಭೆಯಲ್ಲಿ ಕಡತ ಪರಿಶೀಲನೆ ಮಾಡಿದ್ದಾರೆ. ೧೩ ಪುರುಷರು, ೨ ಮಹಿಳೆಯರು ಸಾಮಾಜಿಕ ಜಮಾಬಂದಿ ಗ್ರಾಮ ಸಭೆಯ ಫಲಿತವನ್ನು ಪಡೆದಿದ್ದಾರೆ.

ಪರಿಶಿಷ್ಟ ಪಂಗಡದ ೮ ಜನರನ್ನು ಸಂದರ್ಶಿಸಲಾಯಿತು ೮ ಜನರಲ್ಲಿ ೪ ಜನರು ಸಾಮಾಜಿಕ ಜಮಾಬಂದಿ ಅರಿವು ಹೊಂದಿದ್ದಾರೆ. ೩ ಜನರು ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿಸಿದ್ದಾರೆ. ಯಾರೊಬ್ಬರೂ ಕಡತ ಪರಿಶೀಲನೆಯನ್ನು ಮಾಡದೇ ಇರುವುದು ಕಂಡು ಬಂದಿದೆ. ಒಬ್ಬ ಮಹಿಳೆ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಫಲಿತವನ್ನು ಪಡೆದಿದ್ದಾರೆ. ಪುರುಷರು ಸಾಮಾಜಿಕ ಜಮಾಬಂದಿ ಸಭೆಯ ಫಲಿತವನ್ನು ಪಡೆದಿಲ್ಲ.

ಹಿಂದುಳಿದ ವರ್ಗದ ೧೦ ಜನರನ್ನು ಸಂದರ್ಶಿಸಲಾಯಿತು. ಇವರಲ್ಲಿ ೭ ಜನರಿಗೆ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಅರಿವು ಹೊಂದಿದ್ದಾರೆ. ಇವರಲ್ಲಿ ೧ ಮಾತ್ರ ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ಭಾಗವಹಿಸಿದ್ದಾರೆ. ಈ ಗ್ರಾಮದ ಸಾಮಾಜಿಕ ಜಮಾಬಂದಿ ಗ್ರಾಮಸಭೆ ಫಲಾನುಭವವನ್ನು ೧ ಪುರುಷ ಮತ್ತು ೧ ಮಹಿಳೆ ಮಾತ್ರ ಪಡೆದಿದ್ದಾರೆ.

ಇತರೆ ಅಥವಾ ಸಾಮಾನ್ಯವರ್ಗದ ೪ ಜನರನ್ನು ಸಂದರ್ಶಿಸಲಾಯಿತು. ಅವರಲ್ಲಿ ೩ ಜನರು ಮಾತ್ರ ಸಾಮಾಜಿಕ ಜಮಾಬಂದಿ ಅರಿವು ಹೊಂದಿದ್ದಾರೆ. ಇವರಲ್ಲಿ ಒಬ್ಬ ಮಾತ್ರ

ಜಮಾಬಂದಿ ಸಭೆಯಲ್ಲಿ ಭಾಗವಹಿಸಿದ್ದಾರೆ. ಒಬ್ಬ ಮಾತ್ರ ಕಡತ ಪರಿಶೀಲನೆಯಲ್ಲಿ ಪಾಲ್ಗೊಂಡಿದ್ದಾರೆ. ೨೩ ಜನ ಪುರುಷರು, ೭ ಜನ ಮಹಿಳೆಯರು ಸಾಮಾಜಿಕ ಜಮಾಬಂದಿ ಸಭೆಯ ಫಲಿತವನ್ನು ಪಡೆದಿದ್ದಾರೆ.

೪ ಜನ ಅಲ್ಪಸಂಖ್ಯಾತರನ್ನು ಸಂದರ್ಶಿಸಲಾಯಿತು. ಅವರಲ್ಲಿ ೧ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಅರಿವು ಹೊಂದಿದ್ದಾರೆ. ಅದರಲ್ಲಿ ಒಬ್ಬ ಮಾತ್ರ ಕಡತ ಪರಿಶೀಲನೆಯನ್ನು ಮಾಡಿದ್ದಾರೆ. ಈ ಗ್ರಾಮಪಂಚಾಯಿತಿಯಲ್ಲಿ ಅಲ್ಪಸಂಖ್ಯಾತರು ಯಾರೂ ಸಾಮಾಜಿಕ ಜಮಾಬಂದಿ ಸಭೆಯ ಫಲಿತವನ್ನು ಪಡೆಯದೇ ಇರುವುದು ಕಂಡು ಬಂದಿರುತ್ತದೆ.

ಸಂಗನಕಲ್ಲು ಗ್ರಾಮಪಂಚಾಯಿತಿಯಲ್ಲಿ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಜ್ಞಾನ ಅಥವಾ ಅರಿವು ಕುರಿತು ೫೦ ಜನರನ್ನು ಸಂದರ್ಶಿಸಲಾಯಿತು. ಅವರಲ್ಲಿ ೨೬ ಜನರಿಗೆ(ಶೇ೫೨) ಜಮಾಬಂದಿ ಸಭೆಯ ಅರಿವಿದೆ. ಉಳಿದವರಿಗೆ ಅರಿವಿಲ್ಲದೆ ಇರುವುದು ಕಂಡುಬಂದಿದೆ. ಅರಿವಿದ್ದ ೨೬ ಜನರಲ್ಲಿ ೧೧ ಜನರು(ಶೇ.೨೨) ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ಭಾಗವಹಿಸಿದ್ದಾರೆ. ಇವರಲ್ಲಿ ೫ ಜನರು(ಶೇ.೧೦) ಜಮಾಬಂದಿ ಸಭೆಯಲ್ಲಿ ಕಡತ ಪರಿಶೀಲನೆಯನ್ನು ಮಾಡಿದ್ದಾರೆ. ಈ ಗ್ರಾಮದ ಸಾಮಾಜಿಕ ಜಮಾಬಂದಿ ಸಭೆಯಿಂದ ೪೭ ಜನರು ಫಲಿತವನ್ನು ಪಡೆದಿದ್ದಾರೆ.

**ಸೊವೇನಹಳ್ಳಿ ಗ್ರಾಮಪಂಚಾಯಿತಿಯ ಸಾಮಾಜಿಕ ಆಯಾಮಗಳು**

| ಸಾಮಾಜಿಕ ವರ್ಗ | ಒಟ್ಟು ಸಂದರ್ಶಕರು | ಜಮಾಬಂದಿ ಅರಿವು ಹೊಂದಿದವರು | ಜಮಾಬಂದಿ ಭಾಗವಹಿಸಿದವರು | ಕಡತ ಪರಿಶೀಲನೆ | ಪುರುಷ | ಮಹಿಳೆ |
|---|---|---|---|---|---|---|
| ಪರಿಶಿಷ್ಟ ಜಾತಿ | ೧೦ | ೬ | ೨ | ೦೦ | ೨ | ೦೦ |
| ಪರಿಶಿಷ್ಟ ಪಂಗಡ | ೧೬ | ೪ | ೧ | ೧ | ೯ | ೧ |
| ಹಿಂದುಳಿದ ವರ್ಗ | ೯ | ೬ | ೪ | ೨ | ೯ | ೧ |
| ಇತರೆ | ೯ | ೩ | ೨ | ೧ | ೩ | ೦೦ |
| ಅಲ್ಪಸಂಖ್ಯಾತ | ೬ | ೨ | ೨ | ೦೦ | ೦೦ | ೦೦ |
| ಒಟ್ಟು | ೫೦ | ೨೧ | ೧೧ | ೪ | ೨೩ | ೨ |

**ಮೂಲ:** ಕ್ಷೇತ್ರಕಾರ್ಯದ ಮಾಹಿತಿ

ಸೊವೇನಹಳ್ಳಿ ಗ್ರಾಮಪಂಚಾಯಿತಿಯಲ್ಲಿ ಪರಿಶಿಷ್ಟ ಜಾತಿಯ ೧೦ ಜನರನ್ನು ಸಂದರ್ಶಿಸ ಲಾಯಿತು. ಅವರಲ್ಲಿ ೬ ಜನರಿಗೆ ಸಾಮಾಜಿಕ ಜಮಾಬಂದಿ ಸಭೆಯ ಕುರಿತು ಅರಿವಿದೆ. ಅರಿವಿದ್ದ

೬ ಜನರಲ್ಲಿ ೨ ಜನರು ಮಾತ್ರ ಭಾಗವಹಿಸಿದ್ದಾರೆ. ಯಾರೊಬ್ಬರೂ ಪರಿಶಿಷ್ಟ ಜಾತಿಯವರು ಜಮಾಬಂದಿ ಗ್ರಾಮಸಭೆಯಲ್ಲಿ ಕಡತಗಳ ಪರಿಶೀಲನೆ ಮಾಡಿರುವುದಾಗಿ ತಿಳಿಸಿಲ್ಲ ಹಾಗೂ ೨ ಪುರುಷರು ಮಾತ್ರ ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ಭಾಗವಹಿಸಿ ಯೋಜನೆಗಳ ಫಲಿತವನ್ನು ಪಡೆದಿದ್ದಾರೆ. ಒಬ್ಬ ಮಹಿಳೆಯೂ ಸಾಮಾಜಿಕ ಜಮಾಬಂದಿ ಸಭೆಯ ಫಲಿತವನ್ನು ಪಡೆದಿರುವುದಿಲ್ಲ.

**ಪರಿಶಿಷ್ಟ ಪಂಗಡ:** ಈ ಗ್ರಾಮದಲ್ಲಿ ೧೬ ಪರಿಶಿಷ್ಟ ಪಂಗಡದವರನ್ನು ಸಂದರ್ಶಿಸಲಾಯಿತು. ಅವರಲ್ಲಿ ೪ ಜನರಲ್ಲಿ ಮಾತ್ರ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಕುರಿತು ಅರಿವಿರುವುದು ಕಂಡುಬಂದಿರುತ್ತದೆ. ಅರಿವಿರುವ ೪ ಜನರಲ್ಲಿ ಒಬ್ಬ ಮಾತ್ರ ಜಮಾಬಂದಿ ಸಭೆಯಲ್ಲಿ ಭಾಗವಹಿಸಿದ್ದಾರೆ. ಆ ಒಬ್ಬರು ಕಡತ ಪರಿಶೀಲನೆಯನ್ನು ಮಾಡಿದ್ದಾರೆ. ೯ ಜನ ಪುರುಷರು ಒಬ್ಬ ಮಹಿಳೆಯು ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಫಲಿತವನ್ನು ಪಡೆದಿದ್ದಾರೆ.

**ಹಿಂದುಳಿದ ವರ್ಗ:** ಹಿಂದುಳಿದ ವರ್ಗದವರ ೯ ಜನರನ್ನು ಸಂದರ್ಶಿಸಲಾಯಿತು. ಅವರಲ್ಲಿ ೬ ಜನರಿಗೆ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಕುರಿತು ಮಾಹಿತಿ ಇದೆ. ಅರಿವಿರುವ ೬ ಜನರಲ್ಲಿ ೪ ಜನರು ಜಮಾಬಂದಿಯಲ್ಲಿ ಭಾಗವಹಿಸಿದ್ದಾರೆ. ೨ ಜನರು ಕಡತಗಳ ಪರಿಶೀಲನೆ ಮಾಡಿದ್ದಾರೆ. ಹಾಗೂ ೯ ಜನ ಪುರುಷರು ಒಬ್ಬ ಮಹಿಳೆಯು ಸಾಮಾಜಿಕ ಜಮಾಬಂದಿ ಸಭೆಯ ಫಲಿತವನ್ನು ಪಡೆದಿದ್ದಾರೆ.

**ಸಾಮಾನ್ಯ ಅಥವಾ ಇತರೆ :** ಸಾಮಾನ್ಯವರ್ಗದ ೯ ಜನರನ್ನು ಸಂದರ್ಶಿಸಲಾಯಿತು. ಅವರಲ್ಲಿ ೩ ಜನರಿಗೆ ಸಾಮಾಜಿಕ ಜಮಾಬಂದಿ ಸಭೆಯ ಮಾಹಿತಿ ಇದೆ. ಅದರಲ್ಲಿ ೨ ಜನ ಭಾಗವಹಿಸಿದ್ದಾರೆ. ಒಬ್ಬರು ಕಡತ ಪರಿಶೀಲನೆ ಮಾಡಿದ್ದಾರೆ. ೩ ಜನ ಪುರುಷ ಜಮಾಬಂದಿ ಫಲಿತವನ್ನು ಪಡೆದಿದ್ದಾರೆ.

**ಅಲ್ಪಸಂಖ್ಯಾತರು:** ಅಲ್ಪಸಂಖ್ಯಾತರ ೬ ಜನರನ್ನು ಸಂದರ್ಶಿಸಲಾಯಿತು. ಅದರಲ್ಲಿ ೨ ಜನರು ಸಾಮಾಜಿಕ ಜಮಾಬಂದಿ ಸಭೆಯ ಅರಿವು ಹೊಂದಿದ್ದಾರೆ. ೨ ಜನರು ಭಾಗವಹಿಸಿದ್ದಾರೆ. ಈ ಗ್ರಾಮದಲ್ಲಿ ಯಾರೊಬ್ಬರೂ ಜಮಾಬಂದಿ ಸಭೆಯಲ್ಲಿ ಕಡತ ಪರಿಶೀಲನೆ ಮಾಡಿಲ್ಲ. ಅಲ್ಪಸಂಖ್ಯಾತ ಮಹಿಳೆಯರು ಪುರುಷ ಈ ಜಮಾಬಂದಿ ಸಭೆಯ ಫಲಿತವನ್ನು ಪಡೆದಿಲ್ಲ. ಈ ಗ್ರಾಮದಲ್ಲಿ ೫೦ ಜನರನ್ನು ಸಂದರ್ಶಿಸಿದರೆ ಅವರಲ್ಲಿ ೨೧ ಜನರು(ಶೇ.೪೨) ಜನರಿಗೆ ಸಾಮಾಜಿಕ ಜಮಾಬಂದಿಯ ಅರಿವಿದೆ. ೧೧ ಜನರು(ಶೇ.೨೨) ಜಮಾಬಂದಿ ಸಭೆಯಲ್ಲಿ ಭಾಗವಹಿಸಿದ್ದಾರೆ. ಕೇವಲ ೪೦ ಜನರು ಜಮಾಬಂದಿ ಸಭೆಯಲ್ಲಿ ಸಕ್ರಿಯವಾಗಿ ಭಾಗವಹಿಸಿ ಕಡತಗಳ ಪರಿಶೀಲನೆ ಮಾಡಿದ್ದಾರೆ. ಈ ಗ್ರಾಮದಲ್ಲಿ ೨೫ ಜನ ಮಾತ್ರ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಉಪಯುಕ್ತತೆಯನ್ನು ಪಡೆದಿದ್ದಾರೆ.

## ಮೋಕ ಗ್ರಾಮಪಂಚಾಯಿತಿಯ ಸಾಮಾಜಿಕ ಆಯಾಮಗಳು

| ಸಾಮಾಜಿಕ ವರ್ಗ | ಒಟ್ಟು ಸಂದರ್ಶಕರು | ಜಮಾಬಂದಿ ಅರಿವು ಹೊಂದಿದವರು | ಜಮಾಬಂದಿ ಭಾಗವಹಿಸಿದವರು | ಕಡತ ಪರಿಶೀಲನೆ | ಪುರುಷ | ಮಹಿಳೆ |
|---|---|---|---|---|---|---|
| ಪರಿಶಿಷ್ಟ ಜಾತಿ | ೧೦ | ೬ | ೪ | ೨ | ೫ | ೨ |
| ಪರಿಶಿಷ್ಟ ಪಂಗಡ | ೨೨ | ೧೪ | ೯ | ೩ | ೩೦ | ೧೮ |
| ಹಿಂದುಳಿದ ವರ್ಗ | ೧೦ | ೫ | ೨ | ೧ | ೧೭ | ೧೫ |
| ಇತರೆ | ೫ | ೨ | ೧ | ೦೦ | ೧೪ | ೧೨ |
| ಅಲ್ಪಸಂಖ್ಯಾತ | ೩ | ೨ | ೧ | ೦೦ | ೨೭ | ೧೮ |
| ಒಟ್ಟು | ೫೦ | ೨೯ | ೧೭ | ೦೬ | ೯೩ | ೬೫ |

ಮೂಲ: ಕ್ಷೇತ್ರಕಾರ್ಯದ ಮಾಹಿತಿ

ಮೋಕ ಗ್ರಾಮಪಂಚಾಯಿತಿ ವ್ಯಾಪ್ತಿಯಲ್ಲಿ ೧೦ ಜನ ಪರಿಶಿಷ್ಟಜಾತಿಯವರನ್ನು ಸಂದರ್ಶಿಸಲಾಯಿತು. ೧೦ ಜನರಲ್ಲಿ ೬ ಜನರಿಗೆ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಅರಿವಿದೆ. ೬ ಜನರಲ್ಲಿ ೪ ಜನರು ಸಭೆಯಲ್ಲಿ ಭಾಗವಹಿಸಿದ್ದಾರೆ. ಒಟ್ಟು ೭ ಜನ ಪರಿಶಿಷ್ಟ ಜಾತಿಯವರು ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಅನುಕೂಲತೆಯನ್ನು ಹೊಂದಿದ್ದಾರೆ. ಅವರಲ್ಲಿ ೫ ಜನ ಪುರುಷರು ಮತ್ತು ೨ ಜನ ಮಹಿಳೆಯವರು ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ಭಾಗವಹಿಸಿ ಫಲಾನುಭವನ್ನು ಪಡೆದಿದ್ದಾರೆ. ಗ್ರಾಮೀಣ ಅಭಿವೃದ್ಧಿ ಯೋಜನೆಯ ಫಲಾನುಭವಿಗಳು ಮಹಿಳೆಯರನ್ನು ಕೇಂದ್ರೀಕರಿಸಿಕೊಂಡು ಸಿದ್ಧಗೊಳ್ಳುತ್ತವೆ. ಆದರೆ ಈ ಗ್ರಾಮಪಂಚಾಯಿತಿಯಲ್ಲಿ ಮಹಿಳೆಯರು ಕೇವಲ ೨ ಜನ ಮಾತ್ರ ಭಾಗವಹಿಸಿದ್ದಾರೆ. ಪರಿಶಿಷ್ಟ ಪಂಗಡದವರ ೨೨ ಜನರನ್ನು ಸಂದರ್ಶಿಸಲಾಯಿತು. ಇವರಲ್ಲಿ ೧೪ ಜನರಿಗೆ ಮಾತ್ರ ಸಾಮಾಜಿಕ ಜಮಾಬಂದಿಯ ಅರಿವಿರುವುದು ತಿಳಿದುಬಂದಿದೆ. ಇವರಲ್ಲಿ ೯ ಜನ ಮಾತ್ರ ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ಭಾಗವಹಿಸಿರುವುದು ತಿಳಿದುಬಂದಿತ್ತು. ಈ ಗ್ರಾಮದಲ್ಲಿ ೩೦ ಜನ ಪುರುಷರು ೧೮ ಜನ ಮಹಿಳೆಯರು ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಅನುಕೂಲತೆಗಳನ್ನು ಹೊಂದಿದ್ದಾರೆ. ಹಿಂದುಳಿದ ವರ್ಗದವರಲ್ಲಿ ೧೦ ಜನರನ್ನು ಸಂದರ್ಶಿಸಲಾಯಿತು. ಅವರಲ್ಲಿ ೫ ಜನರು ಅರಿವು ಹೊಂದಿದ್ದಾರೆ. ೫ ಜನರಲ್ಲಿ ೨ ಮಾತ್ರ ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ಭಾಗವಹಿಸಿದ್ದಾರೆ. ೧೭ ಜನ ಪುರುಷರು ಮತ್ತು ೧೫ ಜನ ಮಹಿಳೆಯರು ಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯ ಅನುಕೂಲತೆಯನ್ನು

ಪಡೆದಿದ್ದಾರೆ. ಹಿಂದುಳಿದ ವರ್ಗದವರಲ್ಲಿ ಸಾಮಾಜಿಕ ಜಮಾಬಂದಿ ಅನುಕೂಲತೆ ಪಡೆದಿರುವವರಲ್ಲಿ ಪುರುಷರು ಮತ್ತು ಮಹಿಳೆಯರು ಕಡಿಮೆ ಅಂತರ ಹೊಂದಿದ್ದಾರೆ. ಅಲ್ಪಸಂಖ್ಯಾತ ಜನರನ್ನು ೫ ಜನರನ್ನು ಸಂದರ್ಶನ ಮಾಡಲಾಯಿತು. ಅವರಲ್ಲಿ ೨ ಜನರು ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಅರಿವು ಹೊಂದಿದ್ದಾರೆ. ಇಬ್ಬರಲ್ಲಿ ಒಬ್ಬರು ಮಾತ್ರ ಜಮಾಬಂದಿ ಸಭೆಯಲ್ಲಿ ಭಾಗವಹಿಸಿದ್ದಾರೆ. ೧೪ ಹಿಂದುಳಿದ ಪುರುಷರು ಮತ್ತು ೧೨ ಜನ ಮಹಿಳೆಯರು ಸಾಮಾಜಿಕ ಜಮಾಬಂದಿಯ ಅನುಕೂಲತೆಯನ್ನು ಪಡೆದಿದ್ದಾರೆ. ೩ ಜನ ಅಲ್ಪಸಂಖ್ಯಾತರನ್ನು ಸಂದರ್ಶಿಸಲಾಯಿತು. ಇವರಲ್ಲಿ ೦೨ ಸಾಮಾಜಿಕ ಜಮಾಬಂದಿ ಗ್ರಾಮಸಭೆ ಅರಿವುದ ಹೊಂದಿದ್ದಾರೆ. ೨ ಜನರಲ್ಲಿ ಒಬ್ಬರು ಮಾತ್ರ ಜಮಾಬಂದಿ ಸಭೆ ಭಾಗವಹಿಸಿದ್ದಾರೆ. ಆ ಒಬ್ಬರು ಕಡತ ಪರಿಶೀಲನೆ ಮಾಡಿದ್ದಾರೆ. ೨೭ ಮಂದಿ ಪುರುಷರು ೧೮ ಮಹಿಳೆಯರು ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಅನುಕೂಲತೆಯನ್ನು ಪಡೆದಿದ್ದಾರೆ. ಈ ಮೋಕಾ ಗ್ರಾಮದಲಿ ೯೩ ಜನ ಪುರುಷ ಮತ್ತು ೬೫ ಜನ ಮಹಿಳೆಯರು ಸಾಮಾಜಿಕ ಜಮಾಬಂದಿಯಲ್ಲಿ ಭಾಗವಹಿಸಿ ಫಲವನ್ನು ಪಡೆದಿದ್ದಾರೆ. ಗ್ರಾಮದಲ್ಲಿ ಸಂದರ್ಶಿಸಿದ ೫೦ ಜನರಲ್ಲಿ ೨೯ ಜನರು(ಶೇ.೫೮) ಸಾಮಾಜಿಕ ಜಮಾಬಂದಿ ಅರಿವು ಹೊಂದಿದ್ದಾರೆ. ೧೭ ಜನರು (ಶೇ.೩೪) ಜಮಾಬಂದಿ ಸಭೆಯಲ್ಲಿ ಭಾಗವಹಿಸಿದ್ದಾರೆ. ೬ ಜನ(ಶೇ.೧೧) ಜಮಾಬಂದಿ ಗ್ರಾಮಸಭೆಯಲ್ಲಿ ಕಡತಗಳ ಪರಿಶೀಲನೆ ನಡೆಸಿದ್ದಾರೆ.

**ಚೋರನೂರು ಗ್ರಾಮಪಂಚಾಯಿತಿಯ ಸಾಮಾಜಿಕ ಆಯಾಮಗಳು**

| ಸಾಮಾಜಿಕ ವರ್ಗ | ಒಟ್ಟು ಸಂದರ್ಶಕರು | ಜಮಾಬಂದಿ ಅರಿವು ಹೊಂದಿದವರು | ಜಮಾಬಂದಿ ಭಾಗವಹಿಸಿದವರು | ಕಡತ ಪರಿಶೀಲನೆ | ಪುರುಷ | ಮಹಿಳೆ |
|---|---|---|---|---|---|---|
| ಪರಿಶಿಷ್ಟ ಜಾತಿ | ೧೪ | ೭ | ೬ | ೫ | ೧ | ೧ |
| ಪರಿಶಿಷ್ಟ ಪಂಗಡ | ೧೯ | ೧೨ | ೫ | ೩ | ೫ | ೨ |
| ಹಿಂದುಳಿದ ವರ್ಗ | ೯ | ೭ | ೩ | ೨ | ೭ | ೦೦ |
| ಇತರೆ | ೪ | ೩ | ೧ | ೦೦ | ೨೪ | ೮ |
| ಅಲ್ಪಸಂಖ್ಯಾತ | ೪ | ೨ | ೧ | ೧ | ೦೦ | ೦೦ |
| ಒಟ್ಟು | ೫೦ | ೩೧ | ೧೬ | ೧೧ | ೩೭ | ೧೧ |

ಮೂಲ: ಕ್ಷೇತ್ರಕಾರ್ಯದ ಮಾಹಿತಿ

ಚೋರನೂರು ಗ್ರಾಮಪಂಚಾಯಿತಿಯಲ್ಲಿ ೧೪ ಜನ ಪರಿಶಿಷ್ಟ ಜಾತಿಯವರನ್ನು ಸಂದರ್ಶಿಸಲಾಯಿತು. ಇವರಲ್ಲಿ ೭ ಜನರಿಗೆ ಸಾಮಾಜಿಕ ಜಮಾಬಂದಿ ಸಭೆಯ ಬಗ್ಗೆ ಅರಿವಿದೆ. ಅರಿವಿದ್ದ ೭ ಜನರಲ್ಲಿ ೬ ಜನರು ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿಸಿದ್ದಾರೆ. ಹಾಗೂ ೫ ಜನರು ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿಸಿದ್ದಾರೆ. ೫ ಜನರು ಕಡತ ಪರಿಶೀಲನೆ ಮಾಡಿದ್ದಾರೆ. ಒಬ್ಬ ಪುರುಷ ಒಬ್ಬ ಮಹಿಳೆಯು ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಫಲಿತವನ್ನು ಪಡೆದಿದ್ದಾರೆ.

**ಪರಿಶಿಷ್ಟ ಪಂಗಡ:** ಈ ಗ್ರಾಮದಲ್ಲಿ ೧೯ ಜನ ಪರಿಶಿಷ್ಟ ಪಂಗಡದವರನ್ನು ಸಂದರ್ಶಿಸಲಾಯಿತು ಅದರಲ್ಲಿ ೧೨ ಜನರು ಸಾಮಾಜಿಕ ಜಮಾಬಂದಿ ಅರಿವು ಹೊಂದಿದ್ದಾರೆ. ೫ ಜನರು ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ಭಾಗವಹಿಸಿದ್ದಾರೆ. ಅವರಲ್ಲಿ ೩ ಜನರು ಜಮಾಬಂದಿ ಸಭೆಯಲ್ಲಿ ಕಡತ ಪರಿಶೀಲನೆ ಮಾಡಿದ್ದಾರೆ. ೫ ಜನ ಪರಿಶಿಷ್ಟ ಪಂಗಡದವರಲ್ಲಿ ೨ ಮಂದಿ ಮಹಿಳೆಯರು ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ಭಾಗವಹಿಸಿ ಯೋಜನೆಗಳ ಫಲಾನುಭವಿಗಳಾಗಿದ್ದಾರೆ.

**ಹಿಂದುಳಿದ ವರ್ಗ :** ಈ ಗ್ರಾಮದಲ್ಲಿ ೯ ಜನ ಹಿಂದುಳಿದ ವರ್ಗದವರನ್ನು ಸಂದರ್ಶಿಸಲಾಯಿತು. ಅವರಲ್ಲಿ ೭ ಜನರಿಗೆ ಸಾಮಾಜಿಕ ಜಮಾಬಂದಿ ಗ್ರಾಮಸಭೆ ಬಗ್ಗೆ ಅರಿವಿದೆ. ಅರಿವಿರುವ ಜನರಲ್ಲಿ ೩ ಜನರು ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿಸಿದ್ದಾರೆ. ೨ ಮಂದಿ ಕಡತ ಪರಿಶೀಲನೆ ಮಾಡಿದ್ದಾರೆ. ೭ ಜನ ಪುರುಷರು ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಸಕ್ರಿಯವಾಗಿ ಭಾಗವಹಿಸಿ ಯೋಜನೆಯ ಫಲನುಭವಿಗಳಾಗಿದ್ದಾರೆ.

**ಸಾಮಾನ್ಯವರ್ಗ ಅಥವಾ ಇತರೆ :** ಸಾಮಾನ್ಯವರ್ಗದ ೪ ಜನರನ್ನು ಸಂದರ್ಶಿಸಾಯಿತು. ಅವರಲ್ಲಿ ೩ ಜನರಿಗೆ ಸಾಮಾಜಿಕ ಜಮಾಬಂದಿ ಸಭೆಯ ಕುರಿತು ಅರಿವು ಹೊಂದಿದ್ದಾರೆ. ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ಒಬ್ಬರು ಮಾತ್ರ ಭಾಗವಹಿಸಿದ್ದಾರೆ. ಆದರೆ ೨೪ ಜನ ಪುರುಷರು ಮತ್ತು ೮ ಜನ ಮಹಿಳೆಯರು ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಫಲಾನುಭವವನ್ನು ಹೊಂದಿದ್ದಾರೆ.

**ಅಲ್ಪಸಂಖ್ಯಾತರು :** ಅಲ್ಪಸಂಖ್ಯಾತ ವರ್ಗದ ೪ ಜನರನ್ನು ಸಂದರ್ಶಿಸಲಾಯಿತು. ಅವರಲ್ಲಿ ೨ ಜನರು ಜಮಾಬಂದಿ ಸಭೆಯ ಅರಿವು ಹೊಂದಿದ್ದಾರೆ. ೧ ಮಾತ್ರ ಭಾಗವಹಿಸಿದ್ದಾರೆ. ಯಾರೊಬ್ಬರೂ ಸಾಮಾಜಿಕ ಜಮಾಬಂದಿ ಸಭೆಯ ಫಲಾನುಭವವನ್ನು ಪಡೆದಿಲ್ಲ.

## ಗುಡೇಕೋಟೆ ಗ್ರಾಮಪಂಚಾಯಿತಿಯ ಸಾಮಾಜಿಕ ಆಯಾಮಗಳು

| ಸಾಮಾಜಿಕ ವರ್ಗ | ಒಟ್ಟು ಸಂದರ್ಶಕರು | ಜಮಾಬಂದಿ ಅರಿವು ಹೊಂದಿದವರು | ಜಮಾಬಂದಿ ಭಾಗವಹಿಸಿದವರು | ಕಡತ ಪರಿಶೀಲನೆ | ಪುರುಷ | ಮಹಿಳೆ |
|---|---|---|---|---|---|---|
| ಪರಿಶಿಷ್ಟ ಜಾತಿ | ೧೨ | ೪ | ೪ | ೦೦ | ೨೧ | ೫ |
| ಪರಿಶಿಷ್ಟ ಪಂಗಡ | ೮ | ೦೨ | ೨ | ೨ | ೪೦ | ೨೪ |
| ಹಿಂದುಳಿದ ವರ್ಗ | ೧೭ | ೯ | ೫ | ೩ | ೧ | ೧ |
| ಇತರೆ | ೮ | ೩ | ೨ | ೨ | ೫೭ | ೧೫ |
| ಅಲ್ಪಸಂಖ್ಯಾತ | ೫ | ೩ | ೩ | ೨ | ೬ | ೪ |
| ಒಟ್ಟು | ೫೦ | ೨೧ | ೧೬ | ೦೯ | ೧೨೫ | ೧೪ |

**ಮೂಲ:** ಕ್ಷೇತ್ರಕಾರ್ಯದ ಮಾಹಿತಿ

ಗುಡೇಕೋಟೆ ಗ್ರಾಮಪಂಚಾಯಿತಿಯಲ್ಲಿ ೧೨ ಜನ ಪರಿಶಿಷ್ಟ ಜಾತಿಯವರನ್ನು ಸಂದರ್ಶಿಸಲಾಯಿತು. ಅವರಲ್ಲಿ ೪ ಜನರಿಗೆ ಸಾಮಾಜಿಕ ಜಮಾಬಂದಿ ಸಭೆಯ ಕುರಿತು ಮಾಹಿತಿ ಇದೆ. ೪ ಜನರು ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಕಡತ ಪರಿಶೀಲನೆ ಮಾಡಿರುವುದಿಲ್ಲ. ೨೧ ಜನ ಪುರುಷರು, ೫ ಮಹಿಳೆಯರು ಜಮಾಬಂದಿ ಸಭೆಯ ಯೋಜನೆಯ ಫಲವನ್ನು ಉಪಯೋಗಿಸಿಕೊಂಡಿದ್ದಾರೆ.

**ಪರಿಶಿಷ್ಟ ಪಂಗಡ:** ಪರಿಶಿಷ್ಟ ಪಂಗಡದ ೮ ಜನರನ್ನು ಸಂದರ್ಶಿಸಲಾಯಿತು. ಅವರಲ್ಲಿ ೪ ಜನ ಸಾಮಾಜಿಕ ಜಮಾಬಂದಿ ಸಭೆಯ ಬಗ್ಗೆ ಮಾಹಿತಿ ಹೊಂದಿದ್ದಾರೆ. ೪ ಜನರು ಜಮಾಬಂದಿ ಸಭೆಯಲ್ಲಿ ಭಾಗವಹಿಸಿದ್ದಾರೆ. ೪೦ ಜನ ಪುರುಷರು ಮತ್ತು ೨೪ ಮಂದಿ ಮಹಿಳೆಯರು ಯೋಜನೆಯ ಫಲಾನುಭವವನ್ನು ಪಡೆದುಕೊಂಡಿದ್ದಾರೆ.

ಹಿಂದುಳಿದ ವರ್ಗದ ೧೭ ಮಂದಿಯನ್ನು ಸಂದರ್ಶಿಸಲಾಯಿತು. ಅವರಲ್ಲಿ ೯ ಜನರಿಗೆ ಸಾಮಾಜಿಕ ಜಮಾಬಂದಿ ಗ್ರಾಮಸಭೆ ಬಗ್ಗೆ ಅರಿವಿದೆ. ಅರಿವಿರುವ ೯ ಜನರಲ್ಲಿ ೫ ಜನರು ಜಮಾಬಂದಿ ಗ್ರಾಮಸಭೆಯಲ್ಲಿ ಭಾಗವಹಿಸಿದ್ದಾರೆ. ೩ ಜನರು ಜಮಾಬಂದಿ ಸಭೆಯ ವಿವರಗಳ ಕುರಿತು ಪ್ರಶ್ನಿಸಿದ್ದಾರೆ. ೧ ಪುರುಷ ೧ ಮಹಿಳೆಯು ಜಮಾಬಂದಿ ಸಭೆಯ ಸಫಲತೆಯನ್ನು ಪಡೆದಿದ್ದಾರೆ.

**ಸಾಮಾನ್ಯ ಅಥವಾ ಇತರೆ :** ಸಾಮಾನ್ಯ ವರ್ಗದ ೮ ಜನರನ್ನು ಸಂದರ್ಶಿಸಲಾಯಿತು. ಅವರಲ್ಲಿ ೩ ಜನರಿಗೆ ಸಾಮಾಜಿಕ ಜಮಾಬಂದಿಯ ಅರಿವಿದೆ. ೩ ಜನರಲ್ಲಿ ೨ ಜನರು ಜಮಾಬಂದಿ ಗ್ರಾಮಸಭೆಯಲ್ಲಿ ಭಾಗವಹಿಸಿದ್ದರು. ೨ ಜನರು ಕಡತ ಪರಿಶೀಲನೆ ಮಾಡಲು ತೊಡಗಿಸಿಕೊಂಡಿದ್ದರು. ಈ ಗ್ರಾಮದಲ್ಲಿ ೫೭ ಜನ ಪುರುಷರು ಮತ್ತು ೧೫ ಜನ ಮಹಿಳೆಯರು, ಸಾಮಾಜಿಕ ಜಮಾಬಂದಿ ಸಭೆಯ ಫಲಾನುಭವಿಗಳಾಗಿದ್ದಾರೆ.

**ಅಲ್ಪಸಂಖ್ಯಾತರು:** ಅಲ್ಪಸಂಖ್ಯಾತರ ೫ ಜನರನ್ನು ಸಂದರ್ಶಿಸಲಾಯಿತು. ಅವರಲ್ಲಿ ೩ ಜನರಿಗೆ ಸಾಮಾಜಿಕ ಜಮಾಬಂದಿಯ ಅರಿವಿದೆ. ೩ ಜನರು ಸಭೆಯಲ್ಲಿ ಭಾಗವಹಿಸಿದರು ೨ ಜನರು ದೂರು ಸಲ್ಲಿಸುವ ಕೆಲಸವನ್ನು ಮಾಡಿದರು. ೬ ಜನ ಪುರುಷರು ಮತ್ತು ೪ ಜನ ಮಹಿಳೆಯರು ಸಾಮಾಜಿಕ ಜಮಾಬಂದಿ ಸಭೆಯ ಫಲಾನುಭವವನ್ನು ಅನುಭವಿಸಿದ್ದಾರೆ.

ಈ ಗ್ರಾಮದಲ್ಲಿ ೫೦ ಜನರನ್ನು ಸಂದರ್ಶನಕ್ಕೆ ಒಳಪಡಿಸಲಾಯಿತು ಅದರಲ್ಲಿ ೨೧(ಶೇ.೪೨) ಜನರು ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಕುರಿತು ಮಾಹಿತಿ ಹೊಂದಿದ್ದರು. ಮತ್ತು ೧೬ ಜನರು(ಶೇ.೩೨) ಜಮಾಬಂದಿ ಗ್ರಾಮಸಭೆಯಲ್ಲಿ ಭಾಗವಹಿಸಿದ್ದಾರೆ. ೯(ಶೇ.೧೮)ಜನರು ಜಮಾಬಂದಿ ಸಭೆಯಲ್ಲಿ ದೂರು ಸಲ್ಲಿಸುವ ಮತ್ತು ಪ್ರಶ್ನೆ ಕೇಳುವಂತಹ ಕೆಲಸಗಳಲ್ಲಿ ತೊಡಗಿಸಿಕೊಂಡಿರುವುದನ್ನು ಗಮನಿಸಲಾಗಿದೆ. ಈ ಗ್ರಾಮದಲ್ಲಿ ೧೭೪ ಜನರ ಸಾಮಾಜಿಕ ಜಮಾಬಂದಿ ಸಭೆಯ ಫಲವನ್ನು ಪಡೆದಿರುವುದಾಗಿ ತಿಳಿದುಬಂದಿದೆ.

**ಮಲಪನಗುಡಿ ಗ್ರಾಮಪಂಚಾಯಿತಿಯ ಸಾಮಾಜಿಕ ಆಯಾಮಗಳು**

| ಸಾಮಾಜಿಕ ವರ್ಗ | ಒಟ್ಟು ಸಂದರ್ಶಕರು | ಜಮಾಬಂದಿ ಅರಿವು ಹೊಂದಿದವರು | ಜಮಾಬಂದಿ ಭಾಗವಹಿಸಿದವರು | ಕಡತ ಪರಿಶೀಲನೆ | ಪುರುಷ | ಮಹಿಳೆ |
|---|---|---|---|---|---|---|
| ಪರಿಶಿಷ್ಟ ಜಾತಿ | ೧೬ | ೬ | ೨ | ೦೦ | ೨೧ | ೧೨ |
| ಪರಿಶಿಷ್ಟ ಪಂಗಡ | ೯ | ೨ | ೨ | ೦೦ | ೧೩ | ೭ |
| ಹಿಂದುಳಿದ ವರ್ಗ | ೧೧ | ೫ | ೪ | ೨ | ೪ | ೨ |
| ಇತರೆ | ೧೧ | ೪ | ೩ | ೨ | ೧೬ | ೧೦ |
| ಅಲ್ಪಸಂಖ್ಯಾತ | ೩ | ೨ | ೧ | ೧ | ೧ | ೧ |
| ಒಟ್ಟು | ೫೦ | ೧೯ | ೧೨ | ೫ | ೫೫ | ೩೨ |

ಮೂಲ: ಕ್ಷೇತ್ರಕಾರ್ಯದ ಮಾಹಿತಿ

೧೬ ಮಂದಿ ಪರಿಶಿಷ್ಟ ಜಾತಿಯವರನ್ನು ಸಂದರ್ಶಿಸಲಾಯಿತು. ಅವರಲ್ಲಿ ೬ ಜನರು ಸಾಮಾಜಿಕ ಜಮಾಬಂದಿ ಗ್ರಾಮಸಭೆ ಅರಿವನ್ನು ಹೊಂದಿದ್ದಾರೆ. ಅವರಲ್ಲಿ ೨ ಜನರು ಮಾತ್ರ ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿಸಿದ್ದಾರೆ. ಮಲಪನಗುಡಿ ಗ್ರಾಮದ ಜಮಾಬಂದಿ ಸಭೆಗಳಲ್ಲಿ ಕಡತ ಪರಿಶೀಲನೆ ಮಾಡಿಲ್ಲ. ೨೧ ಜನ ಪುರುಷರು ಮತ್ತು ೧೨ ಜನ ಮಹಿಳೆಯರು ಸಾಮಾಜಿಕ ಜಮಾಬಂದಿ ಫಲಿತವನ್ನು ಪಡೆದಿದ್ದಾರೆ.

ಪರಿಶಿಷ್ಟ ಪಂಗಡದ ೯ ಜನರನ್ನು ಸಂದರ್ಶಿಸಲಾಯಿತು. ಇವರಲ್ಲಿ ೨ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಅರಿವು ಹೊಂದಿದ್ದಾರೆ. ೨ ಜನರು ಜಮಾಬಂದಿ ಸಭೆಯಲ್ಲಿ ಭಾಗವಹಿಸಿದ್ದಾರೆ. ಪರಿಶಿಷ್ಟ ಪಂಗಡದ ಯಾರೊಬ್ಬರೂ ಈ ಜಮಾಬಂದಿ ಸಭೆಯಲ್ಲಿ ಕಡತ ಪರಿಶೀಲನೆ ಮಾಡದೇ ಇರುವುದು ಕಂಡುಬಂದಿದೆ. ೧೩ ಜನ ಪುರುಷರು ಮತ್ತು ೭ ಮಹಿಳೆಯರು ಗ್ರಾಮದ ಸಾಮಾಜಿಕ ಜಮಾಬಂದಿ ಫಲಿತವನ್ನು ಹೊಂದಿದ್ದಾರೆ.

ಹಿಂದುಳಿದ ವರ್ಗದವರ ೧೧ ಜನರನ್ನು ಸಂದರ್ಶಿಸಲಾಯಿತು. ಇವರಲ್ಲಿ ೫ ಜನರಲ್ಲಿ ಸಾಮಾಜಿಕ ಜಮಾಬಂದಿ ಅರಿವು ಹೊಂದಿದ್ದಾರೆ. ೪ ಜನರು ಜಮಾಬಂದಿ ಸಭೆಯಲ್ಲಿ ಭಾಗವಹಿಸಿದ್ದಾರೆ. ಇವರಲ್ಲಿ ೨ ಜನ ಕಡತ ಪರಿಶೀಲನೆ ಮಾಡಿದ್ದಾರೆ. ೪ ಜನ ಪುರುಷರು ಮತ್ತು ೨ ಮಂದಿ ಮಹಿಳೆಯರು ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ಸಕ್ರಿಯವಾಗಿ ಭಾಗವಹಿಸಿ ಜಮಾಬಂದಿಯ ಫಲಿತವನ್ನು ಪಡೆದಿದ್ದಾರೆ. ಕೇವಲ ೬ ಜನರು ಫಲಿತವನ್ನು ಪಡೆದಿದ್ದಾರೆ.

**ಸಾಮಾನ್ಯ ಮತ್ತು ಇತರೆ ವರ್ಗ:** ಸಾಮಾನ್ಯವರ್ಗದ ೧೧ ಜನರನ್ನು ಸಂದರ್ಶಿಸಲಾಯಿತು. ಇವರಲ್ಲಿ ೪ ಜನರಿಗೆ ಸಾಮಾಜಿಕ ಜಮಾಬಂದಿ ಸಭೆಯ ಅರಿವು ಇರುವುದು ಕಂಡುಬಂದಿದೆ. ೪ ಜನರಲ್ಲಿ ೩ ಜನರು ಜಮಾಬಂದಿ ಗ್ರಾಮಸಭೆಯಲ್ಲಿ ಭಾಗವಹಿಸಿದ್ದಾರೆ. ೨ ಜನರು ಕಡತ ಪರಿಶೀಲನೆ ಮಾಡಿದಾಗಿ ಹೇಳಿದ್ದಾರೆ. ಹಾಗೆಯೇ ೧೬ ಜನ ಪುರುಷರು ಮತ್ತು ೧೦ ಜನ ಮಹಿಳೆಯರು ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ಭಾಗವಹಿಸಿ ಅವರಿಗೆ ಬರಬೇಕಾದ ಅಭಿವೃದ್ಧಿ ಯೋಜನೆಯ ಫಲಿತಗಳನ್ನು ಪಡೆದಿದ್ದಾರೆ.

**ಅಲ್ಪಸಂಖ್ಯಾತರು:** ೩ ಜನ ಅಲ್ಪಸಂಖ್ಯಾತರಲ್ಲಿ ೨ ಜನರಿಗೆ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಅರಿವು ಇದೆ. ೨ ಜನರಲ್ಲಿ ಒಬ್ಬರು ಮಾತ್ರ ಜಮಾಬಂದಿ ಸಭೆಯಲ್ಲಿ ಭಾಗವಹಿಸಿದ್ದಾರೆ. ಒಬ್ಬ ಪುರುಷ ಮತ್ತು ಒಬ್ಬ ಮಹಿಳೆ ಮಾತ್ರ ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ಭಾಗವಹಿಸಿ ಯೋಜನೆಯ ಫಲಾನುಭವಿಗಳಾಗಿರುವುದು ಕಂಡುಬಂದಿದೆ.

ಮಲಪನಗುಡಿ ಗ್ರಾಮಪಂಚಾಯಿತಿಯಲ್ಲಿ ಒಟ್ಟು ೫೦ ಜನರನ್ನು ಸಂದರ್ಶಿಸಲಾಯಿತು. ಇವರಲ್ಲಿ ೧೯ ಜನರು ಸಾಮಾಜಿಕ ಜಮಾಬಂದಿಯ ಅರಿವು ಹೊಂದಿದ್ದಾರೆ. ೧೨ ಜನರು

ಜಮಾಬಂದಿ ಸಭೆಯಲ್ಲಿ ಭಾಗವಹಿಸಿದ್ದಾರೆ. ಒಟ್ಟಾರೆ ೮೫ ಜನರು ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿಸಿ ಅಭಿವೃದ್ಧಿ ಯೋಜನೆಗಳ ಫಲಾನುಭವಿಗಳಾಗಿದ್ದಾರೆ.

**ಅಪ್ಪಯ್ಯನಹಳ್ಳಿ ಗ್ರಾಮಪಂಚಾಯಿತಿಯ ಸಾಮಾಜಿಕ ಆಯಾಮಗಳು**

| ಸಾಮಾಜಿಕ ವರ್ಗ | ಒಟ್ಟು ಸಂದರ್ಶಕರು | ಜಮಾಬಂದಿ ಅರಿವು ಹೊಂದಿದವರು | ಜಮಾಬಂದಿ ಭಾಗವಹಿಸಿದವರು | ಕಡತ ಪರಿಶೀಲನೆ | ಪುರುಷ | ಮಹಿಳೆ |
|---|---|---|---|---|---|---|
| ಪರಿಶಿಷ್ಟ ಜಾತಿ | ೧೩ | ೧೦ | ೩ | ೧ | ೧೧ | ೭ |
| ಪರಿಶಿಷ್ಟ ಪಂಗಡ | ೧೭ | ೭ | ೨ | ೨ | ೫ | ೩ |
| ಹಿಂದುಳಿದ ವರ್ಗ | ೯ | ೭ | ೪ | ೨ | ೮ | ೬ |
| ಇತರೆ | ೭ | ೫ | ೨ | ೧ | ೨ | ೦೦ |
| ಅಲ್ಪಸಂಖ್ಯಾತ | ೪ | ೦೦ | ೦೦ | ೦೦ | ೦೦ | ೦೦ |
| ಒಟ್ಟು | ೫೦ | ೨೯ | ೧೧ | ೬ | ೨೬ | ೧೬ |

**ಮೂಲ: ಕ್ಷೇತ್ರಕಾರ್ಯದ ಮಾಹಿತಿ**

ಅಪ್ಪಯ್ಯನಹಳ್ಳಿ ಗ್ರಾಮಪಂಚಾಯಿತಿಯಲ್ಲಿ ಪರಿಶಿಷ್ಟ ಜಾತಿಯವರ ೧೩ ಜನರನ್ನು ಸಂದರ್ಶಿಸಲಾಯಿತು. ಅವರಲ್ಲಿ ಸಾಮಾಜಿಕ ಜಮಾಬಂದಿ ಸಭೆಯ ಕುರಿತು ೧೦ ಜನರು ಮಾಹಿತಿಯನ್ನು ಹೊಂದಿದ್ದಾರೆ. ಅರಿವಿರುವ ೧೦ ಜನರಲ್ಲಿ ೩ ಜನರು ಜಮಾಬಂಧಿ ಸಭೆಯಲ್ಲಿ ಭಾಗವಹಿಸಿದ್ದಾರೆ. ಒಬ್ಬರು ಕಡತ ಪರಿಶೀಲನೆ ಮಾಡಿ ದೂರು ಸಲ್ಲಿಸಲು ಮುಂದಾಗಿದ್ದಾರೆ. ೧೧ ಪುರುಷರು ಹಾಗೂ ೭ ಜನ ಮಹಿಳೆಯರು ಒಟ್ಟು ೧೮ ಜನರು ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿಸಿ ನರೇಗಾ ಕೂಲಿ ಕೆಲಸವನ್ನು ಪಡೆದಿದ್ದಾರೆ. ಪುರುಷರೇ ಹೆಚ್ಚು ಭಾಗವಹಿಸಿ ಯೋಜನೆಯ ಫಲಿತವನ್ನು ಪಡೆದಿದ್ದಾರೆ.

ಪರಿಶಿಷ್ಟ ಪಂಗಡದ ೧೭ ಜನರನ್ನು ಸಂದರ್ಶಿಸಲಾಯಿತು. ಅವರಲ್ಲಿ ೭ ಜನರಿಗೆ ಮಾತ್ರ ಸಾಮಾಜಿಕ ಜಮಾಬಂದಿ ಸಭೆಯ ಅರಿವಿದೆ. ಉಳಿದ ಜನರಿಗೆ ಸಾಮಾಜಿಕ ಅರಿವಿಲ್ಲ. ಅರಿವಿರುವ ೧೭ ಜನರಲ್ಲಿ ೭ ಜನರು ಮಾತ್ರ ಜಮಾಬಂದಿ ಸಭೆಯಲ್ಲಿ ಭಾಗವಹಿಸಿದ್ದಾರೆ. ೨ ಜನರು ಕಡತ ಪರಿಶೀಲನೆ ಮಾಡಿದ್ದಾರೆ ಹಾಗೂ ೫ ಜನ ಪುರುಷರು ಮತ್ತು ೩ ಜನ ಮಹಿಳೆಯರು ಸಾಮಾಜಿಕ ಜಮಾಬಂದಿ ಗ್ರಾಮದ ಸಭೆಯಲ್ಲಿ ಸಕ್ರಿಯವಾಗಿ ಭಾಗವಹಿಸಿ ಫಲಾನುಭವಿಗಳಾಗಿದ್ದಾರೆ.

ಹಿಂದುಳಿದ ವರ್ಗದ ೯ ಜನರನ್ನು ಸಂದರ್ಶಿಸಲಾಯಿತು. ಅವರಲ್ಲಿ ೭ ಜನರಿಗೆ ಸಾಮಾಜಿಕ ಜಮಾಬಂದಿ ಸಭೆಯ ಕುರಿತು ಅರಿವು ಹೊಂದಿದ್ದಾರೆ. ಅವರಲ್ಲಿ ೪ ಜನರು ಜಮಾಬಂದಿ ಸಭೆಯಲ್ಲಿ ಭಾಗವಹಿಸಿದ್ದಾರೆ. ಅವರಲ್ಲಿ ೨ ಜನರು ಜಮಾಬಂದಿ ಸಭೆಯಲ್ಲಿ ಕಡತ ಪರಿಶೀಲನೆ ಮಾಡಿದ್ದಾರೆ. ೮ ಜನ ಪುರುಷರು ಮತ್ತು ೬ ಜನ ಮಹಿಳೆಯರು ಸಾಮಾಜಿಕ ಜಮಾಬಂದಿಯಲ್ಲಿ ನರೇಗಾ ಕೂಲಿ ಕೆಲಸಕ್ಕೆ ನೀಡಬೇಕಾದ ವೇತನವನ್ನು ಪಡೆದಿದ್ದಾರೆ.

**ಸಾಮಾನ್ಯ ಅಥವಾ ಇತರೆ:** ಸಾಮಾನ್ಯವರ್ಗದ ೭ ಜನರನ್ನು ಸಂದರ್ಶಿಸಲಾಯಿತು. ಅವರಲ್ಲಿ ೫ ಜನರಿಗೆ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಕುರಿತು ಅರಿವಿದೆ. ಅರಿವಿರುವ ೫ ಜನರಲ್ಲಿ ೨ ಮಂದಿ ಜಮಾಬಂದಿ ಸಭೆಯಲ್ಲಿ ಭಾಗವಹಿಸಿದ್ದಾರೆ. ಒಬ್ಬರು ಕಡತಗಳ ಪರಿಶೀಲನೆ ಮಾಡಿದ್ದಾರೆ. ೨ ಮಂದಿ ಪುರುಷರು ಸಾಮಾಜಿಕ ಜಮಾಬಂದಿಯ ಮೂಲಕ ಯೋಜನೆಯ ಫಲಾನುಭವಿ ಯಾಗಿದ್ದಾರೆ. ಮಹಿಳೆಯರು ಭಾಗವಹಿಸಿರುವುದು ಕಂಡುಬಂದಿರುವುದಿಲ್ಲ.

**ಅಲ್ಪಸಂಖ್ಯಾತರು :** ಅಲ್ಪಸಂಖ್ಯಾತ ೪ ಜನರನ್ನು ಸಂದರ್ಶಿಸಲಾಯಿತು. ಯಾರೊಬ್ಬರಿಗೂ ಸಾಮಾಜಿಕ ಜಮಾಬಂಧಿ ಸಭೆಯ ಅರಿವಿಲ್ಲ. ಅದೇ ರೀತಿ ಯಾರೊಬ್ಬರೂ ಜಮಾಬಂದಿ ಸಭೆಯಲ್ಲಿ ಭಾಗವಹಿಸಿಲ್ಲ. ಯಾರೂ ಕೂಡ ಸಾಮಾಜಿಕ ಜಮಾಬಂಧಿ ಸಭೆಯಿಂದ ಯೋಜನೆಯ ಫಲಿತವನ್ನು ಪಡೆದಿಲ್ಲ.

ಈ ಗ್ರಾಮದಲ್ಲಿ ೫೦ ಜನರನ್ನು ಸಂದರ್ಶಿಸಲಾಯಿತು. ಅವರಲ್ಲಿ ೨೯ ಜನರಿಗೆ(ಶೇ.೫೮) ರಷ್ಟು ಸಾಮಾಜಿಕ ಜಮಾಬಂದಿ ಸಭೆಯ ಬಗ್ಗೆ ಮಾಹಿತಿ ಇದೆ. ಅವರಲ್ಲಿ ೧೧ ಜನರು(ಶೇ.೨೪) ಜಮಾಬಂದಿ ಸಭೆಯಲ್ಲಿ ಭಾಗವಹಿಸಿದ್ದಾರೆ. ೬ ಜನರು(ಶೇ.೧೨) ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ಕಡತ ಪರಿಶೀಲನೆ ನಡೆಸಿದ್ದಾರೆ. ಒಟ್ಟು ೪೬ ಜನರು ಸಾಮಾಜಿಕ ಜಮಾಬಂದಿ ಸಭೆಯಿಂದ ಯೋಜನೆಯ ಫಲಿತವನ್ನು ಪಡೆದಿದ್ದಾರೆ.

ಹೊಸಪೇಟೆ ತಾಲ್ಲೂಕಿನ ಮಲಪನಗುಡಿ ಗ್ರಾಮಪಂಚಾಯಿತಿಯಲ್ಲಿ ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಆಶ್ರಯ ಯೋಜನೆ, ಪಂಚಾಯಿತಿಯಲ್ಲಿ ಜಾರಿಯಲ್ಲಿರುವ ಎಲ್ಲಾ ಯೋಜನೆಗಳ ಖರ್ಚುವೆಚ್ಚಗಳ ಬಗ್ಗೆ ಕಾರ್ಯದರ್ಶಿಗಳು ಸವಿವರವಾಗಿ ಓದಿ ಜನತೆಗೆ ತಿಳಿಸಿದ್ದಾರೆ. ಈ ಗ್ರಾಮ ಪಂಚಾಯಿತಿಯಲ್ಲಿ ಸಾಮಾಜಿಕ ಜಮಾಬಂದಿ ಉತ್ತಮ ರೀತಿಯಲ್ಲಿ ಅನುಷ್ಠಾನಗೊಳ್ಳುತ್ತಿದೆ.

ಪಾಪಿನಾಯಕನಹಳ್ಳಿಯಲ್ಲಿ ಸಾಮಾಜಿಕ ಜಮಾಬಂದಿ ಸಭೆಯನ್ನು ಆಯೋಜಿಸಲಾಗಿದೆ. ಆದರೆ ಗ್ರಾಮಪಂಚಾಯಿತಿಯಲ್ಲಿ ನರೇಗಾ ಕಾಮಗಾರಿಗಳ ಕುರಿತು ಮತ್ತು ಆಶ್ರಯ ಮನೆಯ ಫಲಾನುಭವಿಗಳ ಆಯ್ಕೆಯ ಬಗ್ಗೆ ಹೆಚ್ಚು ಹೆಚ್ಚು ಚರ್ಚಿಸಲಾಗಿದೆ. ಈ ಗ್ರಾಮಪಂಚಾಯಿತಿಯಲ್ಲಿ ಸಾಮಾಜಿಕ ಜಮಾಬಂದಿ ಸಭೆಯನ್ನು ಸಂಪೂರ್ಣವಾಗಿ ನಿರ್ವಹಿಸಲು ಅವಕಾಶವನ್ನು ಕೊಡದೆ,

ಕೆಲವು ಜನರು ದಾಂದಲೆ ಮಾಡುವುದರ ಮೂಲಕ ಗ್ರಾಮಸಭೆಯನ್ನು ಮುಕ್ತಯಗೊಳಿಸುವುದು ಕಂಡುಬಂದಿದೆ. ಈ ಗ್ರಾಮಪಂಚಾಯಿತಿಯ ಹೆಚ್ಚು ಫಲಾನುಭವಿಗಳ ಆಯ್ಕೆಯ ಮುಖ್ಯ ಗುರಿಯಾಗಿರುವುದು ಕಂಡುಬರುತ್ತದೆ.

**ಸಂಡೂರು ತಾಲ್ಲೂಕು**

ಚೋರುನೂರು ಗ್ರಾಮಪಂಚಾಯಿತಿಯಲ್ಲಿ ೨೦೦೪-೫ರಲ್ಲಿ ಸಾಮಾಜಿಕ ಜಮಾಬಂದಿ ಸಭೆ ನಡೆಸಿದ ದಾಖಲೆಗಳು ಇವೆ. ೨೦೧೩-೧೪ ಮತ್ತು ೨೦೧೪-೧೫ನೇ ಸಾಲಿನಲ್ಲಿ ಸಾಮಾಜಿಕ ಜಮಾಬಂದಿ ಗ್ರಾಮಸಭೆ ನಡೆಸಲಾಗಿದೆ. ಈ ಪಂಚಾಯಿತಿಯ ಗ್ರಾಮದ ವರ್ಷದ ಖರ್ಚುವೆಚ್ಚ ಗಳನ್ನು ಓದಿ ಹೇಳಲಾಯಿತು. ಈ ಗ್ರಾಮ ಸಭೆಯಲ್ಲಿ ನರೇಗಾ ಯೋಜನೆ ಫಲಾನುಭವಿಗಳನ್ನು ಆಯ್ಕೆ ಮಾಡಲಾಯಿತು. ಹೊಸ ಕಾಮಗಾರಿಗಳ ಅನುಮೋದನೆ ಕುರಿತು ಚರ್ಚಿಸಲಾಯಿತು. ನರೇಗಾ ಕೂಲಿ ಕೆಲಸಕ್ಕೆ ಜನರು ಅರ್ಜಿಯನ್ನು ಸಲ್ಲಿಸಲಾಯಿತು. ಸಭೆಯಲ್ಲಿ ಜಮಾಬಂದಿ ಅಧಿಕಾರಿಗಳು ಅರ್ಜಿದಾರರಿಗೆ ಕೆಲಸ ನೀಡಲು ಪಂಚಾಯಿತಿಯ ಅಧಿಕಾರಿಗಳಿಗೆ ಸೂಚಿಸಿದರು. ಹಿಂದುಳಿದ ತಾಲ್ಲೂಕು ಆಗಿರುವ ಸಂಡೂರು ತಾಲ್ಲೂಕಿನಲ್ಲಿ ಸಾಮಾಜಿಕ ಜಮಾಬಂದಿ ಗ್ರಾಮ ಉತ್ತಮವಾಗಿ ನಡೆದು ಗ್ರಾಮದ ಜನತೆಗೆ ಉಪಯುಕ್ತವಾಗಿರುವುದು ಕಂಡುಬಂದಿದೆ.

**ಸೊವೇನಹಳ್ಳಿ ಗ್ರಾಮಪಂಚಾಯಿತಿ:** ಈ ಗ್ರಾಮದ ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ನರೇಗಾ ಯೋಜನೆಯಲ್ಲಿ ಕೂಲಿ ಕಾರ್ಮಿಕರಿಗೆ ಕಾಮಗಾರಿಗಳ ಕುರಿತು ತಿಳಿಸಿ ಕೆಲಸಕ್ಕಾಗಿ ಅರ್ಜಿ ನಮೂನೆಗಳನ್ನು ನೀಡಬೇಕೆಂದು ಸಭೆಯಲ್ಲಿ ತಿಳಿಸಲಾಯಿತು. ಕಳೆದ ಗ್ರಾಮಸಭೆಯಲ್ಲಿ ಪ್ರಸ್ತಾಪಿಸಿದ ಕೆಲವು ವಿಷಯಗಳಿಗೆ ಉತ್ತರವನ್ನು ನೀಡಲಾಯಿತು. ದೂರುಗಳಿಗೆ ಸಂಬಂಧಿಸಿದ ಮತ್ತು ಕಾಮಗಾರಿಗಳ ಪ್ರಗತಿಯನ್ನು ಕೂಡ ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಓದಿ ಹೇಳಲಾಯಿತು.

**ಚೋರನೂರು ಗ್ರಾಮಪಂಚಾಯಿತಿ:** ಈ ಪಂಚಾಯಿತಿಯಲ್ಲಿ ನರೇಗಾರ ಕಾಮಗಾರಿಗಳ ಕುರಿತು ಸಭೆಯಲ್ಲಿ ಓದಿ ಕಾಮಗಾರಿಗಳಿಗೆ ಅನುಮತಿಯನ್ನು ಪಡೆಯಲಾಯಿತು. ಈ ಗ್ರಾಮಸಭೆಯಲ್ಲಿ ಅಧ್ಯಕ್ಷರು ಗೈರು ಹಾಜರಿದ್ದರು. ಹಾಗಾಗಿ ಗ್ರಾಮಪಂಚಾಯಿತಿಯ ಜಮಾಬಂದಿ ಅಧಿಕಾರಿಗಳೇ ಅಧ್ಯಕ್ಷತೆ ವಹಿಸಿದ್ದರು.

**ಅಪ್ಪಯನಹಳ್ಳಿ ಗ್ರಾಮಪಂಚಾಯಿತಿ:** ಈ ಪಂಚಾಯಿತಿಯಲ್ಲಿ ಸಾಮಾಜಿಕ ಜಮಾಬಂದಿ ಸಭೆ ರೈತ ಸಿರಿ, ನರೇಗಾ, ಅಂಬೇಡ್ಕರ್ ಆಶ್ರಯ ಯೋಜನೆಗಳ ಅನುದಾನದ ಕುರಿತು ಚರ್ಚಿಸಿ, ಕಾಮಗಾರಿ ಅನುಮೋದನೆ ಪಡೆಯಲಾಯಿತು ಹಾಗೂ ಯೋಜನೆಗಳ ಫಲಾನುಭವಿಗಳನ್ನು ಆಯ್ಕೆ ಮಾಡಲಾಯಿತು.

**ಸಂಗನಕಲ್ಲು ಗ್ರಾಮಪಂಚಾಯಿತಿ:** ಸಾಮಾಜಿಕ ಜಮಾಬಂದಿ ಸಭೆಯಲ್ಲಿ ನರೇಗಾ ಯೋಜನೆ ಕಾಮಗಾರಿಗಳ ಕಡತಗಳನ್ನು ಪರಿಶೀಲಿಸಲಾಯಿತು. ಖರೀದಿಸಿದ ಸಾಮಗ್ರಿಗಳ ಓಚರ್‌ಗಳನ್ನು ಪರಿಶೀಲಿಸಿ ಕಾಮಗಾರಿಗಳ ಕುರಿತು ದೂರು ಸಲ್ಲಿಸಿದರು.

**ಮೋಕ ಮತ್ತು ಗುಡೇಕೋಟೆ ಗ್ರಾಮಪಂಚಾಯಿತಿ:** ಸಾಮಾಜಿಕ ಜಮಾಬಂದಿ ಸಭೆಯ ಕಡತಗಳು ಲಭ್ಯವಾದ ಕಾರಣ ಈ ಗ್ರಾಮದಲ್ಲಿ ಜಮಾಬಂದಿ ಫಲಾನುಭವಿಗಳ ಅಧ್ಯಯನಕ್ಕೆ ಒಳಪಡಿಸಲಾಯಿತು.

ಹೀಗೆ ಸಾಮಾಜಿಕ ಗ್ರಾಮಸಭೆಯೂ ಬಳ್ಳಾರಿ, ಹೊಸಪೇಟೆ ತಾಲ್ಲೂಕಿನಲ್ಲಿ ಸಾಧಾರಣವಾಗಿ ಜಾರಿಗೆ ಬಂದಿದ್ದು, ಜನತೆಗೆ ಬೇಕಾದ ಮಾಹಿತಿಗಳನ್ನು ಈ ಜಮಾಬಂದಿ ಸಭೆಯಿಂದ ಪಡೆದು ಗ್ರಾಮಸಭೆಗಳಲ್ಲಿ ಭಾಗವಹಿಸುವ ಆಸಕ್ತಿ ತೋರುತ್ತಿದ್ದಾರೆ. ಕೂಡ್ಲಿಗಿ ಮತ್ತು ಸಂಡೂರು ತಾಲ್ಲೂಕು ಸಾಮಾಜಿಕ ಜಮಾಬಂದಿ ಗ್ರಾಮಸಭೆಗಳು ಅನುಷ್ಠಾನದಲ್ಲಿದ್ದು, ಉತ್ತಮ ಜಾರಿಯಾಗುತ್ತಿರುವುದು ಕಂಡುಬಂದಿದೆ. ಈ ಜಮಾಬಂದಿ ಗ್ರಾಮಸಭೆಗಳಲ್ಲಿ ಪಂಚಾಯಿತಿಯಲ್ಲಿ ಜಾರಿಯಿರುವ ಎಲ್ಲ ಯೋಜನೆಗಳ ಕುರಿತು ಚರ್ಚೆ ಮಾಡಲಾಗುತ್ತದೆ. ಆದ್ದರಿಂದ ಗ್ರಾಮಸ್ಥರು ಯೋಜನೆಗಳ ಫಲಾನುಭವವನ್ನು ವಿವಿಧ ಯೋಜನೆಗಳಲ್ಲಿ ಪಡೆಯುತ್ತಿದ್ದಾರೆ. ನರೇಗಾ ಕೂಲಿ ಕೆಲಸಕ್ಕೆ ಜನರು ಅರ್ಜಿ ಸಲ್ಲಿಸಿ ಕೆಲಸವನ್ನು ಮತ್ತು ಬಾಕಿ ವೇತನವಗಳ ಜಮಾಬಂದಿ ಸಭೆಯನ್ನು ಚರ್ಚಿಸಿ ಅನುಕೂಲತೆಯನ್ನು ಪಡೆಯುತ್ತಿದ್ದಾರೆ.

## ಅಧ್ಯಾಯ ಐದು

# ಸಾಮಾಜಿಕ ಜಮಾಬಂದಿ ಸಭೆಯಲ್ಲಿ ತೊಡಕುಗಳು

### ಪೀಠಿಕೆ

ಪಂಚಾಯಿತಿಗಳು ಯಾವುದಿದ್ದರೂ ಯೋಜನೆಯನ್ನು ಅನುಷ್ಠಾನಕ್ಕೆ ತರಲು ಸಾಕಷ್ಟು ಪೂರ್ವಸಿದ್ಧತೆಗಳು ಬೇಕಾಗುತ್ತದೆ. ಗ್ರಾಮಪಂಚಾಯಿತಿಗಳಿಗೆ ಕೇಂದ್ರ ಮತ್ತು ರಾಜ್ಯ ಸರ್ಕಾರಗಳು ಅಭಿವೃದ್ಧಿ ಯೋಜನೆಗಳನ್ನು ತಯಾರಿಸುತ್ತವೆ. ಆ ಯೋಜನೆಗಳನ್ನು ಅನುಷ್ಠಾನಗೊಳಿಸುವ ಕೆಲಸವನ್ನು ಗ್ರಾಮಪಂಚಾಯಿತಿಗಳಿಗೆ ನೀಡಲಾಗುತ್ತದೆ. ಈ ಗ್ರಾಮಪಂಚಾಯಿತಿಗಳು ಗ್ರಾಮೀಣ ಜನರಿಗೆ ಮೂಲಭೂತ ಸೌಕರ್ಯಗಳನ್ನು ಒದಗಿಸಬೇಕು. ಗ್ರಾಮೀಣ ಭಾಗದಲ್ಲಿ ಸಾಮಾಜಿಕವಾದ ಸಮಸ್ಯೆಗಳಿಗೆ ಪರಿಹಾರ ಮಾರ್ಗಗಳನ್ನು ನೀಡಬೇಕಾಗುತ್ತದೆ. ಗ್ರಾಮಪಂಚಾಯಿತಿಯು ಸ್ಥಳೀಯವಾಗಿ ಕೇಂದ್ರ ಸರ್ಕಾರದ ಕಾಯ್ದೆ-ಕಾನೂನುಗಳು ಮತ್ತು ರಾಜ್ಯ ಸರ್ಕಾರದ ಕಾಯ್ದೆ-ಕಾನೂನುಗಳಿಗೆ ಧಕ್ಕೆ ಬಾರದ ಹಾಗೆ ಸಾರ್ವಜನಿಕರಿಗೆ ಸೇವೆ ಸಲ್ಲಿಸಬೇಕಾಗಿರುತ್ತದೆ.

ಗ್ರಾಮಪಂಚಾಯಿತಿಗಳಲ್ಲಿ ಜಾರಿಯಲ್ಲಿರುವ ಯೋಜನೆಗಳನ್ನು ಲಭ್ಯತೆಯಲ್ಲಿರುವ ಸಿಬ್ಬಂದಿಯು ನಿರ್ವಹಿಸುತ್ತದೆ. ಗ್ರಾಮಪಂಚಾಯಿತಿಯ ಸಿಬ್ಬಂದಿಯು ಗ್ರಾಮದ ಮತದಾರರಲ್ಲಿ ಅರ್ಹತೆ ಹೊಂದಿರುವ ಅರ್ಹ ಅಭ್ಯರ್ಥಿಗಳನ್ನು ಗ್ರಾಮಸಭೆಯಲ್ಲಿ ಸಾರ್ವಜನಿಕವಾಗಿ ಗುರುತಿಸಬೇಕು. ಆದರೆ ಗ್ರಾಮಸಭೆಯಲ್ಲಿ ಅರ್ಹ ಫಲಾನುಭವಿಗಳನ್ನು ಗುರುತಿಸುವುದರ ಜೊತೆಗೆ ಯೋಜನೆಯನ್ನು ಅನುಷ್ಠಾನಗೊಳಿಸುವಲ್ಲಿನ ಸಮಸ್ಯೆಗಳನ್ನು ಕುರಿತು ಚರ್ಚಿಸಬೇಕು ಮತ್ತು ಗ್ರಾಮಸಭೆಯಲ್ಲಿ ಗ್ರಾಮದ ಸಮಸ್ಯೆಗಳ ಕುರಿತು ಚರ್ಚಿಸಬೇಕು. ಯಾವಯಾವ ಯೋಜನೆಗಳು ಎಷ್ಟರ ಮಟ್ಟಿಗೆ ಯಶಸ್ವಿಯಾಗಿವೆ. ಯೋಜನೆಗಳು ಯಶಸ್ವಿಯಾಗದೇ ಇದ್ದರೆ ಅದಕ್ಕೆ ಕಾರಣಗಳೇನು ಎಂಬುದಕ್ಕೆ ಗುರುತಿಸಿ ಅವುಗಳ ಪರಿಹಾರಕ್ಕೆ ಬೇಕಾದ ಕ್ರಮಗಳನ್ನು ಕೈಗೊಳ್ಳಬೇಕು. ಆದರೆ ಗ್ರಾಮಸಭೆಗಳಲ್ಲಿ ಅರ್ಹ ಫಲಾನುಭವಿಗಳನ್ನು ಆಯ್ಕೆ ಮಾಡುವ ಸಮಯದಲ್ಲಿ ಗೊಂದಲಗಳ ಸೃಷ್ಟಿ ಅಥವಾ ಉಂಟಾಗಿ ಗ್ರಾಮಸಭೆಗಳು ಮುಗಿಯುತ್ತವೆ. ಈ ಅಂಶಗಳು ಗ್ರಾಮಸಭೆಗಳ ಅಧ್ಯಯನದಿಂದ ತಿಳಿದುಬಂದಿದೆ.

ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಗ್ರಾಮಸಭೆಯಲ್ಲಿ ಚರ್ಚಿಸಲು ಸಾಧ್ಯವಾಗದ ಪಂಚಾಯಿತಿ ಆಡಳಿತ ನಿರ್ವಹಣೆ ಬಗ್ಗೆ ಚರ್ಚಿಸಲು ಅವಕಾಶ ಕಲ್ಪಿಸಲಾಗಿದೆ. ಗ್ರಾಮಪಂಚಾಯಿತಿ ಆರ್ಥಿಕ ಮತ್ತು ಯೋಜನೆಗಳ ಅನುಷ್ಠಾನಗಳ ಕುರಿತು ಪಂಚಾಯಿತಿ ಕಾಮಗಾರಿಗಳ ಬಗ್ಗೆ ದೂರು ಸಲ್ಲಿಸುವ ಮತ್ತು ಸಾರ್ವಜನಿಕರು ಪಂಚಾಯಿತಿ ಕಡತಗಳನ್ನು ಪರಿಶೀಲಿಸುವ ಅವಕಾಶ ದೊರೆತಿದೆ. ಆದರೂ ಸಾಮಾಜಿಕ ಜಮಾಬಂದಿ ಗ್ರಾಮಸಭೆಯು ಅನುಷ್ಠಾನಗೊಳಿಸುವ ಸಮಯದಲ್ಲಿ ಎದುರಾಗುವ ಸಮಸ್ಯೆಗಳನ್ನು ಕುರಿತು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

**ಸಾರ್ವಜನಿಕ ಜಮಾಬಂದಿ ಗ್ರಾಮಸಭೆ ಕುರಿತ ಪ್ರಚಾರದ ಸಮಸ್ಯೆಗಳು:** ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಕುರಿತು ಪಂಚಾಯಿತಿಯಿಂದ ಸಾರ್ವಜನಿಕವಾಗಿ ಪ್ರಚಾರ ಕೈಗೊಳ್ಳದಿರುವುದು. ಗ್ರಾಮಪಂಚಾಯಿತಿಗಳಲ್ಲಿ ಕಂಡುಬರುತ್ತವೆ. ಗ್ರಾಮಸಭೆಯ ಮಾದರಿಯಲ್ಲಿ ಪ್ರಚಾರ ಮಾಡುವುದನ್ನು ಗಮನಿಸಬಹುದು. ಕೆಲವು ಗ್ರಾಮಪಂಚಾಯಿತಿಗಳು ಸ್ಥಳೀಯ ದಿನಪತ್ರಿಕೆಗಳಲ್ಲಿ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಪ್ರಕಟಣೆಯನ್ನು ನೀಡುತ್ತಾರೆ. ಆ ಪ್ರಕಟಣೆಗಳು ಸಣ್ಣ ಒಂದು ಕಾಲಂನಲ್ಲಿ ಜನರಿಗೆ ಸರಿಯಾಗಿ ಕಾಣಿಸುವ ರೀತಿಯಲ್ಲಿ ಇರುವುದಿಲ್ಲ. ಕೆಲವು ಗ್ರಾಮಪಂಚಾಯಿತಿ ಗಳು ಪತ್ರಿಕೆಗಳಲ್ಲಿ ಪ್ರಕಟಣೆಯನ್ನು ನೀಡುವುದಿಲ್ಲ. ಸಾಮಾಜಿಕ ಜಮಾಬಂದಿಯ ಕುರಿತು ಗ್ರಾಮ ದಲ್ಲಿ ಡಂಗುರು ಹಾಕಿಸುವ ಪದ್ಧತಿಯು(ಜನರಲ್ಲಿ) ಗ್ರಾಮೀಣ ಭಾಗಗಳಲ್ಲಿ ಇಂದಿಗೂ ಇದೆ. ಹಾಗೆಯೇ ಗ್ರಾಮದಲ್ಲಿ ಡಂಗುರು ಸಾರಿಸುತ್ತಾರೆ. ಗ್ರಾಮಪಂಚಾಯಿತಿಯ ಗ್ರಾಮಗಳಲ್ಲಿ ಡಂಗುರು ಸಾರಿಸಿದರೆ ಸಭೆಯ ಕುರಿತು ಪ್ರಚಾರವು ಮುಟ್ಟುವುದಿಲ್ಲ. ಗ್ರಾಮದ ದಲಿತರ ಕೇರಿಗಳ ಒಳಗೆ ಹೋಗಿ ಡಂಗುರವನ್ನು ಸಾರುವುದಿಲ್ಲ. ಗ್ರಾಮದ ದಲಿತರ ಕೇರಿಯ ಮುಖ್ಯ ಬೀದಿಗಳಲ್ಲಿ ಮಾತ್ರ ಪ್ರಚಾರ ಮಾಡುವುದು ಗ್ರಾಮಗಳಲ್ಲಿ ಕಂಡುಬಂದಿದೆ.

ಸಾಮಾಜಿಕ ಜಮಾಬಂದಿ ಗ್ರಾಮಸಭೆಯಲ್ಲಿ ಚರ್ಚಿಸುವ ವಿಷಯಗಳ ಕುರಿತು ಗ್ರಾಮದ ಸಾರ್ವಜನಿಕರಿಗೆ ಕರಪತ್ರಗಳನ್ನು ಮುದ್ರಿಸಿ ಹಂಚಬೇಕು. ಗ್ರಾಮಪಂಚಾಯಿತಿ ಆಡಳಿತಾತ್ಮಕ ಮತ್ತು ಆರ್ಥಿಕ ಅಂಶಗಳ ಕುರಿತು ಕರಪತ್ರಗಳಲ್ಲಿ ಮುದ್ರಿಸಿ ಜನರಿಗೆ ನೀಡಬೇಕು. ಆದರೆ ಬಹುಪಾಲು ಗ್ರಾಮಪಂಚಾಯಿತಿಗಳಲ್ಲಿ ಕರಪತ್ರಗಳನ್ನು ಹಂಚಿಕೆ ಮಾಡಿ ಗ್ರಾಮಪಂಚಾಯಿತಿಯ ವಿವರಗಳನ್ನು ಪ್ರಕಟಿಸಿರುವುದು ಕಂಡುಬಂದಿರುವುದಿಲ್ಲ.

ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಕುರಿತು ಗೋಡೆಬರಹಗಳನ್ನು ಹೆಚ್ಚಾಗಿ ಬರೆಯಿಸದೇ ಇರುವುದನ್ನು ಗಮನಿಸಬಹುದು, ಗ್ರಾಮಸಭೆಯ ಯೋಜನೆಗಳಲ್ಲಿ ಪ್ರತಿ ಯೋಜನೆಗೆ ಸಂಬಂಧಿಸಿದಂತೆ ಪ್ರಚಾರಕ್ಕೆ ಶೇ.೨ರಷ್ಟು ಹಣ ವಿನಿಯೋಗಿಸಬಹುದಾಗಿದೆ. ಹಾಗೆಯೇ ಗ್ರಾಮಪಂಚಾಯಿತಿಯ

ಸಾಮಾಜಿಕ ಜಮಾಬಂದಿ ಸಭೆಗೆ ಶೇ.೨ರಷ್ಟು ಹಣವನ್ನು ವಿನಿಯೋಗಿಸುವ ಅವಕಾಶವಿದೆ. ಆದರೆ ಸಾಮಾಜಿಕ ಜಮಾಬಂದಿ ಗ್ರಾಮಸಭೆಗೆ ಸಂಬಂಧಿಸಿದಂತೆ ಪ್ರಕಟಣೆಗಳು ಗೋಡೆ ಬರಹಗಳು ಜನರಿಗೆ ಹೆಚ್ಚು ಮೂಡಿಸದೇ ಇರುವುದು ಕಂಡುಬಂದಿದೆ.

**ಸಾಮಾಜಿಕ ಜಮಾಬಂದಿ ಗ್ರಾಮಸಭೆ ನಡೆಸುವ ಸ್ಥಳ**

ಬಳ್ಳಾರಿ ಜಿಲ್ಲೆಯ ಹಲವು ಗ್ರಾಮಪಂಚಾಯಿತಿಗಳು ಗ್ರಾಮದ ಮಧ್ಯಭಾಗದಲ್ಲಿವೆ ಗ್ರಾಮಪಂಚಾಯಿತಿಯ ಕಛೇರಿಯ ಸ್ಥಳವು ಚಿಕ್ಕದಾಗಿದೆ. ಹಾಗಾಗಿ ಗ್ರಾಮದ ಶೇ.೨೦ರಷ್ಟು ಜನರು ಜಮಾಬಂದಿ ಸಭೆಯಲ್ಲಿ ಭಾಗವಹಿಸಲು ಸಾಧ್ಯವಾಗುವುದಿಲ್ಲ. ಮೋಕ, ಸಂಗನಕಲ್ಲು ಗ್ರಾಮಪಂಚಾಯಿತಿಗಳು ಪಾಪಿನಾಯಕನಹಳ್ಳಿ, ಮಲಪನಗುಡಿ ಗ್ರಾಮಪಂಚಾಯಿತಿಗಳು, ಚೋರನೂರು, ಸೋವೇನಹಳ್ಳಿ, ಗುಡೇಕೋಟೆ ಮತ್ತು ಅಪ್ಪಯ್ಯನಹಳ್ಳಿ ಗ್ರಾಮಪಂಚಾಯಿತಿಗಳಲ್ಲಿ ಗ್ರಾಮದ ಜನರು ಹೆಚ್ಚಾಗಿ ಸೇರಲು ಸಾಧ್ಯವಾಗುವುದಿಲ್ಲ. ಹಾಗಾಗಿ ಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಹೆಚ್ಚು ಹೆಚ್ಚು ಗ್ರಾಮದ ಜನರು ಒಳಗೊಂಡು ತಮ್ಮ ಸಮಸ್ಯೆಗಳನ್ನು ಚರ್ಚಿಸುವ ಅವಕಾಶಗಳು ಕಡಿಮೆ ಕಂಡುಬರುತ್ತಿವೆ.

ಗ್ರಾಮಪಂಚಾಯಿತಿ ಕಛೇರಿ ಅಲ್ಲದೆ ಬೇರೆ ಸ್ಥಳಗಳಲ್ಲಿ ಗ್ರಾಮಗಳು ನಿರ್ವಹಿಸುವಲ್ಲಿ ಸ್ಥಳೀಯವಾಗಿ ತಮ್ಮದೇ ಆದ ಸಮಸ್ಯೆಗಳು ಎದುರಾಗುತ್ತವೆ ಎಂದು ಗ್ರಾಮದ ಸಿಬ್ಬಂದಿಯವರಿಂದ ತಿಳಿದು ಬಂದಿದೆ.

ಗ್ರಾಮಪಂಚಾಯಿತಿ ಸದಸ್ಯರಲ್ಲಿ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಬಗ್ಗೆ ಸಂಪೂರ್ಣವಾಗಿ ತಿಳಿಯದೇ ಇರುವುದು ಕಂಡುಬಂದಿದೆ. ಗ್ರಾಮಪಂಚಾಯಿತಿಯ ಸದಸ್ಯರಾಗಿ ಆಯ್ಕೆಯಾಗಿರುವ ಸದಸ್ಯರಲ್ಲಿ ಈ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಬಗ್ಗೆ ಅರಿವಿಲ್ಲದಿರುವುದು ಕಂಡುಬಂದಿದೆ. ಗ್ರಾಮಸಭೆಯ ಬಗ್ಗೆ ಸದಸ್ಯರು ತಿಳಿದುಕೊಂಡಿರುವುದು ಕ್ಷೇತ್ರಕಾರ್ಯ ಸಂದರ್ಭದಲ್ಲಿ ತಿಳಿದುಬಂದಿದೆ. ಮಹಿಳಾ ಸದಸ್ಯರು ಗ್ರಾಮಸಭೆಯಲ್ಲಿ ಮತ್ತು ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿಸುವುದಿಲ್ಲ. ಬದಲಾಗಿ ತಮ್ಮ ಗಂಡಂದಿರು ಸಭೆಯಲ್ಲಿ ಭಾಗವಹಿಸಿ ಹಾಜರಾತಿ ಸಹಿ ಮಾಡಿ ಹೋಗುವುದನ್ನು ಗಮನಿಸಲಾಗಿದೆ. ಸಾಮಾಜಿಕ ಜಮಾಬಂದಿ ಸಭೆಯ ಕುರಿತು ತಿಳಿದಿರುವ ಸದಸ್ಯರು ತಮ್ಮ ವಾರ್ಡಿನ ಜನರಿಗೆ ತಿಳಿಸುವುದಿಲ್ಲ. ಜಮಾಬಂದಿ ಸಭೆಯ ಮಾಹಿತಿಯಾಗಲೀ, ಆರ್ಥಿಕ ಅಂಶಗಳ ಕುರಿತಾಗಲೀ ಜನರಿಗೆ ಅರಿವು ಮೂಡಿಸುವುದಿಲ್ಲ. ತಮ್ಮ ವಾರ್ಡಿನ ಸಮಸ್ಯೆಗಳ ಕುರಿತು ಜಮಾಬಂದಿ ಸಭೆಯಲ್ಲಿ ತಮ್ಮ ವಾರ್ಡಿಗೆ ನೀಡಬೇಕಾದ ಸವಲತ್ತುಗಳ ಬಗ್ಗೆ ಚರ್ಚಿಸದೇ ಇರುವುದು ಕಂಡುಬರುತ್ತದೆ.

ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಜನರು ಕಡತಗಳನ್ನು ಪರಿಶೀಲಿಸದೇ ಇರುವುದು ಮತ್ತು ದೂರುಗಳನ್ನು ಸಲ್ಲಿಸದೇ ಇರುವುದು, ಸಮಸ್ಯೆಗಳು ಕಂಡುಬಂದರೂ ಪಂಚಾಯಿತಿಯ ಆರ್ಥಿಕಾಂಶಗಳಲ್ಲಿ ದೋಷಗಳು ಕಂಡುಬಂದಲ್ಲಿ ಜನರು ಮತ್ತು ಪಂಚಾಯಿತಿ ಸದಸ್ಯರು ಕಡತಗಳನ್ನು ಪರಿಶೀಲಿಸದೇ ಇರುವುದು ಕಂಡುಬರುತ್ತದೆ. ಕಾಮಗಾರಿಗಳಲ್ಲಿ ದೋಷಗಳು ಇದ್ದಲ್ಲಿ ಹಣ ದುರುಪಯೋಗವಾದಾಗಲೂ ಭಾಗವಹಿಸಿದ ಜನರು ಮತ್ತು ಸದಸ್ಯರು ದೂರು ಸಲ್ಲಿಸದೇ ಇರುವುದರಿಂದ ಸಾಮಾಜಿಕ ಜಮಾಬಂದಿ ಸಭೆಗಳು ಯಶಸ್ವಿಯಾಗುವುದಿಲ್ಲ.

ಗ್ರಾಮಪಂಚಾಯಿತಿ ಸದಸ್ಯರಲ್ಲಿ ಹೊಂದಾಣಿಕೆ ಇಲ್ಲದಿರುವುದು, ಸದಸ್ಯರುಗಳು ತಾಲ್ಲೂಕು ಹಂತದ ರಾಜಕೀಯ ಪಕ್ಷಗಳಲ್ಲಿ ಗುರುತಿಸಿಕೊಂಡಿರುತ್ತಾರೆ. ಹಾಗಾಗಿ ಕೆಲವರು ಒಂದು ರಾಜಕೀಯದ ನಿಲುವಿನ ಮೇಲಿನ ರಾಜಕೀಯ ಮಾಡಿದರೆ ಮತ್ತೊಂದು ಗುಂಪು ಇನ್ನೊಂದು ರಾಜಕೀಯ ನಿಲುವುಗಳನ್ನು ಮನದಲ್ಲಿಟ್ಟುಕೊಂಡು ಗ್ರಾಮಸಭೆಗಳು ಅಥವಾ ಸಾಮಾಜಿಕ ಜಮಾಬಂದಿ ಸಭೆಗಳಲ್ಲಿ ಗೊಂದಲ ಮತ್ತು ಬಾಯಿ ಮಾಡುವುದರ ಮೂಲಕ ಸಭೆಯ ಉದ್ದೇಶವನ್ನು ಪೂರ್ಣಗೊಳಿಸಲು ಸಾಧ್ಯವಾಗುವುದಿಲ್ಲ. ಗ್ರಾಮಪಂಚಾಯಿತಿ ಸದಸ್ಯರ ಸಂಘರ್ಷದಿಂದ ಸಭೆಗಳು ಯಶಸ್ವಿಯಾಗದೇ ಇರುವುದು ಕೆಲವು ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಗಳಲ್ಲಿ ಕಂಡುಬಂದಿದೆ.

ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆ ನಿರ್ವಹಿಸುವ ಸಮಯದಲ್ಲಿ ದೋಷಗಳು ಕಂಡುಬಂದಿವೆ. ಸಭೆ ನಡೆಸುವ ಸಮಯವು ಸುಮಾರು ಬೆಳಗ್ಗೆ ೧೧ರಿಂದ ಪ್ರಾರಂಭವಾದರೆ ಆ ಸಭೆಗಳು ಉತ್ತಮವಾಗಿ ಪಡೆಯಲು ಸಾಧ್ಯ. ಕೆಲವು ಸಾಮಾಜಿಕ ಜಮಾಬಂದಿ ಸಭೆಗಳು ಮಧ್ಯಾಹ್ನ ೧ ಗಂಟೆಗೆ ಪ್ರಾರಂಭವಾಗಿ ೨ ಗಂಟೆಗೆ ಮುಕ್ತಾಯವಾಗುತ್ತವೆ. ಹೀಗಾಗಿ ಜನರು ಹೆಚ್ಚು ಭಾಗವಹಿಸಲು ಸಾಧ್ಯವಾಗುವುದಿಲ್ಲ. ಗ್ರಾಮದ ಜನರಿಗೆ ೧ ಗಂಟೆ ಸಮಯಕ್ಕೆ ಸೇರಲು ಸಾಧ್ಯವಾಗುವುದಿಲ್ಲ. ಆದ್ದರಿಂದ ಸಾಮಾಜಿಕ ಜಮಾಬಂದಿ ಸಭೆಯ ಯಶಸ್ವಿಗೆ ತೊಂದರೆ ಉಂಟಾಗುತ್ತದೆ.

**ಸಾಮಾಜಿಕ ಜಮಾಬಂದಿ ಪರಿಶೀಲನಾ ತಂಡ**

**ತಾಲ್ಲೂಕು ಸಂಯೋಜನಾಧಿಕಾರಿಗಳ ಅಶಾಶ್ವತ ಅಧಿಕಾರ:** ಗ್ರಾಮಪಂಚಾಯಿತಿಗಳ ಸಾಮಾಜಿಕ ಜಮಾಬಂದಿ ಗ್ರಾಮಸಭೆಯನ್ನು ನಡೆಸುವ ಹೊಣೆಗಾರಿಗೆ ಹೊಂದಿರುವ ತಾಲ್ಲೂಕು ಸಂಯೋಜನಾಧಿಕಾರಿಗಳು ಆಶಾಶ್ವತ ಹುದ್ದೆಯಲ್ಲಿರುವುದರಿಂದ ತಾಲ್ಲೂಕು ಸಂಯೋಜನಾಧಿಕಾರಿ ಕೆಲವು ಸಂದರ್ಭಗಳಲ್ಲಿ ಕೆಲಸ ಮಾಡದೇ ಇರುವುದು ಕಂಡುಬಂದಿದೆ.

**ಸಾಮಾಜಿಕ ಜಮಾಬಂದಿ ಪರಿಶೀಲನಾ ತಂಡದವರಿಗೆ ಸೂಕ್ತ ತರಬೇತಿ ನೀಡದಿರುವುದು:** ಗ್ರಾಮ ಪಂಚಾಯಿತಿಯಲ್ಲಿ ವರ್ಷಕ್ಕೆ ಒಮ್ಮೆ ನಡೆಯುವ ಸಾಮಾಜಿಕ ಜಮಾಬಂದಿ ಸಭೆಗೆ ೪ರಿಂದ ೬ ಜನರನ್ನು ತಾಲ್ಲೂಕು ಸಂಯೋಜನಾಧಿಕಾರಿಗಳು ನೇಮಕ ಮಾಡಿಕೊಳ್ಳುತ್ತಾರೆ. ಅವರಿಗೆ ತರಬೇತಿ

ನೀಡಿದರೂ ಕ್ಷೇತ್ರದಲ್ಲಿ ತರಬೇತಿ ಹೊಂದಿದ ತಂಡದವರು ನಿಯಮಾನುಸಾರವಾಗಿ ಜಮಾಬಂದಿ ಕೆಲಸವನ್ನು ನಿರ್ವಹಿಸಲು ಸಾಧ್ಯವಾಗುವುದಿಲ್ಲ. ತರಬೇತಿ ಸಮಯದಲ್ಲಿ ನೀಡಿದ ಕಾಮಗಾರಿ ಗುಣಮಟ್ಟ ಪರೀಕ್ಷಿಸುವ ಕಿಟ್‌ಗಳು ಕ್ಷೇತ್ರಕಾರ್ಯದಲ್ಲಿ ಸಕ್ರಿಯವಾಗಿ ಕೆಲಸ ಮಾಡದಿರುವುದು ಕಂಡುಬರುತ್ತದೆ.

**ಗ್ರಾಮಪಂಚಾಯಿತಿಯಲ್ಲಿನ ಸಿಬ್ಬಂದಿಯ ಕೊರತೆ:** ಗ್ರಾಮಪಂಚಾಯಿತಿಯಲ್ಲಿ ಕಾರ್ಯನಿರ್ವಹಿಸುವ ಸಿಬ್ಬಂದಿ ಇಲ್ಲದಿರುವುದು ಗ್ರಾಮಪಂಚಾಯಿತಿ ಎಸ್.ಡಿ.ಓ. ಮತ್ತು ಕಾರ್ಯದರ್ಶಿ ಅಧಿಕಾರಿಗಳು ಇಲ್ಲದಿರುವುದು. ಒಬ್ಬ ಪಿ.ಡಿ.ಓ. ಕಾರ್ಯದರ್ಶಿ ಎರಡೂ ಗ್ರಾಮಪಂಚಾಯಿತಿಗಳಲ್ಲಿ ಕೆಲಸ ನಿರ್ವಹಿಸುವುದರಿಂದ ಒಂದು ಗ್ರಾಮಪಂಚಾಯಿತಿಯ ಕಾರ್ಯಗಳನ್ನು ಕಡತಗಳನ್ನು ನಿರ್ವಹಿಸದೇ ಇರುವುದು ಕಂಡುಬಂದಿದೆ. ಒಂದು ಗ್ರಾಮಪಂಚಾಯಿತಿಯಲ್ಲಿ ಕಾಮಗಾರಿಗಳು ಪೂರ್ಣಗೊಳಿಸಲು ಸಾಧ್ಯವಾಗದಿರುವುದು ಕಂಡುಬಂದಿದೆ. ಗ್ರಾಮಪಂಚಾಯಿತಿಯಲ್ಲಿ ಜಾರಿಯಲ್ಲಿರುವ ಯೋಜನೆಗಳನ್ನು ನಿರ್ವಹಿಸಲು ಪ್ರತಿ ಗ್ರಾಮಪಂಚಾಯಿತಿಯಲ್ಲಿ ಅವಶ್ಯಕವಾದ ಸಿಬ್ಬಂದಿಯನ್ನು ಸರ್ಕಾರ ನೇಮಕ ಮಾಡಿದರೆ ಮಾತ್ರ ಜನರಿಗೆ ಗ್ರಾಮಪಂಚಾಯಿತಿಯಿಂದ ಉತ್ತಮ ಸೇವೆಗಳನ್ನು ಪಡೆಯಲು ಸಾಧ್ಯವಾಗುತ್ತದೆ.

## ಗ್ರಾಮಪಂಚಾಯಿತಿಗಳಲ್ಲಿನ ಸಾಮಾಜಿಕ ಜಮಾಬಂದಿ ಸಮಸ್ಯೆಗಳು

ಒಂದು ರಾಜ್ಯದ ಅಭಿವೃದ್ಧಿಗೆ ರಾಜ್ಯದಲ್ಲಿರುವ ನೈಸರ್ಗಿಕ ಸಂಪನ್ಮೂಲಗಳು ಮತ್ತು ಮಾನವ ಸಂಪನ್ಮೂಲಗಳ ಲಭ್ಯತೆ ಪೂರಕವಾಗಿರುತ್ತದೆ. ಅದೇ ರೀತಿ ರಾಜ್ಯದ ಆಡಳಿತಾತ್ಮಕ ಅಧಿಕಾರ ಸಕ್ರಿಯ ಅನುಷ್ಠಾನವು ಹೇಗೆ ಪ್ರಮುಖವಾಗಿರುತ್ತದೆಯೋ ಹಾಗೆಯೇ ಗ್ರಾಮಗಳ ಅಭಿವೃದ್ಧಿಯಲ್ಲಿ ಸ್ಥಳೀಯ ನೈಸರ್ಗಿಕ ಸಂಪನ್ಮೂಲಗಳು ಮತ್ತು ಮಾನವ ಸಂಪನ್ಮೂಲಗಳು ಗ್ರಾಮಪಂಚಾಯಿತಿಗಳ ಆಡಳಿತವು ಪ್ರಧಾನವಾಗಿರುತ್ತವೆ. ಕೇವಲ ಸಂಪನ್ಮೂಲಗಳು ಮಾತ್ರ ಇದ್ದರೆ ಅಭಿವೃದ್ಧಿ ಹೊಂದುವುದು ಸಾಧ್ಯವಿಲ್ಲ. ಲಭ್ಯವಿರುವ ಸಂಪನ್ಮೂಲಗಳನ್ನು ಮತ್ತು ಸೌಲಭ್ಯಗಳನ್ನು ಗ್ರಾಮದ ಎಲ್ಲಾ ಸಮುದಾಯಗಳಿಗೆ ತಲುಪಿಸಿ ಎಲ್ಲರಿಗೂ ಸಮಾನ ಅವಕಾಶಗಳನ್ನು ಒದಗಿಸಿ ತಮ್ಮ ಅಭಿವೃದ್ಧಿಯನ್ನು ಸಾಧಿಸಿಕೊಳ್ಳುವಂತಹ ಸಾಮಾಜಿಕ ಸೌಕರ್ಯಗಳನ್ನು ನೀಡುವುದರ ಮೂಲಕ ಸಮಾಜಗಳು ಅಭಿವೃದ್ಧಿ ಸಾಧಿಸಲು ಯಶಸ್ವಿಯಾಗುತ್ತದೆ. ಯಾವುದೇ ಸಮಾಜದಲ್ಲಾಗಲಿ ಅಭಿವೃದ್ಧಿಯಾಗಲು ಹಲವು ಕಾರಣಗಳು ಇರುವಂತೆ ಯಶಸ್ವಿಯಾಗದಿರಲು ಹಲವು ರೀತಿಯ ಕಾರಣಗಳು ಇರುತ್ತವೆ. ಹಾಗೆಯೇ ಗ್ರಾಮೀಣ ಸಮಾಜದಲ್ಲಿ ಸಾಮಾಜಿಕ ಸ್ಥಿತಿ ಮತ್ತು ಆರ್ಥಿಕ ಸ್ಥಿತಿಗಳನ್ನು ಆಧರಿಸಿಕೊಂಡಿರುವುದು ಸಾಬೀತಾಗಿದೆ. ಪ್ರಸ್ತುತ ಅಧ್ಯಯನಕ್ಕೆ ಒಳಪಡಿಸಿರುವ ನಾಲ್ಕು ಗ್ರಾಮಗಳಲ್ಲಿಯೂ ಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯು ಯಶಸ್ವಿಯಾಗಿ ನಡೆಯದಿರಲು ಮತ್ತು ಗ್ರಾಮಪಂಚಾಯಿತಿ ಸಾಮಾಜಿಕ

ಜಮಾಬಂದಿ ಸಭೆಯು ಗ್ರಾಮದ ಸಾಮಾಜಿಕ ಆಯಾಮಗಳನ್ನು ಒಳಗೊಳ್ಳದಿರುವುದಕ್ಕೆ ಹಲವು ರೀತಿಯ ಕಾರಣಗಳು ಅಧ್ಯಯನದಿಂದ ಕಂಡುಬಂದಿವೆ. ಈ ಅಧ್ಯಯನದಿಂದ ಕಂಡುಬಂದಿರುವ ಕಾರಣಗಳು ಗ್ರಾಮದಿಂದ ಗ್ರಾಮಕ್ಕೆ ಹಲವು ಭಿನ್ನತೆಗಳಿಂದ ಕೂಡಿವೆ. ಈ ಅಧ್ಯಯನಕ್ಕೆ ಒಳಪಡಿಸಿದ ಗ್ರಾಮಗಳಲ್ಲಿ ಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯಲ್ಲಿ ವಿವಿಧ ಸಮಾಜದ ವಿವಿಧ ಸಮುದಾಯಗಳು ವರ್ಗಗಳು ಭಾಗವಹಿಸುವಿಕೆಯಲ್ಲಿ ಕಡಿಮೆ ಇರುವುದಕ್ಕೆ ಕಾರಣಗಳೇನು ಎಂಬ ಅಂಶಗಳನ್ನು ಚರ್ಚಿಸಲಾಗಿದೆ.

**ಮೋಕಾ ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿಯ ಕೌಟುಂಬಿಕ ಆಯಾಮಗಳು**

ಮೋಕಾ ಗ್ರಾಮಪಂಚಾಯಿತಿಯ ೨೪ ದೊಡ್ಡಗಾತ್ರದ ಕುಟುಂಬಗಳನ್ನು ಅಧ್ಯಯನಕ್ಕೆ ಒಳಪಡಿಸಲಾಗಿದೆ. ಈ ೨೪ ದೊಡ್ಡಗಾತ್ರದ ಕುಟುಂಬಗಳಲ್ಲಿ ಕೇವಲ ೬ ಕುಟುಂಬಗಳು ಮಾತ್ರ ಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾವಗವಹಿಸುತ್ತವೆ. ಅದಕ್ಕೆ ಕಾರಣಗಳು ಮುಂದಿನಂತಿವೆ. ಮೋಕಾ ಗ್ರಾಮವು ಹೆಚ್ಚು ನೀರಾವರಿ ಪ್ರದೇಶವನ್ನು ಹೊಂದಿವೆ. ಮೋಕಾ ಗ್ರಾಮದಲ್ಲಿ ಒಂದು ವರ್ಷದಲ್ಲಿ ಎಂಟು ತಿಂಗಳುಗಳ ಕಾಲ ನೀರಾವರಿ ಸೌಲಭ್ಯ ಇರುತ್ತದೆ. ತುಂಗಭದ್ರಾ ಕಾಲುವೆ ಮತ್ತು ಶರಾವತಿನದಿ ನೀರು ಗ್ರಾಮ ವ್ಯವಸಾಯಕ್ಕೆ ಲಭ್ಯವಿದ್ದು, ದೊಡ್ಡ ಗಾತ್ರದ ಕುಟುಂಬಗಳು ಉತ್ತಮ ಭೂಮಿಯನ್ನು ಹೊಂದಿವೆ. ಇವರು ಕೃಷಿಯಲ್ಲಿ ಹೆಚ್ಚು ತೊಡಗಿಸಿಕೊಂಡಿದ್ದು, ಗ್ರಾಮದಲ್ಲಿ ಎಲ್ಲಾ ಸೌಕರ್ಯಗಳನ್ನು ಹೊಂದಿರುವ ಕುಟುಂಬಗಳಾಗಿವೆ. ಹಾಗಾಗಿ ಈ ದೊಡ್ಡಗಾತ್ರದ ಕುಟುಂಬಗಳು ಗ್ರಾಮಪಂಚಾಯಿತಿಯಿಂದ ಯಾವುದೇ ಸೌಲಭ್ಯಗಳನ್ನು ನಿರೀಕ್ಷಿಸುವುದಿಲ್ಲ. ಹಾಗೆಯೇ ಮಧ್ಯಮಗಾತ್ರದ ಕುಟುಂಬಗಳನ್ನು ಗಮನಿಸಿದರೆ ಇವರ ಭಾಗಿತ್ವವು ಸ್ವಲ್ಪ ಸುಧಾರಿಸಿದಂತೆ ಕಂಡುಬಂದಿದೆ. ಮಧ್ಯಮಗಾತ್ರದ ಕುಟುಂಬಗಳು ಗ್ರಾಮಪಂಚಾಯಿತಿಯ ಸಾಮಾಜಿಕ ಜಮಾಬಂದಿಯಲ್ಲಿ ಭಾಗವಹಿಸುತ್ತವೆ. ಆದರೂ ಇವರು ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸದೇ ಇರುವುದಕ್ಕೆ ಕಾರಣ ಈ ಕುಟುಂಬಗಳು ಹೆಚ್ಚಾಗಿ ಕೃಷಿಯಾಧಾರಿತ ಕುಟುಂಬಗಳಾಗಿದ್ದು, ಕೃಷಿ ಕೆಲಸದಲ್ಲಿ ದಿನವಿಡೀ ತೊಡಗಿಕೊಂಡಿವುದಾಗಿದೆ. ಕುಟುಂಬದ ಎಲ್ಲ ಸದಸ್ಯರು ಕೃಷಿ ಕೆಲಸಗಳಲ್ಲಿ ತೊಡಗುವುದರಿಂದ ಮತ್ತು ಬೇರೆ ಕೆಲಸಕ್ಕೆ ನಗರಗಳಿಗೆ ಹೋಗುವುದರಿಂದ ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿಸುವುದಕ್ಕೆ ಆಗುವುದಿಲ್ಲ. ಚಿಕ್ಕಗಾತ್ರದ ಕುಟುಂಬಗಳು ತಮ್ಮ ಜೀವನ ನಿರ್ವಹಣೆಗೆ ಇತರೆ ಸ್ವಂತ ಕೆಲಸಗಳಿಗೆ ಹೋಗುವುದರಿಂದ ಸಮಯ ಸರಿಹೊಂದದೇ ಇರುವುದರಿಂದ ಮತ್ತು ಅತಿ ಸಾಧಾರಣ ಜೀವನವನ್ನು ನಿರ್ವಹಣೆ ಮಾಡುವುದರಿಂದ ಹೆಚ್ಚಾಗಿ ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿಸದೇ ಇರುವುದು ಕಂಡುಬರುತ್ತದೆ.

ಈ ಗ್ರಾಮದಲ್ಲಿ ಪರಿಶಿಷ್ಟ ಜಾತಿಯವರು ಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿಸದೇ ಇರುವುದಕ್ಕೆ ಹಲವು ಕಾರಣಗಳು ಕಂಡುಬರುತ್ತವೆ. ಪರಿಶಿಷ್ಟ ಜಾತಿ ಬೀದಿಗಳು ಗ್ರಾಮದ ಎಡಭಾಗದಲ್ಲಿವೆ. ಇವರ ಕುಟುಂಬಗಳು ಕಡಿಮೆ ಭೂಮಿಯನ್ನು ಹೊಂದಿವೆ. ಇವರ ಆರ್ಥಿಕ ಸ್ಥಿತಿಯೂ ತಳ ಹಂತದಲ್ಲಿರುತ್ತದೆ. ಇವರು ಸಾಮಾನ್ಯವಾಗಿ ಹೆಚ್ಚು ಭೂಮಿ ಹೊಂದಿರುವ ಭೂಮಾಲೀಕರ ಹೊಲಗಳಿಗೆ ಕೂಲಿಕೆಲಸಕ್ಕೆ ಹೋಗುವುದರಿಂದ ಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯ ಬಗ್ಗೆ ಅರಿವಿಲ್ಲದಿರುವುದು ಕಂಡುಬರುತ್ತದೆ. ಕೆಲವು ಕುಟುಂಬಗಳಿಗೆ ಸಾಮಾಜಿಕ ಜಮಾಬಂದಿಯ ಬಗ್ಗೆ ಅರಿವಿದ್ದರೂ ಸಭೆಗಳಲ್ಲಿ ಭಾಗವಹಿಸಲು ಸಮಯ ಇಲ್ಲದಿರುವುದು ಕಂಡುಬಂದಿದೆ. ಹೆಣ್ಣುಮಕ್ಕಳು ಕೂಲಿ ಕೆಲಸಕ್ಕೆ ಹೋದರೆ. ಗಂಡಸರು ಬಳ್ಳಾರಿ ನಗರಕ್ಕೆ ಕೂಲಿ ಕೆಲಸಕ್ಕೆ ಹೋಗಿ ಸಂಜೆ ಬರುವುದರಿಂದ ಬಹುಪಾಲು ಜನರು ಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿಸುವುದಿಲ್ಲ. ಕೂಲಿ ಕಾರ್ಮಿಕರಿಗೆ ಸಾಮಾಜಿಕ ಜಮಾಬಂದಿಯ ಬಗ್ಗೆ ಯಾವುದೇ ಅರಿವಿರುವುದಿಲ್ಲ. ಅದಕ್ಕೆ ಕಾರಣವೆಂದರೆ ಗ್ರಾಮದಲ್ಲಿ ಅವರ ಬೀದಿಗಳಿಗೆ ಹೋಗಿ ಸಭೆಯ ಬಗ್ಗೆ ಪ್ರಚಾರ ಮಾಡುವುದಿಲ್ಲ. ಪರಿಶಿಷ್ಟ ಜಾತಿಯ ಬೀದಿ ಹೊರಗೆ ನಿಂತು ಪ್ರಚಾರ ನಡೆಸುತ್ತಾರೆ. ಪರಿಶಿಷ್ಟ ಪಂಗಡದ ಜನರನ್ನು ಸಂದರ್ಶಿಸಿದಾಗ ಪಂಚಾಯಿತಿ ಸಾಮಾಜಿಕ ಜಮಾಬಂದಿಯ ಸಭೆಯು ನಡೆಸುವ ಸಮಯವೂ ಸರಿಯಾಗಿರುವುದಿಲ್ಲ. ಮಧ್ಯಾಹ್ನದ ಹೊತ್ತಿನಲ್ಲಿ ಸಭೆ ನಡೆಸುತ್ತಾರೆ (ಜನರು ಪ್ರಶ್ನೆಗಳು ಕೇಳದ ಹಾಗೆ). ಗ್ರಾಮದ ಜನರು ಹೊಲಗಳಲ್ಲಿ ದುಡಿಯುವ ಸಮಯದಲ್ಲಿ ಸಭೆಯನ್ನು ನಡೆಸುತ್ತಾರೆ. ಹೀಗೆ ನಡೆಸುವುದರಿಂದ ಪಂಚಾಯಿತಿ ಸಾಮಾಜಿಕ ಸಭೆಯಲ್ಲಿ ಭಾಗವಹಿ ಸುವುದಕ್ಕೆ ಆಗುವುದಿಲ್ಲ ಎಂದು ಉತ್ತರಿಸುತ್ತಾರೆ.

ಶ್ರೀಮಂತ ಕುಟುಂಬಗಳು ಪಂಚಾಯಿತಿ ಕಚೇರಿಗಳಿಗೆ ಹೋಗಲು ಇಷ್ಟಪಡುವುದಿಲ್ಲ. ಏಕೆಂದರೆ ಇವರಿಗೆ ಗ್ರಾಮಪಂಚಾಯಿತಿ ಕಚೇರಿಯ ಆಡಳಿತದ ಬಗ್ಗೆ ಅಪನಂಬಿಕೆ ಇರುವುದು ಕಂಡುಬಂದಿದೆ. ಮತ್ತೆ ಕೆಲವರು ತಮ್ಮ ವಾರ್ಡಿನ ಸದಸ್ಯರು ತಮಗೆ ಬೇಕಾದ ಕೆಲಸವನ್ನು ಮಾಡಿಕೊಳ್ಳುತ್ತಾರೆ. ಕೆಲವು ಶ್ರೀಮಂತ ಕುಟುಂಬಗಳು ಗ್ರಾಮಪಂಚಾಯಿತಿಯ ಕೆಲಸ ನಿರ್ವಹಿಸುವಲ್ಲಿ ಸಫಲವಾಗಿದೆ ಎಂದು ಹೇಳುತ್ತಾರೆ.

### ಸಂಗನಕಲ್ಲು ಗ್ರಾಮಪಂಚಾಯಿತಿ ಸಾಮಾಜಿಕ ಆಯಾಮಗಳ ಕಾರಣಗಳು

ಸಂಗನಕಲ್ಲು ಗ್ರಾಮಪಂಚಾಯಿತಿ ಬಳ್ಳಾರಿಯಿಂದ ೫ ಕಿ.ಮೀ. ಅಂತರದಲ್ಲಿದೆ. ಅರೆನಗರ ಮತ್ತು ಅರೆಗ್ರಾಮೀಣ ವ್ಯವಸ್ಥೆಯನ್ನು ಸಂಗನಕಲ್ಲು ಗ್ರಾಮದಲ್ಲಿ ನೋಡಬಹುದು. ಈ ಶ್ರೀಮಂತ ಗ್ರಾಮದಲ್ಲಿ ಚಿಕ್ಕ ಕುಟುಂಬಗಳ ಸಂಖ್ಯೆ ಹೆಚ್ಚಾಗಿದೆ. ಅದಕ್ಕೆ ಕಾರಣ ಪಕ್ಕದ ನಗರದ ಪ್ರಭಾವ. ಗ್ರಾಮದ ಬಹುಪಾಲು ಜನರು ಪ್ರತಿದಿನ ಬಳ್ಳಾರಿ ನಗರಕ್ಕೆ ಕೂಲಿ, ಕಸುಬುಗಳು ಮತ್ತು ಇತರೆ

ಸರ್ಕಾರಿ, ಅರೆಸರ್ಕಾರಿ ನೌಕರಿಗಾಗಿ ಬರುತ್ತಾರೆ. ನಗರದ ರೀತಿಯಂತೆ ವೈಯಕ್ತಿಕ ಬೆಳವಣಿಗೆಯನ್ನು ಬಯಸುತ್ತಿರುವ ದೊಡ್ಡ ಕುಟುಂಬಗಳು ಸಂಗನಕಲ್ಲು ಗ್ರಾಮದಲ್ಲಿ ಕಂಡುಬರುತ್ತವೆ. ಉನ್ನತ ಶಿಕ್ಷಣ ಪಡೆದಿರುವ ಕುಟುಂಬಗಳು ನಗರಪ್ರದೇಶಕ್ಕೆ ಹೋಗಿದ್ದು(ಮಧ್ಯಮ) ಶಿಕ್ಷಣ ಹೊಂದಿದ್ದು ಕೃಷಿಕರಿಗೆ ಹೊಲಗಳನ್ನು ಗುತ್ತಿಗೆಗೆ ನೀಡಿ ಹೋಗುತ್ತಿದ್ದಾರೆ. ಮಧ್ಯಮಗಾತ್ರದ ಕುಟುಂಬಗಳು ಕೃಷಿ ಚಟುವಟಿಕೆಯಲ್ಲಿ ತೊಡಗಿಕೊಂಡಿವೆ. ಕೃಷಿ ಕಾರ್ಮಿಕರಲ್ಲಿ ಮಹಿಳೆಯರು ಹೆಚ್ಚಾಗಿದ್ದಾರೆ. ಇತ್ತೀಚಿನ ದಿನಗಳಲ್ಲಿ ಇವರ ಸಂಖ್ಯೆ ಕಡಿಮೆಯಾಗುತ್ತಿದೆ. ಪುರುಷರು ಹೆಚ್ಚಾಗಿ ನಗರಪ್ರದೇಶಗಳಿಗೆ ಹೋಗಿ ಕೂಲಿ ಮಾಡುತ್ತಾರೆ.

**ವರಮಾನದ ಆಯಾಮದ ಕಾರಣಗಳು:** ದೊಡ್ಡಗಾತ್ರದ ಉತ್ತಮ ಆದಾಯ ಹೊಂದಿರುವ, ಶಿಕ್ಷಣ ಪಡೆದಿರುವ ಕುಟುಂಬಗಳು ಬಳ್ಳಾರಿ ನಗರದಲ್ಲಿ ವ್ಯಾಪಾರಗಳಲ್ಲಿ ತೊಡಗಿಸಿಕೊಂಡಿದ್ದಾರೆ ಮತ್ತು ಸ್ಥಳೀಯ ಹಣಕಾಸಿನ ವ್ಯವಹಾರವನ್ನು ಮಾಡುತ್ತಿದ್ದಾರೆ. ಇನ್ನು ಮಧ್ಯಮ ಆದಾಯ ಹೊಂದಿರುವ ಕುಟುಂಬಗಳು ಕೃಷಿಯಲ್ಲಿ ತೊಡಗಿಸಿಕೊಂಡು ಕೃಷಿಯಿಂದ ಆದಾಯವನ್ನು ಹೊಂದಿದ್ದಾರೆ. ಚಿಕ್ಕ ಕುಟುಂಬಗಳು ಸಾಮಾನ್ಯವಾಗಿ ಕೃಷಿ ಕೂಲಿ, ಕಾರ್ಮಿಕ ಕೆಲಸವನ್ನು ಆಧರಿಸಿವೆ. ಬಹುಪಾಲು ಚಿಕ್ಕ ಕುಟುಂಬಗಳು ನಗರಪ್ರದೇಶದಲ್ಲಿ ವಿವಿಧ ಕೂಲಿ ಕೆಲಸಕ್ಕೆ ಹೋಗುವುದರ ಮೂಲಕ ಆದಾಯವನ್ನು ಪಡೆಯುತ್ತಾರೆ. ಈ ಗ್ರಾಮದ ಚಿಕ್ಕ ಮತ್ತು ದೊಡ್ಡ ಕುಟುಂಬಗಳು ನಗರ ಪ್ರದೇಶಗಳಲ್ಲಿ ಹೆಚ್ಚು ಇರುವುದರ ಮೂಲಕ ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯ ಬಗ್ಗೆ ಇವರಿಗೆ ಅರಿವಿಲ್ಲದಿರುವುದು ಕಂಡುಬಂದಿದೆ. ಹಾಗೆಯೇ ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿಸ ದಂತೆ ದೂರ ಉಳಿದಿರುವುದು ಕಂಡುಬರುತ್ತದೆ. ಮಧ್ಯಮ ಆದಾಯ ಹೊಂದಿರುವ ಕುಟುಂಬಗಳ ಸಂಖ್ಯೆಯೂ ಹೆಚ್ಚಾಗಿದೆ. ಈ ಕುಟುಂಬಗಳು ಜಮಾಬಂದಿ ಸಭೆಯ ಬಗ್ಗೆ ಅರಿವು ಹೊಂದಿದ್ದಾರೆ. ದೊಡ್ಡ ಮತ್ತು ಕಡಿಮೆ ಆದಾಯ ಹೊಂದಿರುವ ಕುಟುಂಬಗಳಿಗಿಂತ ಮಧ್ಯಮ ಆದಾಯ ಹೊಂದಿರುವ ಕುಟುಂಬಗಳು ಹೆಚ್ಚಾಗಿ ಸಭೆಯಲ್ಲಿ ಭಾಗವಹಿಸುತ್ತಾರೆ.

**ಶೈಕ್ಷಣಿಕ ಆಯಾಮ ಕಾರಣಗಳು:** ಸಂಗನಕಲ್ಲು ಗ್ರಾಮದಲ್ಲಿ ಹೆಚ್ಚು ಶಿಕ್ಷಣ ಹೊಂದಿರುವ ಕುಟುಂಬಗಳ ಸಂಖ್ಯೆ ಹೆಚ್ಚಾಗಿದೆ. ಉನ್ನತ ಶಿಕ್ಷಣ ಹೊಂದಿರುವ ಕುಟುಂಬಗಳ ಜನರು ಗ್ರಾಮಪಂಚಾಯಿತಿಯ ಸೌಲಭ್ಯಗಳನ್ನು ಹೆಚ್ಚು ನಿರೀಕ್ಷಿಸದೇ ನಗರಗಳಲ್ಲಿ ವಾಸಿಸುತ್ತಾರೆ. ಹಾಗಾಗಿ ಇವರಲ್ಲಿ ಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯ ಬಗ್ಗೆ ಅರಿವಿಲ್ಲ. ಇವರ ಭಾಗವಹಿಸುವಿಕೆ ತೀರಾ ಕಡಿಮೆ ಇರುತ್ತದೆ. ಉನ್ನತ ಶಿಕ್ಷಣ ಹೊಂದಿರುವ ಕುಟುಂಬಗಳು ಗ್ರಾಮಪಂಚಾಯಿತಿಗಳಿಂದ ದೂರ ಉಳಿದಿದ್ದಾರೆ. ಇನ್ನು ತಾಂತ್ರಿಕ ಶಿಕ್ಷಣ ಹೊಂದಿರುವವರು ಮ್ಯಾನೇಜ್‌ಮೆಂಟ್ ಸ್ಟಡಿ ಇತರೆ ಮಾರುಕಟ್ಟೆ ಬೇಡಿಕೆ ಇರುವ ಶಿಕ್ಷಣ ಹೊಂದಿರುವವರಲ್ಲಿ ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯ ಅರಿವಿಲ್ಲದೇ ಇರುವುದು ಇಲ್ಲಿ ಕಂಡುಬಂದಿದೆ.

**ಅರೆಶಿಕ್ಷಣ ಹೊಂದಿರುವ ಕುಟುಂಬಗಳು:** ಅರೆಶಿಕ್ಷಣ ಹೊಂದಿರುವ ಕುಟುಂಬಗಳು, ಪ್ರೌಢಶಾಲಾ ೧೦ನೇ ತರಗತಿ ಅನುತ್ತೀರ್ಣ ಹೊಂದಿರುವ ಕುಟುಂಬಗಳು ಹೆಚ್ಚಾಗಿ ಕಂಡು ಬರುತ್ತವೆ. ೧೦ನೇ ತರಗತಿ, ಪಿ.ಯು.ಸಿಯಲ್ಲಿ ಶಿಕ್ಷಣ ಮುಗಿಸಿ ಕೃಷಿಯಲ್ಲಿ ತೊಡಗಿಕೊಂಡಿರುವ ಮಧ್ಯಮಗಾತ್ರದ ಕುಟುಂಬಗಳು ಹೆಚ್ಚಾಗಿವೆ. ಈ ಕುಟುಂಬಗಳಲ್ಲಿ ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಕುರಿತ ಅರಿವು ಹೆಚ್ಚಾಗಿ ಕಂಡುಬರುತ್ತದೆ. ಗ್ರಾಮ ದೈನಂದಿನ ವಿಚಾರಗಳ ಬಗ್ಗೆ ಗಮನಹರಿಸುತ್ತಾರೆ. ಅದೇ ಕೆಲಸವಿಲ್ಲದ ಸಮಯಗಳಲ್ಲಿ ಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿಸುತ್ತಾರೆ. ತಮ್ಮ ಸಮಸ್ಯೆಗಳ ಕುರಿತು ಚರ್ಚಿಸುತ್ತಾರೆ.

**ಅನಕ್ಷರಸ್ಥ ಕುಟುಂಬಗಳು:** ಅನಕ್ಷರಸ್ಥ ಕುಟುಂಬಗಳಲ್ಲಿಯೂ ಸಾಮಾಜಿಕ ಪ್ರಜ್ಞೆ ಇರುವುದು ಸಂಗನಕಲ್ಲು ಗ್ರಾಮದಲ್ಲಿ ಕಂಡುಬರುತ್ತದೆ. ಅರೆಶಿಕ್ಷಣ ಪಡೆದ ಕುಟುಂಬಗಳಂತೆ ಅನಕ್ಷರಸ್ಥ ಕುಟುಂಬಗಳು ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿಯಲ್ಲಿ ಭಾಗವಹಿಸುತ್ತಾರೆ. ಹಾಗೆಯೇ ತಮ್ಮ ಸಮಸ್ಯೆಗಳನ್ನು ಕುರಿತು ಪ್ರಶ್ನೆಗಳನ್ನು ಎತ್ತುತ್ತಾರೆ. ಹಾಗಾಗಿ ಅನಕ್ಷರಸ್ಥ ಕುಟುಂಬಗಳು ಗ್ರಾಮೀಣ ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸುವುದರ ಮೂಲಕ ಇವರಲ್ಲಿ ಸಾಮಾಜಿಕ ಪ್ರಜ್ಞೆ ಮತ್ತು ರಾಜಕೀಯ ಪ್ರಜ್ಞೆ ಇದ್ದು ತಮ್ಮ ಸೌಲಭ್ಯಗಳನ್ನು ಪಡೆಯಲು ಪ್ರಯತ್ನಿಸುತ್ತಿದ್ದಾರೆ.

**ಸಂಗನಕಲ್ಲು ಸಾಮಾಜಿಕ ವರ್ಗಗಳ ಪರಿಮಾಣ:** ಸಂಗನಕಲ್ಲು ಗ್ರಾಮಪಂಚಾಯಿತಿಯಲ್ಲಿ ಪರಿಶಿಷ್ಟ ಜಾತಿಯವರು ಬಹುಸಂಖ್ಯಾತರು. ನಂತರ ಇತರೆ ಹಿಂದುಳಿದ ಜಾತಿಗಳ ಜನಸಂಖ್ಯೆ ಹೆಚ್ಚಾಗಿದೆ. ಪರಿಶಿಷ್ಟ ಪಮಗಡಗಳ ಜನಸಂಖ್ಯೆ ಕಡಿಮೆ ಇರುವುದು ಕಂಡುಬಂದಿದೆ. ಈ ಗ್ರಾಮದ ಬಹುಪಾಲು ಪರಿಶಿಷ್ಟ ಜಾತಿಯ ಜನರು ನಗರಪ್ರದೇಶದಲ್ಲಿ ಹೆಚ್ಚು ಕೂಲಿ ಕೆಲಸಕ್ಕೆ ಹೋಗುತ್ತಾರೆ. ಮಹಿಳೆಯರು ಹೊಲಗಳಿಗೆ ಕೂಲಿಕೆಲಸಕ್ಕೆ ಹೋಗುವುದನ್ನು ಗಮನಿಸಬಹುದು. ಹಾಗೆಯೇ ಇವರಲ್ಲಿ ಗ್ರಾಮ ಪಂಚಾಯಿತಿಗಳಲ್ಲಿ ಸಕ್ರಿಯವಾಗಿ ಭಾಗವಹಿಸುವವರ ಸಂಖ್ಯೆ ತೀರಾ ಕಡಿಮೆ ಇರುವುದು ಕಂಡು ಬರುತ್ತದೆ. ಕಾರಣಗಳು ಪರಿಶಿಷ್ಟ ಜಾತಿಯ ಜನರಲ್ಲಿ ಶಿಕ್ಷಣ ಮಟ್ಟ ಸುಧಾರಿಸಿದ್ದರೂ ತಕ್ಕ ಉದ್ಯೋಗ ಸಿಗದ ಕಾರಣ ನಗರ ಪ್ರದೇಶಗಳಿಗೆ ಹೋಗುವುದು ಅನಿವಾರ್ಯ. ನಗರಪ್ರದೇಶಗಳಿಗೆ ಹೋಗು ವುದರಿಂದ ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯಿಂದ ದೂರ ಉಳಿದಿರು ವುದು ಕಂಡುಬಂದಿದೆ.

ಪರಿಶಿಷ್ಟ ಪಂಗಡ ಜನರ ಸಂಖ್ಯೆ ಕಡಿಮೆಯಿದ್ದರೂ ಅವರ ಭಾಗವಹಿಸುವಿಕೆ ಉತ್ತಮವಾಗಿಯೇ ಇದೆ. ಪರಿಶಿಷ್ಟ ಪಂಗಡ ಕುಟುಂಬಗಳಲ್ಲಿ ಶೇ. ೫೦ ಕುಟುಂಬಗಳು ಭೂಮಿಯನ್ನು ಹೊಂದಿದ್ದು ನಗರಪ್ರದೇಶದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿದ್ದಾರೆ. ಇವರಿಗೆ ಬೇಕಾದ ಸವಲತ್ತುಗಳು ತಮ್ಮ ಸಮುದಾಯ ದಿಂದ ಸಿಕ್ಕಿದೆ. ಸ್ಥಳೀಯವಾಗಿ ಪರಿಶಿಷ್ಟ ಪಂಗಡದ ವಾಲ್ಮೀಕಿ ಜನಾಂಗದವರೇ ಶಾಸಕರು ಮತ್ತು

ಸಂಸದರಾಗಿದ್ದು, ಜಿಲ್ಲೆಯಲ್ಲಿ ವಾಲ್ಮೀಕಿ ಜನರ ರಾಜಕೀಯ ಭಾಗಿತ್ವ ಉತ್ತಮವಾಗಿದೆ. ಅದರ ಪ್ರಭಾವದಿಂದ ಸಂಗನಕಲ್ಲು ಗ್ರಾಮದಲ್ಲಿಯೂ ನಾಯಕ ಜನಾಂಗದವರ ರಾಜಕೀಯ ಭಾಗಿತ್ವ ಉತ್ತಮವಾಗಿದೆ. ಪರಿಶಿಷ್ಟ ಪಂಗಡದ ಜನರು ಗ್ರಾಮಪಂಚಾಯಿತಿಯ ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿಸಿ ತಮಗೆ ಬೇಕಾದ ಸವಲತ್ತು ಪಡೆಯುತ್ತಿದ್ದಾರೆ.

**ಹಿಂದುಳಿದ ಮತ್ತು ಸಾಮಾನ್ಯ ವರ್ಗಗಳು:** ಈ ವರ್ಗಗಳು, ಸಾಮಾಜಿಕವಾದ ಉತ್ತಮ ಸ್ಥಾನಮಾನಗಳನ್ನು ಗ್ರಾಮದಲ್ಲಿ ಹೊಂದಿವೆ. ಹೆಚ್ಚಿನ ಭೂ ಒಡೆತನ ಹೊಂದಿರುವವರು ಹಿಂದುಳಿದ ಸಮುದಾಯದವರಾಗಿದ್ದು ಇವರು ಆರ್ಥಿಕ ಸಬಲತೆಯನ್ನು ಹೊಂದಿದ್ದಾರೆ. ಮಧ್ಯಮ ಆದಾಯ ಹೊಂದಿರುವ ಕುಟುಂಬಗಳು ಗ್ರಾಮಪಂಚಾಯಿತಿ ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸುತ್ತಾರೆ. ಅದೇ ರೀತಿ ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಸಕ್ರಿಯ ಭಾಗವಹಿಸುವಿಕೆಯನ್ನು ಗಮನಿಸಬಹುದಾಗಿದೆ. ಸಾಮಾನ್ಯವರ್ಗದ ಕುಟುಂಬಗಳು ಈ ಗ್ರಾಮದಲ್ಲಿ ಕೇವಲ ೨೦ ಮನೆಗಳು ಮಾತ್ರ ಇವೆ. ಇವರು ಗ್ರಾಮಪಂಚಾಯಿತಿಯ ಸಾಮಾಜಿಕ ಜಮಾಬಂದಿಯ ಸಭೆಯಲ್ಲಿ ಮತ್ತು ಗ್ರಾಮಸಭೆಗಳಲ್ಲಿ ಭಾಗವಹಿಸದೇ ಇರುವುದು ಕಂಡು ಬಂದಿದೆ.

**ಲಿಂಗಸಂಬಂಧಿ ಕಾರಣಗಳು:** ಈ ಗ್ರಾಮಪಂಚಾಯಿತಿಯಲ್ಲಿ ಉತ್ತಮ ಆರ್ಥಿಕತೆ ಹೊಂದಿರುವ ಕುಟುಂಬಗಳು ಹೆಚ್ಚಿವೆ. ಇವು ಸಾರ್ವಜನಿಕ ಸಭೆಗಳಲ್ಲಿ, ಕಾರ್ಯಕ್ರಮಗಳಲ್ಲಿ ಭಾಗವಹಿಸುವುದಿಲ್ಲ. ಮಧ್ಯಮ ಆದಾಯ ಹೊಂದಿರುವ ಕುಟುಂಬಗಳಲ್ಲಿ ಮಹಿಳೆಯರು ತಮ್ಮ ಮನೆಯಲ್ಲಿರುವ ಗಂಡ/ಮಗ ಅವರ ಮಾತಿನ ಪ್ರಕಾರವಾಗಿ ತಮ್ಮ ಜೀವನ ನಡೆಸುತ್ತಾರೆ. ಅವರು ಸ್ವತಂತ್ರವಾಗಿ ಸಾರ್ವಜನಿಕ ಸಭೆಗಳಲ್ಲಿ ಅಥವಾ ಕಾರ್ಯಕ್ರಮಗಳಲ್ಲಿ ಭಾಗವಹಿಸುವುದಿಲ್ಲ. ಕಡಿಮೆ ಆದಾಯ ಹೊಂದಿರುವ ಮಹಿಳೆಯರು ದಿನಗೂಲಿ ಕೆಲಸಕ್ಕೆ ಹೋಗುವುದು ಕಂಡುಬರುತ್ತದೆ. ಸಾರ್ವಜನಿಕ ಸಭೆಗಳಲ್ಲಿ ಕಾರ್ಯಕ್ರಮಗಳಲ್ಲಿ ಇವರ ಭಾಗವಹಿಸುವಿಕೆ ಸಕ್ರಿಯವಾಗಿರುತ್ತದೆ. ಆದರೆ ಇವರಿಗೆ ಗ್ರಾಮ ಪಂಚಾಯಿತಿಗಳ ಸಾಮಾಜಿಕ ಜಮಾಬಂದಿ ಸಭೆ ಅಥವಾ ಗ್ರಾಮಸಭೆಗಳಲ್ಲಿ ಭಾಗವಹಿಸುವ ಅರಿವಿರುವುದಿಲ್ಲ ಮತ್ತು ಸಮಯವೂ ಇರುವುದಿಲ್ಲ. ಗ್ರಾಮದಲ್ಲಿ ಬಡತನದಲ್ಲಿರುವ ಮಹಿಳೆಯರು ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯಿಂದ ದೂರ ಉಳಿದಿರುವುದು ಕಂಡು ಬಂದಿದೆ. ಮಧ್ಯಮ ಆದಾಯದ ಕುಟುಂಬಗಳಲ್ಲಿ ಎಲ್ಲಾ ಅರಿವು ಮತ್ತು ಸಮಯವಿದ್ದರೂ ಸ್ವತಂತ್ರವಾಗಿ ನಿರ್ಣಯ ತೆಗೆದುಕೊಳ್ಳುವ ಅವಕಾಶಗಳು ಇರುವುದಿಲ್ಲ. ಹೆಚ್ಚು ಆದಾಯ ಹೊಂದಿರುವ ಕುಟುಂಬಗಳ ಮಹಿಳೆಯರಿಗೆ ಅರಿವಿದ್ದರೂ ಸಾಮಾಜಿಕ ಜಮಾಬಂದಿಯಲ್ಲಿ ಭಾಗವಹಿಸುವ ಅವಶ್ಯಕತೆ ತಮಗಿಲ್ಲವೆಂಬಂತೆ ಪಂಚಾಯಿತಿಗಳಿಂದ ದೂರ ಉಳಿದಿರುತ್ತಾರೆ.

## ಪಾಪಿನಾಯಕನಹಳ್ಳಿ ಗ್ರಾಮಪಂಚಾಯಿತಿ ಸಾಮಾಜಿಕ ಆಯಾಮದ ಕಾರಣಗಳು

ಪಾಪಿನಾಯಕನಹಳ್ಳಿ ಗ್ರಾಮಪಂಚಾಯಿತಿಯ ಸಾಮಾಜಿಕ ಸ್ಥಿತಿ ಮೋಕಾ, ಸಂಗನಕಲ್ಲು ಗ್ರಾಮಪಂಚಾಯಿತಿಗಳಿಗಿಂತ ವಿಭಿನ್ನವಾಗಿದೆ. ಈ ಗ್ರಾಮಕ್ಕೆ ನೀರಾವರಿ ಸೌಲಭ್ಯ ಇಲ್ಲ. ಗ್ರಾಮದ ಜನರು ಹೆಚ್ಚು ಹೊಸಪೇಟೆ ನಗರದ ಕೂಲಿಕೆಲಸವನ್ನು ಆಧರಿಸಿಕೊಂಡು ಕೃಷಿಯನ್ನು ಉಪ ಆದಾಯ ಮೂಲವಾಗಿ ಮಾಡಿಕೊಂಡಿದ್ದಾರೆ. ಗ್ರಾಮದಲ್ಲಿ ಮೈನಿಂಗ್ ಉದ್ಯಮದಾರರು, ಉನ್ನತ ಆದಾಯ ಹೊಂದಿರುವ ಕುಟುಂಬಗಳಿವೆ. ಕೃಷಿ, ಕುಲಕಸುಬು ಮತ್ತು ಕರಕುಶಲ ಕೆಲಸವನ್ನು ಹೊಂದಿರುವ ಕುಟುಂಬಗಳು ಮಧ್ಯಮ ಆದಾಯ ಹೊಂದಿರುವ ಕುಟುಂಬ ಳಾಗಿವೆ. ಕೃಷಿ ಭೂಮಿ ಇಲ್ಲದೆ ಕೇವಲ ಕೂಲಿಯನ್ನು ಆಧರಿಸಿಕೊಂಡು ದೈನಂದಿನ ಜೀವನ ನಡೆಸುವಂಥ ಕುಟುಂಬಗಳ ಸಂಖ್ಯೆ ಹೆಚ್ಚಾಗಿಯೇ ಕಂಡುಬರುತ್ತದೆ.

**ದೊಡ್ಡ ಗಾತ್ರದ ಕುಟುಂಬಗಳು ಆಯಾಮಗಳ ಕಾರಣ:** ಈ ಗ್ರಾಮದಲ್ಲಿ ದೊಡ್ಡಗಾತ್ರದ ಕುಟುಂಬಗಳು ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಕಡಿಮೆ ಭಾಗವಹಿಸುವಿಕೆಯ ಪ್ರಮುಖ ಕಾರಣಗಳನ್ನು ಇದಕ್ಕೆ ಮುಖ್ಯ ಕಾರಣ ದೊಡ್ಡ ಕುಟುಂಬಗಳು ಕೃಷಿಯಲ್ಲಿ ಮತ್ತು ಮೈನಿಂಗ್ ಉದ್ಯಮಗಳ ಕೆಲಸಗಳಲ್ಲಿ ತೊಡಗಿಕೊಂಡಿದ್ದು, ಗ್ರಾಮಪಂಚಾಯಿತಿಯ ಸಾಮಾಜಿಕ ಜಮಾಬಂದಿ ಸಭೆಯ ಅರಿವಿಲ್ಲದೇ ಇರುವುದು ಕಂಡುಬಂದಿದೆ. ಕೆಲವು ಕುಟುಂಬಗಳಲ್ಲಿ ಅರಿವಿದ್ದರೂ ತಮ್ಮ ಕುಟುಂಬದ ಅಭಿವೃದ್ಧಿಗೆ ಅದರ ಅವಶ್ಯಕತೆ ಇಲ್ಲವೆಂದು ಸಾಮಾಜಿಕ ಜಮಾಬಂದಿ ಸಭೆಯಿಂದ ದೂರ ಉಳಿದಿದ್ದಾರೆ. ಮಧ್ಯಮಗಾತ್ರದ ಕುಟುಂಬಗಳು ಎರಡೂ ರೀತಿಯ ಕೆಲಸಗಳಲ್ಲಿ ತೊಡಗಿಕೊಂಡಿವೆ. ಗ್ರಾಮದ ಹೊಲಗಳಲ್ಲಿ ಕೃಷಿ ಮತ್ತು ಪಕ್ಕದ ಜಿಂದಾಲ್ ಕಾರ್ಖಾನೆಯಲ್ಲಿ ಕಾರ್ಮಿಕರಾಗಿ ಕೆಲಸಕ್ಕೆ ಹೋಗುವುದು ಅಥವಾ ಇತರೆ ಕರಕುಶಲ ಕೆಲಸಗಳಲ್ಲಿ ತೊಡಗಿಸಿಕೊಂಡಿರುವುದರಿಂದ ಪಂಚಾಯಿತಿ ಜಮಾಬಂದಿ ಸಭೆಯ ಬಗ್ಗೆ ಅರಿವಿದ್ದರೂ ಭಾಗವಹಿಸಲು ಸಮಯಾವಕಾಶ ಇರುವುದಿಲ್ಲ.

ಚಿಕ್ಕಗಾತ್ರದ ಕುಟುಂಬಗಳು ದಿನದ ಕೆಲಸದಲ್ಲಿ ತೊಡಗಿಸಿಕೊಂಡು ಗ್ರಾಮಪಂಚಾಯಿತಿ ಸಭೆಗಳ ಬಗ್ಗೆ ಅರಿವಿದ್ದರೂ ಗ್ರಾಮಪಂಚಾಯಿತಿ ಸದಸ್ಯರಲ್ಲಿ ಅಪನಂಬಿಕೆಯನ್ನು ಹೊಂದಿವೆ. ಚಿಕ್ಕ ಕುಟುಂಬಗಳಲ್ಲಿ ಕಡಿಮೆ ಆದಾಯ ಹೊಂದಿರುವವರು ಕೂಲಿಕೆಲಸದಲ್ಲಿ ನಿರತರಾದರೆ ಮಧ್ಯಮ ಮತ್ತು ಉತ್ತಮ ಆದಾಯ ಹೊಂದಿರುವ ಕುಟುಂಬಗಳು ತಮ್ಮ ಅವಶ್ಯಕತೆಗಳನ್ನು ತಾವು ತಮ್ಮ ಶಕ್ತ್ಯಾನುಸಾರವಾಗಿ ಪಡೆದುಕೊಳ್ಳುತ್ತೇವೆ ಎಂದು ಉತ್ತರಿಸುತ್ತಾರೆ.

**ಉತ್ತಮ ಆದಾಯ ಹೊಂದಿರುವ ಕುಟುಂಬಗಳು:** ಉತ್ತಮ ಆದಾಯ ಹೊಂದಿರುವ ಕುಟುಂಬಗಳು ಜಿಂದಾಲ್ ಕಾರ್ಖಾನೆಯಲ್ಲಿ ಗುತ್ತಿಗೆದಾರರಾಗಿ ತೊಡಗಿಸಿಕೊಂಡಿದ್ದಾರೆ. ಹೆಚ್ಚು ಭೂಮಿ ಹೊಂದಿರು ವವರು ಪಂಪ್‌ಸೆಟ್ ಮೂಲಕ ನೀರು ಪಡೆದು ಕೃಷಿಯಲ್ಲಿ ತೊಡಗಿಸಿಕೊಂಡಿದ್ದೇವೆ. ಇವು ಗ್ರಾಮದ

ಹಲವು ಜನರಿಗೆ ಕೆಲಸ ನೀಡುವಂಥ ಕುಟುಂಬಗಳಾಗಿದ್ದು ಸಾಮಾಜಿಕ ಸ್ಥಿತಿಯು ಗ್ರಾಮದಲ್ಲಿ ಉನ್ನತವಾಗಿರುವುದರಿಂದ ಗ್ರಾಮಪಂಚಾಯಿತಿಯ ಅಧಿಕಾರಿಗಳಿಂದ ಮತ್ತು ಅಧ್ಯಕ್ಷರಿಂದ ತಮಗೆ ಬೇಕಾದ ಕೆಲಸಗಳನ್ನು ಮಾಡಿಸಿಕೊಳ್ಳುತ್ತಾರೆ. ಈ ಕುಟುಂಬಗಳು ಗ್ರಾಮಪಂಚಾಯಿತಿಗಳಿಗೆ ಹೆಚ್ಚು ಹೋಗುವುದಿಲ್ಲ. ಗ್ರಾಮಸಭೆಗಳಿಗೆ ಮತ್ತು ಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಗಳಲ್ಲಿ ಇಂತಹ ಕುಟುಂಬಗಳು ಭಾಗವಹಿಸುವುದಿಲ್ಲ.

ಮಧ್ಯಮ ಆದಾಯ ಹೊಂದಿರುವ ಕುಟುಂಬಗಳು ಗ್ರಾಮಪಂಚಾಯಿತಿಯಿಂದ ಜನತಾ ಮನೆ ಮತ್ತು ತಮಗೆ ಬೇಕಾದ ಇತರೆ ಸೌಲಭ್ಯಗಳನ್ನು ಪಡೆದಿವೆ. ಅಂತಹ ಕುಟುಂಬಗಳು ಗ್ರಾಮ ಸಭೆಗಳಲ್ಲಿ ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿಸುವುದಿಲ್ಲ. ಭಾಗವಹಿಸಿದರೂ ತಮಗೆ ಯಾವ ಅವಕಾಶಗಳು ಸಿಗುತ್ತವೆ ಎಂದು ತಿಳಿದುಕೊಂಡು ಮಾತನಾಡದೆ ಸುಮ್ಮನಿರುತ್ತಾರೆ. ಪಂಚಾಯಿತಿ ಗಳಿಂದ ಬರಬೇಕಾದ ಸೌಲಭ್ಯಗಳು ಸಿಗದೇ ಇರುವ ಕೆಲವು ಕುಟುಂಬಗಳು ಗ್ರಾಮಸಭೆಗಳಿಗೆ ಮತ್ತು ಪಂಚಾಯಿತಿ ಜಮಾಬಂದಿ ಸಭೆಗೆ ಹೋಗಿ ಅಧಿಕಾರಿಗಳನ್ನು, ಪಂಚಾಯಿತಿ ಸದಸ್ಯರನ್ನು ಸಂಪರ್ಕಿಸುವುದರ ಮೂಲಕ ತಮಗೆ ಬೇಕಾದ ಸೌಲಭ್ಯಗಳನ್ನು ಪಡೆಯುತ್ತಾರೆ. ಮತ್ತೆ ಕೆಲವು ಕುಟುಂಬಗಳು, ಅಧಿಕಾರಿಗಳು ಮತ್ತು ಪಂಚಾಯಿತಿ ಸಭೆಗಳಲ್ಲಿ ಸೇರಿಕೊಂಡು ಮಾಡುತ್ತಾರೆ. ಅಲ್ಲಿ ಎಲ್ಲರಿಗೂ ಅವಕಾಶಗಳು ಸಿಗುವುದಿಲ್ಲ. ಸಭೆಯಲ್ಲಿ ಭಾಗವಹಿಸುವುದು ವ್ಯರ್ಥ ಎಂಬ ಭಾವನೆಯನ್ನು ಹೊಂದಿರುವುದು ಈ ಗ್ರಾಮದಲ್ಲಿ ಕಂಡುಬಂದಿದೆ.

ಬಡ ಕುಟುಂಬಗಳು ಗ್ರಾಮಪಂಚಾಯಿತಿಗಳಲ್ಲಿ ನಂಬಿಕೆ ಹೊಂದಿರುವುದಿಲ್ಲ. ಕೆಲವು ಕುಟುಂಬಗಳು ದಿನಗೂಲಿಗೆ ಹೋಗಿ ಬರುವ ಹೊತ್ತಿಗೆ ಸಂಜೆಯಾಗಿರುತ್ತದೆ. 'ನಾವು ಭಾಗವಹಿಸುವುದಕ್ಕೆ ಸಾಧ್ಯವಿಲ್ಲ. ಒಂದು ವೇಳೆ ಭಾಗವಹಿಸದಿದ್ದರೆ ನಮಗೆ ತಿಳಿಯುವುದಿಲ್ಲ. ಗ್ರಾಮಪಂಚಾಯಿತಿ ಸಭೆಗಳಲ್ಲಿ ಶ್ರೀಮಂತ ಕುಟುಂಬಗಳಿಗೆ ಆದ್ಯತೆ ಇರುತ್ತದೆ. ನಮಗೆ ಆದ್ಯತೆ ನೀಡುವುದಿಲ್ಲ. ಹೆಚ್ಚು ಜನರು ಇದ್ದರೆ ನಮ್ಮ ಮಾತನ್ನು ಕೇಳುತ್ತಾರೆ. ಪಂಚಾಯಿತಿಯವರು ನೀಡುವ ಸೌಲಭ್ಯಗಳನ್ನು ಪಡೆಯಲು ನಾವು ಹಲವಾರು ದಿನಗಳು ತಿರುಗಬೇಕು. ಅದರಿಂದ ನಮ್ಮ ದಿನಗೂಲಿ ಕೆಲಸದ ಹಣ ಕಳೆದುಕೊಳ್ಳಬೇಕೆಂಬ ಕಾರಣದಿಂದ' ಗ್ರಾಮಸಭೆಗಳಲ್ಲಿ ಭಾಗವಹಿಸುವುದಿಲ್ಲ. ಸಾಮಾಜಿಕ ಜಮಾಬಂದಿ ಸಭೆ ಬಗ್ಗೆ ಬಹುಪಾಲು ಕುಟುಂಬಗಳಿಗೆ ತಿಳಿಯದೇ ಇರುವುದು ಕಂಡುಬಂದಿತ್ತು.

**ಸಾಮಾಜಿಕ ವರ್ಗಗಳ ಆಯಾಮಗಳ ಕಾರಣಗಳು:** ಪರಿಶಿಷ್ಟ ಜಾತಿ ಜನರು ಪ್ರತ್ಯೇಕ ಬೀದಿಯಲ್ಲಿದ್ದಾರೆ. ಈ ಜನರಲ್ಲಿ ಕಡಿಮೆ ಶಿಕ್ಷಣ ಹೊಂದಿರುವ ಸಂಖ್ಯೆ ಹೆಚ್ಚಾಗಿದೆ. ಪರಿಶಿಷ್ಟ ಜಾತಿಯ ಜನರ ಸಾಮಾಜಿಕ ಅಂತಸ್ತು ಕಡಿಮೆಯಾಗಿರುವುದು ಕಂಡುಬಂದಿದೆ. ಇವರು ಗ್ರಾಮಪಂಚಾಯಿತಿಗೆ ಭೇಟಿ ನೀಡುವುದು ಕಡಿಮೆ. ತಮ್ಮ ಬೀದಿಗಳಿಗೆ ಬೇಕಾದ ಸೌಲಭ್ಯಗಳನ್ನು ಹೋರಾಟ ಮಾಡುವುದರ

ಮೂಲಕ ಪಡೆಯುವುದನ್ನು ಗಮನಿಸಬಹುದು. ಗ್ರಾಮಪಂಚಾಯಿತಿ ಮತ್ತು ಸಾಮಾಜಿಕ ಅರಿವು ಹೊಂದಿರುವ ಕುಟುಂಬಗಳು ಪಂಚಾಯಿತಿ ಸೌಲಭ್ಯಗಳನ್ನು ಪಡೆಯಲು ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿಸುವುದನ್ನು ನೋಡಬಹುದು. ಮತ್ತೆ ಹಲವಾರು ಕುಟುಂಬಗಳು ಡ್ರೈವಿಂಗ್, ಕೂಲಿ, ಕಾರ್ಖಾನೆ ಕಾರ್ಮಿಕರಾಗಿ ದುಡಿಯುತ್ತಿದ್ದು, ಇವರಲ್ಲಿ ಬಹುಪಾಲು ಜನರು ಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯ ಬಗ್ಗೆ ಅರಿವಿಲ್ಲದೆ ಇದ್ದಾರೆ. ಅವರ ಕುಟುಂಬಗಳ ಭಾಗವಹಿಸುವಿಕೆ ತೀರಾ ಕಡಿಮೆ ಇರುವುದು ಕಂಡುಬಂದಿದೆ.

ಪರಿಶಿಷ್ಟ ಪಂಗಡ ಜನರ ಸ್ಥಿತಿ ಪರಿಶಿಷ್ಟ ಜಾತಿ ಜನರ ಸಾಮಾಜಿಕ ಸ್ಥಿತಿಯಂತೆಯೇ ಇದೆ. ಇವರಲ್ಲಿ ಭೂಮಿಯನ್ನು ಹೊಂದಿರುವವರು ಹೆಚ್ಚಾಗಿದ್ದಾರೆ. ಆದರೆ ಇವರ ಜನಸಂಖ್ಯೆ ಈ ಗ್ರಾಮದಲ್ಲಿ ಕಡಿಮೆ ಇದೆ. ಇವರ ಆರ್ಥಿಕ ಸ್ಥಿತಿ ಸ್ವಲ್ಪ ಸುಧಾರಿಸಿದ್ದು ಕುಟುಂಬಗಳು ಗ್ರಾಮಪಂಚಾಯಿತಿ ಸಭೆಗಳಲ್ಲಿ ಮತ್ತು ಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿ ಸುತ್ತಿರುವುದನ್ನು ಈ ಗ್ರಾಮದಲ್ಲಿ ಗಮನಿಸಬಹುದಾಗಿದೆ. ಇವರು ಸಭೆಯಲ್ಲಿ ಭಾಗವಹಿಸದೇ ಇರುವುದಕ್ಕೆ ಶಿಕ್ಷಣದ ಕೊರತೆಯೇ ಕಾರಣವಾಗಿದೆ. ಜೊತೆಗೆ ಸಾಮಾಜಿಕ ಅರಿವು ಇಲ್ಲದಿರುವುದು ಮತ್ತು ವ್ಯಾಪಾರ ಮತ್ತು ಕೂಲಿಗಳಿಗೆ ಹೆಚ್ಚು ನಗರಪ್ರದೇಶಗಳಿಗೆ ಹೋಗಿರುವುದರಿಂದ ಹೆಚ್ಚಾಗಿ ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿಸುವುದಿಲ್ಲ.

**ಹಿಂದುಳಿದ ವರ್ಗ ಆಯಾಮಗಳ ಕಾರಣ:** ಹಿಂದುಳಿದ ವರ್ಗಗಳಲ್ಲಿ ಹೆಚ್ಚು ಭೂಮಿ ಇರುವುದು ಕಂಡುಬಂದಿದೆ. ಸಾಮಾಜಿಕ ಜಮಾಬಂದಿಯ ಸಭೆ ಮತ್ತು ಗ್ರಾಮಸಭೆಗಳಲ್ಲಿ ಇವರ ಭಾಗವಹಿಸುವಿಕೆ ಉತ್ತಮವಾಗಿರುತ್ತದೆ. ಸ್ಥಳೀಯವಾಗಿ ಕೃಷಿಯಲ್ಲಿ ತೊಡಗಿಸಿಕೊಂಡಿರುವ ಬಹುಪಾಲು ಕುಟುಂಬಗಳು ಗ್ರಾಮದಲ್ಲಿ ಇರುವುದರಿಂದ ಸಭೆಗಳಲ್ಲಿ ಹೆಚ್ಚಾಗಿ ಭಾಗವಹಿಸುತ್ತಾರೆ. ಸಣ್ಣ ವ್ಯಾಪಾರಗಳು ಮತ್ತು ಕೃಷಿಯಾಧಾರಿತ ಕೆಲಸಗಳಲ್ಲಿ ತೊಡಗಿಕೊಂಡಿರುವ ಕುಟುಂಬಗಳು ತಮ್ಮ ಕೆಲಸದಲ್ಲಿ ನಿರತರಾಗಿರುತ್ತಾರೆ. ಆದ್ದರಿಂದ ಇವರು ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿಸುವುದಿಲ್ಲ. ಉನ್ನತ ವಿದ್ಯಾಭ್ಯಾಸ ಹೊಂದಿರುವ ಕುಟುಂಬಗಳು ಸರ್ಕಾರಿ ಮತ್ತು ಖಾಸಗಿ ಕಂಪನಿಗಳಲ್ಲಿ ಉದ್ಯೋಗ ಪಡೆದಿರುವುದರಿಂದ ಹಿಂದುಳಿದ ಕುಟುಂಬಗಳು ಹೆಚ್ಚು ಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿ ಸುವುದಿಲ್ಲ.

## ಮಲಪನಗುಡಿ ಗ್ರಾಮಪಂಚಾಯಿತಿ ಸಾಮಾಜಿಕ ಆಯಾಮಗಳಿಗೆ ಕಾರಣಗಳು

ಈ ಗ್ರಾಮದಲ್ಲಿ ದೊಡ್ಡ ಗಾತ್ರದ ಕುಟುಂಬಗಳು ಮತ್ತು ಹೆಚ್ಚು ಶಿಕ್ಷಣ ಹೊಂದಿರುವ ಕುಟುಂಬಗಳು ಹೊಸಪೇಟೆ ನಗರದಲ್ಲಿ ವ್ಯಾಪಾರಗಳಲ್ಲಿ ತೊಡಗಿಕೊಂಡಿವೆ. ಹಲವು ಕುಟುಂಬಗಳು ಹೆಚ್ಚು ಭೂಮಿ ಹೊಂದಿದ್ದು, ಕೃಷಿಯಲ್ಲಿ ಮತ್ತು ಕೃಷಿ ಆಧಾರಿತ ವ್ಯಾಪಾರಗಳಲ್ಲಿ ತೊಡಗಿಸಿ

ಕೊಂಡಿದ್ದಾರೆ. ಇವು ರಾಜಕೀಯ ಅಧಿಕಾರ ಪಡೆಯುವಲ್ಲಿ ಮುಂದಿವೆ. ದೊಡ್ಡ ಗಾತ್ರದ ಕುಟುಂಬಗಳು ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸಿರುವುದು ಕಂಡುಬಂದಿದೆ. ಕೆಲವು ಕುಟುಂಬಗಳು ಭಾಗವಹಿಸದೇ ಇರಲು ಬಹುಪಾಲು ಜನರು ಕೃಷಿಯಲ್ಲಿ ತೊಡಗಿಸಿಕೊಂಡಿರುವುದು ಕಾರಣವಾಗಿದೆ. ಇಲ್ಲಿ ಪ್ರೌಢಶಿಕ್ಷಣಕ್ಕೆ ಸೀಮಿತಗೊಳಿಸಿರುವವರು ಹೆಚ್ಚಾಗಿದ್ದು, ಅವರಿಗೆ ಕೃಷಿ ಮತ್ತು ಕೃಷಿಯೇತರ ಚಟುವಟಿಕೆಗಳಲ್ಲಿ ತೊಡಗಿರುವುದರಿಂದ ಸಾಮಾಜಿಕ ಅರಿವಿಲ್ಲದಿರುವುದು ಮತ್ತು ರಾಜಕೀಯದಿಂದ ದೂರ ಉಳಿದಿರುವುದು ಕಾರಣವಾಗಿದೆ.

ಚಿಕ್ಕ ಗಾತ್ರದ ಕುಟುಂಬಗಳ ಜನ ಗ್ರಾಮ ರಾಜಕೀಯದಿಂದ ಬಹುಪಾಲು ದೂರವಿರುತ್ತಾರೆ. ಇವರಲ್ಲಿ ತಮ್ಮ ವಾರ್ಡಿನ ಸದಸ್ಯರ ಬಗ್ಗೆ ಅರಿವಿರುವುದಿಲ್ಲ. ಇವರು ತಮ್ಮ ದುಡಿಮೆಯಲ್ಲಿದ್ದು ಕುಟುಂಬದ ನಿರ್ವಹಣೆಯಲ್ಲಿ ನಿರತರಾಗಿರುತ್ತಾರೆ. ಬೇರೆ ಕೆಲಸಕ್ಕೆ ಹೋಗುವುದರ ಮೂಲಕ ಚಿಕ್ಕ ಕುಟುಂಬಗಳು ತಮ್ಮ ಕೌಟುಂಬಿಕ ಚೌಕಟ್ಟನ್ನು ಮೀರಿ ಹೊರಬರುವುದಿಲ್ಲ. ಒಂದೇ ವೇಳೆ ಬಂದರೂ ತಮ್ಮ ಕೆಲಸಕ್ಕೆ ಸಂಬಂಧಿಸಿದ ಗ್ರಾಮಪಂಚಾಯಿತಿ ಕಚೇರಿಗೆ ಬರುತ್ತಾರೆ. ಅಧಿಕಾರಿ ಸಿಬ್ಬಂದಿಗಳಿಗೆ ಹಣ ನೀಡಿ ಕೆಲಸ ಮಾಡಿಸಿಕೊಳ್ಳುವುದನ್ನು ಈ ಗ್ರಾಮದಲ್ಲಿ ಗಮನಿಸಬಹುದು.

ಮಧ್ಯಮಗಾತ್ರದ ಕುಟುಂಬಗಳಲ್ಲಿ ಕೆಲವರು ರಾಜಕೀಯ ಸದಸ್ಯರಾಗಿದ್ದಾರೆ. ಇವರು ಹೆಚ್ಚು ಗ್ರಾಮಪಂಚಾಯಿತಿ ಸಭೆಯ ಅರಿವು ಹೊಂದಿರುತ್ತಾರೆ ಮತ್ತು ಸಭೆಗಳಲ್ಲಿ ಭಾಗವಹಿಸುತ್ತಾರೆ. ಗ್ರಾಮಪಂಚಾಯಿತಿ ಸಭೆಯಲ್ಲಿ ನಡೆಯುವ ಸಂಘರ್ಷಗಳ ಕಾರಣಗಳಿಂದ ಕೆಲವು ಕುಟುಂಬಗಳು ಸಮಯ ವ್ಯರ್ಥವೆಂದು ಕೆಲವರು ಹೇಳಿದರೆ, ಗ್ರಾಮಪಂಚಾಯಿತಿಯಲ್ಲಿ ನಮ್ಮ ಸಮುದಾಯದವರು ಹೆಚ್ಚಾಗಿದ್ದಾರೆ. ಅವರು ಮಾಡುವುದೆಲ್ಲ ನಮಗೆ ಗೊತ್ತು. ನಾವು ಅದಕ್ಕೆ ಹೋಗುವುದಿಲ್ಲ; ಒಂದು ವೇಳೆ ಹೋದರೂ ನಾಮಮಾತ್ರಕ್ಕೆ ಗ್ರಾಮಸಭೆಗಳು ನಡೆಯುತ್ತವೆ. ಅಲ್ಲಿಯ ನಿರ್ಣಯಗಳು ಕಾರ್ಯಾಚರಣೆಗೆ ಬರುವುದು ಕಷ್ಟ! ಯಾರು ಪ್ರಭಾವ ವ್ಯಕ್ತಿ ಇರುತ್ತಾರೋ ಅವರದೇ ಕೆಲಸ ನಡೆಯುತ್ತದೆ ಎಂದು ಅಭಿಪ್ರಾಯಪಡುತ್ತಾರೆ.

### ವರಮಾನದ ಆಯಾಮಗಳ ಕಾರಣಗಳು

ಉನ್ನತ ಆದಾಯವಿರುವ ಕೆಲವು ಕುಟುಂಬಗಳು ಈ ಗ್ರಾಮಪಂಚಾಯಿತಿಯಲ್ಲಿ ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿಸದೇ ಇರುವುದಕ್ಕೆ ಕಾರಣ ಕುಟುಂಬಗಳಲ್ಲಿ ಸಾಮಾಜಿಕ ಜಮಾಬಂದಿ ಸಭೆಯ ಅರಿವಿಲ್ಲದಿರುವುದು ಕಾರಣವಾಗಿದೆ. ಉನ್ನತ ಆದಾಯ ಹೊಂದಿರುವ ಕುಟುಂಬಗಳಲ್ಲಿ ಆರ್ಥಿಕ ಕೊರತೆಯಿರುವುದಿಲ್ಲ. ತಮಗೆ ಬೇಕಾದ ಸೌಲಭ್ಯಗಳನ್ನು ಪಡೆಯುವ ಶಕ್ತಿ ಹೊಂದಿರುವುದರಿಂದ ಗ್ರಾಮಪಂಚಾಯಿತಿಯಲ್ಲಿರುವ ಶ್ರೀಮಂತ ಕುಟುಂಬಗಳು ನಗರ ಪ್ರದೇಶಗಳ

ರೀತಿಯಲ್ಲಿ ಜೀವನ ನಡೆಸುವುದರಿಂದ ಇಂತಹ ಕುಟುಂಬಗಳು ಗ್ರಾಮಪಂಚಾಯಿತಿ ಕಚೇರಿಗಳಿಗೆ ಮತ್ತು ಸಾಮಾಜಿಕ ಜಮಾಬಂದಿ ಸಭೆಗಳಲ್ಲಿ ಭಾಗವಹಿಸುವುದಿಲ್ಲ.

ಮಧ್ಯಮ ಆದಾಯ ಹೊಂದಿರುವ ಕುಟುಂಬಗಳಲ್ಲಿ ಸಾಮಾಜಿಕ ಜಮಾಬಂದಿ ಸಭೆಯ ಬಗ್ಗೆ ಅರಿವಿರುವುದಿಲ್ಲ. ಇವರಿಗೆ ಶಿಕ್ಷಣದ ಕೊರತೆ ಮತ್ತು ಸಾಮಾಜಿಕ ಅರಿವಿಲ್ಲದಿರುವುದು ಕಾರಣವಾಗಿದೆ. ಮಧ್ಯಮಗಾತ್ರದ ಕುಟುಂಬಗಳಲ್ಲಿ ರಾಜಕೀಯದ ಅರಿವಿದ್ದು ಈ ಕುಟುಂಬಗಳಲ್ಲಿ ರಾಜಕೀಯ ಪೈಪೋಟಿ ಇರುವುದರಿಂದ ಒಂದು ಕುಟುಂಬದ ರಾಜಕೀಯದ ಪರವಾಗಿದ್ದರೆ, ಕೆಲವು ಕುಟುಂಬಗಳಲ್ಲಿ ರಾಜಕೀಯ ಸಂಘರ್ಷ ಉಂಟಾಗುವಂತಹ ಸಮಸ್ಯೆಗಳಿಂದ ದೂರವಿಡಲು ಗ್ರಾಮಪಂಚಾಯಿತಿ ಸಭೆಗಳಲ್ಲಿ ಭಾಗವಹಿಸುವುದಲ್ಲಿರುವುದು ಕಂಡುಬರುತ್ತದೆ.

ಕಡಿಮೆ ಆದಾಯ ಹೊಂದಿರುವ ಕುಟುಂಬಗಳು ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿಸುವಿಕೆಯಿಂದ ದೂರವಿದ್ದಾರೆ. ಈ ಪಂಚಾಯಿತಿಗಳಲ್ಲಿ ಕಡಿಮೆ ಆದಾಯ ಹೊಂದಿರುವ ಕೂಲಿ ಕಾರ್ಮಿಕರು ಹೊಲ ಗದ್ದೆಗಳಿಗೆ ಕೂಲಿ ಕೆಲಸಕ್ಕೆ ಹೋಗುವುದರಿಂದ ಸಾಮಾನ್ಯವಾಗಿ ಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿಸುವುದಿಲ್ಲ. ಅದಕ್ಕೆ ಅವರಲ್ಲಿರುವ ಶಿಕ್ಷಣದ ಕೊರತೆ ಒಂದು ಕಾರಣವಾದರೆ ಕುಟುಂಬದ ಎಲ್ಲರೂ ದುಡಿಯುವಲ್ಲಿ ನಿರತರಾಗಿರುವುದು ಮುಖ್ಯ ಕಾರಣವಾಗಿದೆ. ಅದು ಕಡಿಮೆ ಆದಾಯ ನೀಡುವಂತಹ ಕೆಲಸಗಳಾಗಿದ್ದು ದುಡಿಮೆಯಲ್ಲಿ ನಿರತರಾಗಿರುತ್ತಾರೆ. ಗ್ರಾಮಪಂಚಾಯಿತಿಗಳಲ್ಲಿ ಸಾಮಾಜಿಕ ಜಮಾಬಂದಿ ಸಭೆ ಸಕ್ರಿಯವಾಗಿ ನಡೆಸಬೇಕಾದರೆ ಬಡವರ ಭಾಗವಹಿಸುವಿಕೆ ಅವಶ್ಯಕವಾಗಿರುತ್ತದೆ.

ಅಧ್ಯಾಯ ಆರು

# ಸಮಾರೋಪ

ಈ ಅಧ್ಯಯನವು ಉದ್ದೇಶಗಳನ್ನು ಈಡೇರಿಸುವಂತಹ ನಿಟ್ಟಿನಲ್ಲಿ ಕ್ರಮಾನುಸಾರವಾಗಿ ಪೂರ್ಣಗೊಳಿಸಲಾಗಿದೆ. ಈ ಅಧ್ಯಯನವು ಆರು ಅಧ್ಯಾಯಗಳನ್ನು ಒಳಗೊಂಡಿದೆ. ಪ್ರತಿಯೊಂದು ಅಧ್ಯಾಯವು ಅಧ್ಯಯನಕ್ಕೆ ಮಹತ್ವಪೂರ್ಣವಾಗಿ ಕಂಡುಬರುತ್ತದೆ. ಪ್ರಸ್ತಾವನೆಯು ಮೊದಲನೆಯ ಅಧ್ಯಾಯವಾಗಿದೆ. ಮೊದಲ ಅಧ್ಯಾಯದಲ್ಲಿ ಅಧ್ಯಯನದ ಸ್ವರೂಪವನ್ನು ವಿವರವಾಗಿ ವಿಶ್ಲೇಷಿಸಿ ಈಗಾಗಲೇ ಆಗಿರುವ ಅಧ್ಯಯನಗಳು ನೀಡಿರುವ ಫಲಿತಗಳನ್ನು ಆಧರಿಸಿಕೊಂಡು ಅಧ್ಯಯನ ನಡೆದಿದೆ. ಎರಡನೆಯ ಅಧ್ಯಾಯದಲ್ಲಿ ಅಧ್ಯಯನದ ಕ್ಷೇತ್ರಕಾರ್ಯ ಪರಿಚಯ ಮಾಡಲಾಗಿದೆ. ನಂತರ ಮೂರನೆಯ ಅಧ್ಯಾಯದಲ್ಲಿ ಪಂಚಾಯಿತಿ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಕುರಿತಾದ ಸಂಪೂರ್ಣ ಮಾಹಿತಿಯನ್ನು ಈ ಅಧ್ಯಾಯದಲ್ಲಿ ತರಲಾಗಿದೆ. ಅದರ ಜೊತೆಯಲ್ಲಿ ಮಾಹಿತಿ ಹಕ್ಕು ಅಧಿನಿಯಮದ ಉಪಯುಕ್ತಕತೆಗಳನ್ನು ಚರ್ಚಿಸಲಾಗಿದೆ. ನಾಲ್ಕನೆಯ ಅಧ್ಯಾಯದಲ್ಲಿ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುವ ಗ್ರಾಮಪಂಚಾಯಿತಿಗಳಲ್ಲಿ ಸಾಮಾಜಿಕ ಜಮಾಬಂದಿ ಗ್ರಾಮಸಭೆ ಹೇಗೆ ಅನುಷ್ಠಾನಗೊಳ್ಳುತ್ತದೆ ಎಂಬುದರ ಕುರಿತು ಪಂಚಾಯಿತಿ ಸಾಮಾಜಿಕ ಜಮಾಬಂದಿ ದಾಖಲೆಗಳನ್ನು ಆಧರಿಸಿಕೊಂಡ ಯಾವ ಗ್ರಾಮಪಂಚಾಯಿತಿಗಳು ಸಕ್ರಿಯವಾಗಿ ನಡೆಯುತ್ತಿದೆ ಎಂಬುದನ್ನು ಚರ್ಚಿಸಲಾಗಿದೆ. ಐದನೆಯ ಅಧ್ಯಾಯದ ಗ್ರಾಮೀಣ ಭಾಗದ ವಿವಿಧ ಸಾಮಾಜಿಕ ವರ್ಗಗಳಿಗೆ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಅರಿವು ಎಷ್ಟು ಮುಖ್ಯ ಎಂಬುದನ್ನು ವಿಶ್ಲೇಷಿಸಲಾಗಿದೆ. ಗ್ರಾಮಸಭೆಯಲ್ಲಿ ಗ್ರಾಮಸ್ಥರ ಭಾಗವಹಿಸುವಿಕೆಯನ್ನು ಕ್ಷೇತ್ರಕಾರ್ಯದಲ್ಲಿ ಸಂಗ್ರಹಿಸಿದ ಅಂಶಗಳನ್ನು ಆಧರಿಸಿಕೊಂಡು ಚರ್ಚಿಸಲಾಗಿದೆ. ಗ್ರಾಮಸ್ಥರು ಎಷ್ಟರ ಮಟ್ಟಿಗೆ ಸಾಮಾಜಿಕ ಜಮಾಬಂಧಿ ಗ್ರಾಮಸಭೆಯಲ್ಲಿ ಭಾಗವಹಿಸಿದ್ದಾರೆ ಮತ್ತು ಅದರ ಫಲಿತಗಳನ್ನು ಎಷ್ಟು ಜನರು ಅನುಭವಿಸಲಾಗಿದೆ ಎಂಬ ಅಂಶಗಳನ್ನು ಚರ್ಚಿಸಲಾಗಿದೆ. ಆರನೆಯ ಅಧ್ಯಾಯದಲ್ಲಿ ಸಾಮಾಜಿಕ ಜಮಾಬಂಧಿ ಗ್ರಾಮಸಭೆಯ ಅನುಷ್ಠಾನದಲ್ಲಿ ಉಂಟಾಗುವ ತೊಂದರೆಗಳನ್ನು ಕುರಿತು ಚರ್ಚಿಸಲಾಗಿದೆ. ಈ

ಅಧ್ಯಾಯದಲ್ಲಿ ಕಂಡುಬಂದಿರುವ ವಿಷಯಗಳನ್ನು ಆಧರಿಸಿಕೊಂಡು ಸಮಾರೋಪ ಭಾಗದಲ್ಲಿ ಅಧ್ಯಯನದ ಫಲಿತಗಳನ್ನು ತಿಳಿದುಕೊಳ್ಳಲಾಗಿದೆ.

ಹಕ್ಕು ಮತ್ತು ಅಭಿವೃದ್ಧಿಗೆ ನಿಕಟ ಸಂಬಂಧವಿರುವುದು ಕಂಡುಬರುತ್ತದೆ. ೧೯೮೬ರ ಯು.ಎನ್.ಒ. ಸಾಮಾನ್ಯ ಸಭೆಯಲ್ಲಿ ಅಭಿವೃದ್ಧಿ ಘೋಷಣೆಯ ಮೂಲಕ ಪರಿಚ್ಛೇದದಲ್ಲಿ ಅಭಿವೃದ್ಧಿ ಹಕ್ಕನ್ನು ಈ ರೀತಿಯಾಗಿ ಅರ್ಥೈಸಿದೆ. ಅಭಿವೃದ್ಧಿ ಹಕ್ಕು ಎಂಬುದು ಪ್ರತ್ಯೇಕಗೊಳಿಸಲಾದ ಹಕ್ಕಾಗಿರುವುದರಿಂದ ಅದರ ಆಧಾರದಲ್ಲಿ ಪ್ರತಿಯೊಬ್ಬರಿಗೂ ಆರ್ಥಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ರಾಜಕೀಯ ಅಭಿವೃದ್ಧಿಯಲ್ಲಿ ಭಾಗವಹಿಸುವ, ಅದಕ್ಕೆ ಕಾಣಿಕೆ ನೀಡುವ ಮತ್ತು ಅದನ್ನು ಅನುಭವಿಸುವ ಹಕ್ಕುದಾರರಾಗಿರುತ್ತಾರೆ. ಅಲ್ಲಿ ಎಲ್ಲ ಮಾನವ ಹಕ್ಕುಗಳನ್ನು ಮತ್ತು ಎಲ್ಲ ಮೂಲಭೂತ ಸ್ವಾತಂತ್ರ್ಯಗಳನ್ನು ಸಂಪೂರ್ಣವಾಗಿ ಸಾಧಿಸಿಕೊಳ್ಳಬಹುದು.

ಅಭಿವೃದ್ಧಿ ಮತ್ತು ಮಾನವ ಹಕ್ಕಿಗೆ ಸಂಬಂಧಿಸಿದಂತೆ ಮೂರು ಸಂಗತಿಗಳನ್ನು ವಿವರಿಸಿದ್ದಾರೆ. ಅಭಿವೃದ್ಧಿಯಲ್ಲಿ ಜನರು ಸಹಭಾಗಿಗಳಾಗಿರುವ ಹಕ್ಕು, ಅದಕ್ಕೆ ಕೊಡುಗೆ ನೀಡುವ ಹಕ್ಕು, ಅಭಿವೃದ್ಧಿ ಫಲವನ್ನು ಅನುಭವಿಸುವ ಹಕ್ಕು ಅಭಿವೃದ್ಧಿಯಾಗಿದೆ. ಸಾರ್ವಜನಿಕರು ಹಕ್ಕುಗಳನ್ನು ಪಡೆದುಕೊಳ್ಳಲು ಯಾವುದೇ ಅಡ್ಡಿಯಿಲ್ಲದಂತೆ ನೋಡಿಕೊಳ್ಳುವುದು ಸಮಾಜದ ಮತ್ತು ಸರ್ಕಾರದ ಜವಾಬುದಾರಿ. ಹಕ್ಕುಗಳು ಚಲಾವಣೆಯಾಗದಂತೆ ತಡೆಯುವ ಶಕ್ತಿಗಳನ್ನು ಸರ್ಕಾರ ನಿಗ್ರಹಿಸಬೇಕಾಗುತ್ತದೆ. ಅಭಿವೃದ್ಧಿಯ ಫಲವನ್ನು ಜನರು ಸಮಾನವಾಗಿ ಅನುಭವಿಸುತ್ತಿದ್ದಾರೋ ಇಲ್ಲವೋ ಎಂಬುದು ಮುಖ್ಯವಾಗಿರುತ್ತದೆ (ಟಿ.ಆರ್.ಚಂದ್ರಶೇಖರ).

ಅಭಿವೃದ್ಧಿಯು ಪ್ರತಿಯೊಂದು ಸಮುದಾಯಗಳ ಮತ್ತು ಸಮಾಜಗಳ ಮೂಲಮಂತ್ರವಾಗಿದೆ. ಅಭಿವೃದ್ಧಿಯು ಏಕಾಏಕಿ ಸಿಗುವ ವಸ್ತುವಲ್ಲ. ಅಭಿವೃದ್ಧಿ ಮಾನವನ ನಿರಂತರ ಪ್ರಯತ್ನಗಳಿಂದ, ಹೋರಾಟಗಳಿಂದ ಸಿಗುವಂತಹ ಫಲವಾಗಿದೆ. ಅಭಿವೃದ್ಧಿ ಪರಿಕಲ್ಪನೆ ಮತ್ತು ಪರಿಭಾಷೆಗಳು ಕಾಲಕಾಲಕ್ಕೆ ಬದಲಾವಣೆ ಹೊಂದುತ್ತಿರುತ್ತವೆ. ಅಭಿವೃದ್ಧಿ ಪರಿಭಾಷೆಯು ಒಂದು ಸಿಮೀತ ಅರ್ಥವನ್ನು ಹೊಂದಿರುವುದಿಲ್ಲ. ಮಾನವನ ಸಮಗ್ರವಾದ ಅಭಿವೃದ್ಧಿ ಎಂದರೆ ರಾಜಕೀಯ, ಆರ್ಥಿಕ, ಸಾಮಾಜಿಕ, ಕ್ಷೇತ್ರಗಳಲ್ಲಿ ಒಳಗೊಳ್ಳುವಂತಹ ಅಭಿವೃದ್ಧಿಯೆಂದು ಪರಿಭಾವಿಸಿಕೊಳ್ಳಲಾಗಿದೆ.

ಅಮರ್ತ್ಯಸೇನ್ ಅವರು ಅಭಿವೃದ್ಧಿಯೆಂದರೆ ರಾಷ್ಟ್ರದ ಪ್ರಜೆಗಳು ಅಥವಾ ನಾಗರಿಕರು ತಮಗೆ ಬೇಕಾದ ವೃತ್ತಿಯನ್ನು ಮತ್ತು ಗೌರವವಾಗಿ ಜೀವಿಸಲು ಬೇಕಾದ ಆರೋಗ್ಯ, ಶಿಕ್ಷಣ, ಆರ್ಥಿಕ ಸಂಪನ್ಮೂಲಗಳನ್ನು ಪಡೆಯುವ ಸ್ವಾತಂತ್ರ್ಯವನ್ನು ಅಭಿವೃದ್ಧಿಯೆಂದು ವ್ಯಾಖ್ಯಾನಿಸಿದ್ದಾರೆ. ಭಾರತವು ಅಭಿವೃದ್ಧಿ ಹೊಂದುತ್ತಿರುವ ದೇಶಗಳ ಪಟ್ಟಿಯಲ್ಲಿದ್ದು, ಹಲವಾರು ಸಾಮಾಜಿಕ ಸಮಸ್ಯೆ ಗಳನ್ನು ಎದುರಿಸುತ್ತಿದೆ. ರಾಷ್ಟ್ರದಲ್ಲಿ ಎಲ್ಲ ಸಮುದಾಯಗಳು ಜಾತಿ, ಜನಾಂಗಗಳು ಸಮಾನ

ಅವಕಾಶಗಳನ್ನು ಸಾಂವಿಧಾನಿಕವಾಗಿ ಹೊಂದಿದ್ದಾರೆ. ಸಮಾಜದ ಎಲ್ಲರಿಗೆ ಸಮಾನ ಅವಕಾಶಗಳು ಸಿಗದೇ ಇರುವುದು ಕಂಡುಬಂದಿದೆ. ಪ್ರತಿ ಸಮಾಜದಲ್ಲಿಯೂ ಅಸಮಾನತೆಗಳನ್ನು ಗುರುತಿಸಬಹುದು. ದೇಶದಲ್ಲಿ ಹಲವಾರು ಅಸಮಾನತೆಗಳನ್ನು ಗುರುತಿಸಬಹುದು. ಲಿಂಗ ಅಸಮಾನತೆ, ಧರ್ಮ ಅಸಮಾನತೆ, ಜಾತಿ ಅಸಮಾನತೆ, ವರ್ಗ ಅಸಮಾನತೆ, ಆರ್ಥಿಕ ಅಸಮಾನತೆ, ರಾಜಕೀಯ ಅಸಮಾನತೆ, ನಗರ ಮತ್ತು ಗ್ರಾಮಿಣ ಪ್ರದೇಶಗಳ ಅಸಮಾನತೆ, ಅಭಿವೃದ್ಧಿ ಅಸಮಾನತೆಗಳನ್ನು ಹೀಗೆ ಹಲವಾರು ಅಸಮಾನತೆಗಳು ಕಂಡುಬರುತ್ತಿವೆ.

ಈ ಅಸಮಾನತೆಯು ಕುಟುಂಬಗಳನ್ನು, ಸಮುದಾಯಗಳನ್ನು ಇನ್ನೂ ಹೆಚ್ಚು ಅಸಮಾನತೆಗೆ ತಳ್ಳುತ್ತವೆ. ಗ್ರಾಮೀಣ ಪ್ರದೇಶಗಳನ್ನು ನಗರಪ್ರದೇಶಗಳಿಗೆ ಹೋಲಿಸಿ ನೋಡಿದರೆ ಈ ಅಸಮಾನತೆ ತಿಳಿಯುತ್ತದೆ. ಆರ್ಥಿಕ ಸಂಪನ್ಮೂಲಗಳ ಕೊರತೆ ನಾಗರಿಕರಲ್ಲಿ ಪ್ರಜ್ಞೆಯ ಕೊರತೆ ಮತ್ತು ವಿಜ್ಞಾನ-ತಂತ್ರಜ್ಞಾನದ ಕೊರತೆಗಳು ಹೀಗೆ ಹಲವು ಅಂಶಗಳು ಕಂಡುಬರುತ್ತವೆ. ಗ್ರಾಮೀಣ ಭಾಗಗಳಲ್ಲಿ ಗ್ರಾಮೀಣಾಭಿವೃದ್ಧಿ ಯೋಜನೆಗಳು, ಅಭಿವೃದ್ಧಿ ಫಲಗಳು ಅಸಮಾನ ಹಂಚಿಕೆಯಾಗುತ್ತಿರುವುದು ಹಲವು ಅಧ್ಯಯನಗಳಿಂದ ತಿಳಿದುಬಂದಿದೆ. ಗ್ರಾಮೀಣ ಪ್ರದೇಶಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಸಮುದಾಯಗಳು ಮತ್ತು ಸಾಮಾಜಿಕ, ಆರ್ಥಿಕ ಮತ್ತು ರಾಜಕೀಯವಾಗಿ ಹಿಂದುಳಿದಿರುವ ಜಾತಿ ಮತ್ತು ಸಮುದಾಯಗಳು ಹಿಂದುಳಿದಿರುವುದಕ್ಕೆ ಅವರಲ್ಲಿ ಅನಕ್ಷರಸ್ಥತೆ, ಆರೋಗ್ಯದ ಕೊರತೆ, ಆರ್ಥಿಕ ಸಂಪನ್ಮೂಲಗಳ ಕೊರತೆ ಇವೆಲ್ಲ ಅಂಶಗಳು ಕಾರಣವಾಗಿರುವಂತೆ ಹಲವಾರು ಅಧ್ಯಯನಗಳು ಸಾಬೀತುಪಡಿಸುತ್ತವೆ. ಈ ಸಾಮಾಜಿಕ ಅಸಮಾನತೆ ಉಂಟಾಗಲು ಮತ್ತು ಈ ಎಲ್ಲ ಸಮುದಾಯಗಳು ಹಿಂದುಳಿದಿರುವುದಕ್ಕೆ ಗ್ರಾಮೀಣ ಜನರಲ್ಲಿ ತಮ್ಮ ಹಕ್ಕಿನ ಪ್ರಾಮುಖ್ಯತೆ ಕುರಿತು ಜ್ಞಾನ ಇಲ್ಲದಿರುವುದು ಪ್ರಧಾನ ಕಾರಣವೆಂದು ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ. ಗ್ರಾಮೀಣ ಜನರಲ್ಲದೆ ನಗರಪ್ರದೇಶಗಳಲ್ಲಿಯೂ ಮಾನವ ಹಕ್ಕುಗಳ ಕುರಿತು ಜ್ಞಾನ ಇಲ್ಲದಿರುವ ಜನರು ಕಂಡುಬರುತ್ತಾರೆ. ಪ್ರತಿದಿನ ವ್ಯಕ್ತಿ ಜೀವನದಲ್ಲಿ ಹಲವರು ತಮ್ಮ ಹಕ್ಕುಗಳನ್ನು ತಮಗೆ ಅರಿವಿಲ್ಲದೆ ಮತ್ತು ಅರಿವಿದ್ದವರೂ ಅಸಡ್ಡೆಯಿಂದ ಬಳಕೆ ಮಾಡಿಕೊಳ್ಳದಿರುವುದು ಕಂಡುಬರುತ್ತದೆ.

ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿಯ ಸಾಮಾಜಿಕ ಆಯಾಮಗಳನ್ನು ಅಧ್ಯಯನ ಮಾಡಲು ಮೂರು ಮುಖ್ಯ ಉದ್ದೇಶಗಳನ್ನು ಇಟ್ಟುಕೊಂಡು ಬಳ್ಳಾರಿ ಜಿಲ್ಲೆಯಲ್ಲಿನ ಬಳ್ಳಾರಿ ತಾಲ್ಲೂಕಿನಲ್ಲಿ ಸಂಗನಕಲ್ಲು, ಮೋಕಾ ಮತ್ತು ಹೊಸಪೇಟೆ ತಾಲ್ಲೂಕಿನ ಪಾಪಿನಾಯಕನಹಳ್ಳಿ, ಮಲಪನಗುಡಿ ಗ್ರಾಮಗಳಲ್ಲಿ ವಿವಿಧ ಸಾಮಾಜಿಕ ವರ್ಗಗಳು, ವಿವಿಧ ಸಮುದಾಯಗಳು ಎಷ್ಟು

ಪಂಚಾಯಿತಿ ಸಾಮಾಜಿಕ ಜಮಾಬಂದಿ ಗ್ರಾಮಸಭೆಗಳಲ್ಲಿ ಭಾಗವಹಿಸಿ ಸಭೆಯ ಉಪಯುಕ್ತತೆಯನ್ನು ಪಡೆದಿದ್ದಾರೆ ಎಂದು ನೋಡಿದಾಗ ಕ್ಷೇತ್ರಕಾರ್ಯದಲ್ಲಿ ಹಲವಾರು ಅಂಶಗಳು ತಿಳಿದುಬಂದವು.

ಕ್ಷೇತ್ರಕಾರ್ಯದಲ್ಲಿ ಪಡೆದ ಮಾಹಿತಿಗಳನ್ನು ವಿಂಗಡಿಸಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ. ಈ ಮಾಹಿತಿ ಪ್ರಕಾರ ಗ್ರಾಮೀಣ ಜನರಲ್ಲಿ ಕೇಂದ್ರ ಸರ್ಕಾರ ಜಾರಿಗೆ ತಂದಿರುವ ಮಾಹಿತಿ ಹಕ್ಕು ಕುರಿತು ಕಡಿಮೆ ಪ್ರಮಾಣದಲ್ಲಿ ಅರಿವಿದೆ. ಮಾಹಿತಿ ಹಕ್ಕು ಎಂದರೆ ಏನು ಮತ್ತು ಅದರ ಸ್ವರೂಪದ ಕುರಿತು ಜನರಲ್ಲಿ ನಿಖರವಾದ ಮಾಹಿತಿ ಇಲ್ಲದಿರುವುದು ಕಂಡುಬಂದಿದೆ. ಇದು ಆರ್ಥಿಕವಾಗಿ ಮತ್ತು ಸಾಮಾಜಿಕವಾಗಿ ಮುಂದುವರಿದ ಸಮುದಾಯಗಳಲ್ಲಿಯೂ ಈ ಮಾಹಿತಿ ಹಕ್ಕಿನ ಜ್ಞಾನ ಇಲ್ಲದಿರುವುದು ಕಂಡುಬಂದಿದೆ. ಅಲ್ಲದೆ ಈ ಗ್ರಾಮಗಳಲ್ಲಿರುವ ವಿದ್ಯಾವಂತ ಯುವಕರಿಗೂ ಮಾಹಿತಿ ಹಕ್ಕು ಕುರಿತಾದ ನಿಖರವಾದ ಅರಿವು ಇಲ್ಲದಿರುವುದು ಕಂಡುಬಂದಿದೆ. ಮೊದಲನೇ ತಲೆಮಾರಿನ ಜನರಲ್ಲಿ ಮಾಹಿತಿ ಹಕ್ಕು ಮತ್ತು ಇತರೆ ಸಾಮಾನ್ಯ ಹಕ್ಕುಗಳ ಕುರಿತು ಅರಿವು ಇಲ್ಲದಿರುವುದು ಕಂಡುಬಂದಿದೆ. ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ, ಹಿಂದುಳಿದ ಸಮುದಾಯಗಳ ಜನರಲ್ಲಿ ಮಾಹಿತಿ ಹಕ್ಕಿನ ಅರಿವು ತೀರಾ ಕಡಿಮೆ ಇದೆ. ಅದಕ್ಕೆ ಕಾರಣ ಅವರಲ್ಲಿರುವ ಶಿಕ್ಷಣದ ಕೊರತೆ ಮತ್ತು ಆರೋಗ್ಯ, ಆರ್ಥಿಕ ಕೊರತೆಗಳಷ್ಟೇ ಆಗಿರದೆ ಅವರ ಕೊರತೆಗಳು ಸಮಾಜೀಕರಣಗೊಳ್ಳದಿರುವುದು ಪ್ರಧಾನ ಕಾರಣವಾಗುತ್ತದೆ. ಅವರ ಸಾಮಾಜಿಕ ಸ್ಥಾನಮಾನಗಳಲ್ಲಿ ಹೆಚ್ಚಿನ ಬದಲಾವಣೆಯಾಗದಿರುವುದು ಕಂಡುಬರುತ್ತದೆ. ಇವರುಗಳಲ್ಲಿ ಆರ್ಥಿಕ ಸಂಪನ್ಮೂಲಗಳು ಇಲ್ಲದಿರುವುದು ಮತ್ತು ಆರ್ಥಿಕ ಸಂಪನ್ಮೂಲಗಳನ್ನು ಸೃಷ್ಟಿಸಿಕೊಳ್ಳಲು ಮುಕ್ತ ಅವಕಾಶಗಳು ಇಲ್ಲದಿರುವುದು ಕಂಡುಬಂದಿದೆ.

ಗ್ರಾಮಪಂಚಾಯಿತಿಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಹಿಂದುಳಿದ ಸಮುದಾಯಗಳ ಜನರಲ್ಲಿ ಮಾಹಿತಿ ಹಕ್ಕಿನ ಅರಿವಿನ ಕೊರತೆ ಮತ್ತು ಅವರು ಗ್ರಾಮಪಂಚಾಯಿತಿಯಲ್ಲಿ ನಡೆಯುವ ಸಾಮಾಜಿಕ ಜಮಾಬಂದಿ ಗ್ರಾಮಸಭೆಯ ಅರಿವು ತೀರಾ ಕಡಿಮೆ ಬಹುಪಾಲು ಜನರು ಸಾಮಾಜಿಕ ಜಮಾಬಂದಿಯೆಂದರೆ ಏನು ಎಂದು ಕೇಳಿರುವ ಸಂದರ್ಭಗಳಿವೆ. ಅಧ್ಯಯನಕ್ಕೆ ಆಯ್ದುಕೊಂಡ ಗ್ರಾಮಪಂಚಾಯಿತಿಗಳಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಕುಟುಂಬಗಳು ಗ್ರಾಮಗಳಲ್ಲಿದ್ದು ಈ ಗ್ರಾಮಗಳಲ್ಲಿ ತಳ ಸಮುದಾಯಗಳು ಎಂದು ಗುರುತಿಸಲಾದ ಈ ಸಮುದಾಯಗಳಲ್ಲಿ ಕಡಿಮೆ ಸಾಕ್ಷರತೆ ಇರುವುದು ಕಂಡುಬಂದಿದೆ. ಈ ಗ್ರಾಮಗಳಲ್ಲಿ ಪರಿಶಿಷ್ಟ ಸಮುದಾಯಗಳಲ್ಲಿ ಮತ್ತು ಹಿಂದುಳಿದ ವರ್ಗಗಳ ಸಮುದಾಯಗಳಲ್ಲಿ ಭೂಮಿ ಇಲ್ಲದಿರುವುದು ಮತ್ತು ತೀರಾ ಕಡಿಮೆ ಇರುವುದರಿಂದ ಜನರು ತಮ್ಮ ಹಕ್ಕು ಪಡೆಯುವಲ್ಲಿ ಅಸಮರ್ಥರಾಗಿದ್ದಾರೆ.

ಈ ಗ್ರಾಮಗಳಲ್ಲಿ ಸಾಕ್ಷರತೆ ಕಡಿಮೆ ಇರುವುದಕ್ಕೆ ಗ್ರಾಮಗಳಲ್ಲಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಹಿಂದುಳಿದ ಸಮುದಾಯಗಳ ಕೌಟುಂಬಿಕ ಸ್ಥಿತಿಗಳು ಪ್ರಮುಖವಾಗಿ ಕಾರಣವಾಗಿವೆ. ಇವರ ಕುಟುಂಬಗಳಲ್ಲಿ ಬಹುಪಾಲು ಜನರು ಕೂಲಿಕೆಲಸ ಮಾಡಿ ದಿನದ ಊಟವನ್ನು ಪಡೆಯು ವಂತಹ ಕುಟುಂಬಗಳು ಹೆಚ್ಚು. ಇಂತಹ ಕುಟುಂಬಗಳಲ್ಲಿ ಕಾರ್ಮಿಕರ ಸಂಖ್ಯೆ ಹೆಚ್ಚಾಗಿದ್ದು ಅವರು ಜೀವನದಲ್ಲಿ ಕೂಲಿಕೆಲಸ ಮಾಡುವುದು ತಪ್ಪಿದ್ದಲ್ಲ. ಹಾಗಾಗಿ ಓದುವುದರ ಅವಶಕತೆಯಿಲ್ಲ ಎಂದು ಭಾವಿಸಿಕೊಂಡು ಕೂಲಿಕಾರ್ಮಿಕರು ಶಾಲೆಯನ್ನು ಬಿಡಿಸಿ ಕೂಲಿಕೆಲಸಕ್ಕೆ ಕಳುಹಿಸುತ್ತಾರೆ. ಶಿಕ್ಷಣದಿಂದ ನೇರ ಮತ್ತು ಶೀಘ್ರವಾದ ಬದಲಾವಣೆ ತಮ್ಮ ಕುಟುಂಬಗಳಲ್ಲಿ ಕಂಡುಬರದೆ ಇರುವುದರ ಕಾರಣ ಶಿಕ್ಷಣಕ್ಕೆ ಹೆಚ್ಚಿನ ಆದ್ಯತೆ ಇಲ್ಲದಿರುವುದು ಕಂಡುಬಂದಿದೆ.

ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಮತ್ತು ಹಿಂದುಳಿದ ಕುಟುಂಬಗಳಿಗೆ ಸ್ಥಳೀಯ ಸಮುದಾಯಗಳಿಂದ ಒತ್ತಡಕ್ಕೆ ಸಿಲುಕುವುದರಿಂದ ತುಳಿತಕ್ಕೆ ಒಳಗಾಗಿರುವ ಸಮುದಾಯಗಳು ಇತರೆ ಸಮುದಾಯಗಳ ಮಾದರಿಯಲ್ಲಿ ಅಸಮಾನತೆಯಿಂದ ಹೊರಬಂದು ತಮ್ಮ ಅಭಿವೃದ್ಧಿಗೆ ಬೇಕಾದ ಸೌಲಭ್ಯಗಳನ್ನು ಪಡೆಯಲು ಸಾಧ್ಯವಾಗುತ್ತಿಲ್ಲ. ಸರ್ಕಾರಗಳು ಈ ಸಮುದಾಯಗಳ ಅಭಿವೃದ್ಧಿಗೆ ಹಲವಾರು ಯೋಜನೆಗಳನ್ನು ಜಾರಿಗೆ ತರುತ್ತಿದೆ. ಅದರೆ ಈ ಯೋಜನೆಗಳ ಉಪಯೋಗ ಪಡೆಯಲು ತಳಸಮುದಾಯಗಳು ಸಫಲರಾಗಿಲ್ಲ. ಅದಕ್ಕೆ ಅವರಲ್ಲಿ ಅರಿವಿನ ಕೊರತೆ ಮತ್ತು ಅವರಲ್ಲಿ ಗ್ರಾಮಪಂಚಾಯಿತಿಗಳ ಮೇಲೆ ನಂಬಿಕೆ ಇಲ್ಲದಿರುವುದು ಕಂಡುಬಂದಿದೆ. ಗ್ರಾಮಪಂಚಾಯಿತಿ ಕಚೇರಿಗೆ ತಮಗೆ ಯಾವುದೇ ಸಂಬಂಧವಿಲ್ಲದಂತೆ ಇರುವುದು ಕಂಡುಬಂದಿದೆ. ಗ್ರಾಮಪಂಚಾಯಿತಿ ಗ್ರಾಮಸಭೆಗಳಲ್ಲಿ ಗ್ರಾಮಸ್ಥರು ಭಾಗವಹಿಸದೇ ಇರುವುದು ಕಂಡುಬಂದಿದೆ. ಗ್ರಾಮಸಭೆಯಂದರೆ ಗ್ರಾಮಪಂಚಾಯಿತಿ ಸಿಬ್ಬಂದಿಯವರು ಮಾಡಿಕೊಳ್ಳುವ ಸಭೆ ಎಂದು ಪರಿಭಾವಿಸಿಕೊಂಡಿರುವುದು ಕಂಡುಬಂದಿದೆ. ಗ್ರಾಮಸಭೆಯಲ್ಲಿ ಗಲಭೆಗಳು ನಡೆಯುತ್ತವೆ ಎಂದು ಕೆಲವರು ಹೋಗುವುದಿಲ್ಲ ಎಂದು ಹೇಳುತ್ತಾರೆ. ಕೆಲವರು ತಮ್ಮ ಜಾತಿಯವರು ಅಧ್ಯಕ್ಷರು ಇದ್ದಾರೆ, ಅವರು ನಮ್ಮ ಕೆಲಸಗಳನ್ನು ಮಾಡಿಕೊಡುತ್ತಾರೆ ಮತ್ತೇಕೆ ಗ್ರಾಮಸಭೆಗಳಿಗೆ ಹೋಗುವುದೆಂದು ಹೇಳಿಕೆಗಳನ್ನು ನೀಡುತ್ತಾರೆ.

ಗ್ರಾಮಗಳಲ್ಲಿ ಎಲ್ಲ ಸಮುದಾಯಗಳಿಗೆ ಮುಕ್ತವಾಗಿ ಹಕ್ಕುಗಳನ್ನು ವಿನಿಯೋಗಿಸಿಕೊಂಡು ಅಭಿವೃದ್ಧಿ ಹೊಂದುವಂತಹ ಅವಕಾಶವನ್ನು ಕಲ್ಪಿಸುವುದು ಸರ್ಕಾರದ ಜವಾಬ್ದಾರಿಯಾಗಿದೆ. ಸ್ಥಳೀಯ ಸಮುದಾಯಗಳಿಗೆ ಮತ್ತು ಎಲ್ಲಾ ಸಮುದಾಯಗಳಿಗೆ ಅಭಿವೃದ್ಧಿ ಅವಕಾಶ ಕಲ್ಪಿಸುವುದು ಅವಶ್ಯಕವಾಗಿದೆ.

## ಅಧ್ಯಯನದ ಫಲಿತಗಳು

* ಬಳ್ಳಾರಿ ಜಿಲ್ಲೆಯಲ್ಲಿ ಸಾಮಾಜಿಕ ಜಮಾಬಂದಿ ಗ್ರಾಮಸಭೆಗಳು ನಡೆದಿರುವುದು ತಿಳಿದುಬಂದಿದೆ. ಆದರೆ ನಿರೀಕ್ಷಿಸಿದ ಮಟ್ಟದ ಯಶಸ್ಸು ಕಾಣಲಿಲ್ಲ. ಅದಕ್ಕೆ ಕಾರಣ ಸಾಮಾಜಿಕ ಜಮಾಬಂದಿ ಸಭೆಯ ಕುರಿತು ವಿವಿಧ ಮಾದರಿಗಳ ಪ್ರಚಾರದ ಕೊರತೆಯು ಸಾಮಾಜಿಕ ಜಮಾಬಂದಿ ಯಶಸ್ವಿಯಾಗದಿರಲು ಕಾರಣವಾಗಿದೆ.

* ಗ್ರಾಮಪಂಚಾಯಿತಿಯಲ್ಲಿ ಖಾಯಂ ಸಿಬ್ಬಂದಿಯ ಕೊರತೆಯಿದೆ. ಒಬ್ಬ ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗೆ ಎರಡು ಅಥವಾ ಮೂರು ಗ್ರಾಮಪಂಚಾಯಿತಿಗಳ ಕಾರ್ಯನಿರ್ವಹಣೆ ಹೊಣೆಗಾರಿಕೆ ನೀಡಿರುವುದು. ದೊಡ್ಡ ಗ್ರಾಮಪಂಚಾಯಿತಿಗಳಲ್ಲಿ ಸಿಬ್ಬಂದಿ ಕಡಿಮೆ ಇದ್ದು ಸಕಾಲಕ್ಕೆ ಸಾಮಾಜಿಕ ಜಮಾಬಂದಿ ಸಭೆಯನ್ನು ಆಯೋಜಿಸಲು ಸಾಧ್ಯವಾಗುವುದಿಲ್ಲ.

* ವರ್ಷಕ್ಕೆ ಒಂದು ಬಾರಿ ಅಥವಾ ಒಂದು ಸಾರಿ ಸಾಮಾಜಿಕ ಜಮಾಬಂದಿಯನ್ನು ನಡೆಸುವುದರಿಂದ ಇಡೀ ವರ್ಷದ ಎಲ್ಲ ಯೋಜನೆಗಳ ಕಾಮಗಾರಿಗಳ ಗುಣಮಟ್ಟಗಳನ್ನು ಪರಿಶೀಲಿಸಲು ಸಾಧ್ಯವಾಗುವುದಿಲ್ಲ.

* ಜನರಲ್ಲಿನ ಪೂರ್ವಕಲ್ಪನೆಗಳಿಂದ ಸಾಮಾಜಿಕ ಜಮಾಬಂಧಿ ಸಭೆಯಲ್ಲಿ ಭಾಗವಹಿಸದೇ ಇರುವುದು ಮತ್ತು ಗ್ರಾಮೀಣ ಸಮಾಜದಲ್ಲಿ ವಿವಿಧ ಸಾಮಾಜಿಕ ವರ್ಗಗಳಲ್ಲಿ ಹೊಂದಾಣಿಕೆ ಇಲ್ಲದಿರುವುದು ಯಶಸ್ವಿಯಾಗದಿರಲು ಕಾರಣಗಳಾಗಿವೆ.

* ಸಾಮಾಜಿಕ ಜಮಾಬಂದಿ ತಂಡದವರಿಗೆ ಸೇವಾಭದ್ರತೆಯಿಲ್ಲದೆ ಇರುವುದರಿಂದ ತಂಡದಲ್ಲಿರುವ ಸಿಬ್ಬಂದಿಯವರು ದಾಖಲೆಗಳ ಕುರಿತು ಹೆಚ್ಚಿನ ಚರ್ಚೆಗೆ ಮತ್ತು ಕ್ರಮಕ್ಕೆ ಅಧಿಕಾರಿಯಿಲ್ಲದೆ ಇರುವುದು.

* ಗ್ರಾಮೀಣ ಸಮಾಜದಲ್ಲಿ ದೊಡ್ಡಗಾತ್ರದ ಕುಟುಂಬಗಳು ಹೆಚ್ಚು ಸಾಮಾಜಿಕ ಕಾರ್ಯ ಚಟುವಟಿಕೆಗಳಲ್ಲಿ ಭಾಗವಹಿಸಿದ್ದು ಮಧ್ಯಮಗಾತ್ರದ ಕುಟುಂಬಗಳು ಬಹುಪಾಲು ದುಡಿಮೆಯಲ್ಲಿ ನಿರತರಾಗಿವೆ. ಗ್ರಾಮಪಂಚಾಯಿತಿಯ ಸಭೆಗಳಲ್ಲಿ ಸಮಯವಿದ್ದಾಗ ಮಾತ್ರ ಭಾಗವಹಿಸುವುದನ್ನು ಗಮನಿಸಬಹುದಾಗಿದೆ. ಅದೇ ರೀತಿಯಲ್ಲಿ ಸಾಮಾನ್ಯವಾಗಿ ಚಿಕ್ಕ ಗಾತ್ರದ ಕುಟುಂಬಗಳಲ್ಲಿ ರಾಜಕೀಯ ಭಾಗಿತ್ವ ಮತ್ತು ಗ್ರಾಮಸಭೆಗಳಲ್ಲಿ ಪಂಚಾಯಿತಿಗಳಿಗೆ ತಮ್ಮ ಅವಶ್ಯಕತೆ ಇದ್ದಾಗ ಬಂದು ಮಾಡಿಸಿಕೊಳ್ಳುತ್ತಾರೆ. ಸಾರ್ವಜನಿಕವಾಗಿ ತಮ್ಮ ಪ್ರಾತಿನಿಧಿತ್ವ ಹೊಂದದೇ ತಮ್ಮ ದುಡಿಮೆ-ಕುಟುಂಬದ ನಿರ್ವಹಣೆಯಲ್ಲಿ ನಿರತರಾಗಿರುತ್ತಾರೆ. ಹಾಗಾಗಿ ಗ್ರಾಮಪಂಚಾಯಿತಿಯ "ಗ್ರಾಮಸಭೆಗಳಲ್ಲಿ, ಪಂಚಾಯಿತಿ ಸಾಮಾಜಿಕ ಜಮಾಬಂದಿ

ಸಭೆಯಲ್ಲಾಗಲಿ ದೊಡ್ಡ ಗಾತ್ರದ ಕುಟುಂಬಗಳು ಹೆಚ್ಚು ಭಾಗವಹಿಸುತ್ತಿದ್ದುದು ಕಂಡುಬಂದಿದೆ. ಕುಟುಂಬದ ಸದಸ್ಯರು ಹೆಚ್ಚಾಗಿದ್ದು ಪ್ರತಿಯೊಂದು ಕೆಲಸಗಳಲ್ಲಿ ಒಬ್ಬರಿಗೊಬ್ಬರು ಸಹಾಯ ಮಾಡುವುದರಿಂದ ಸಮಯ ಉಳಿತಾಯವಾಗುತ್ತದೆ. ಆದ್ದರಿಂದ ಆರ್ಥಿಕ ಸಂಪನ್ಮೂಲವು ಹೆಚ್ಚು ಶೇಖರಣೆಯಾಗು ವುದರಿಂದ ದೊಡ್ಡ ಗಾತ್ರ ಕುಟುಂಬಗಳ ಪಂಚಾಯಿತಿ ಜಮಾಬಂದಿ ಸಭೆಯಲ್ಲಿ ಭಾಗವಹಿಸುವಿಕೆ ಪರಿಣಾಮಕಾರಿಯಾಗಿರುತ್ತದೆ.

* ಗ್ರಾಮೀಣ ಸಮಾಜದಲ್ಲಿ ಸಾಮಾಜಿಕ ವರ್ಗಾನುಸಾರವಾಗಿ ಸಾಮಾಜಿಕ ಅಂತಸ್ತಿದ್ದು ಮಾನ್ಯತೆಗಳು ಸಮಾಜದ ಎಲ್ಲಾ ಕಾರ್ಯಚಟುವಟಿಕೆಗಳಲ್ಲಿ ಅದರ ಪ್ರಭಾವ ಪರಿಣಾಮಕಾರಿಯಾಗಿರುತ್ತದೆ. ಸಾಮಾನ್ಯ ವಿದ್ಯಾವಂತರು ಹೆಚ್ಚಾಗಿರುವ ಸಮಾಜಗಳಲ್ಲಿ ಗ್ರಾಮಪಂಚಾಯಿತಿ ಜಮಾಬಂದಿ ಭಾಗಿತ್ವ ಹೆಚ್ಚಾಗಿರಬೇಕು. ಆದರೆ ಬದಲಾಗಿ ಸ್ಥಳೀಯವಾಗಿ ಪ್ರಬಲವಾಗಿರುವ ಸಾಮಾನ್ಯ ಮತ್ತು ಹಿಂದುಳಿದ ಜಾತಿಯ ಸಮಾಜದ ಜನರ ಭಾಗಿತ್ವ ಹೆಚ್ಚಾಗಿರುತ್ತದೆ. ಪರಿಶಿಷ್ಟ ಜಾತಿಯ ಸಮಾಜದವರನ್ನು ನೋಡುವುದಾದರೆ, ಕೆಲವು ಹೆಚ್ಚು ಸಂಖ್ಯೆ ಬಲ ಹೊಂದಿರುವ ಪ್ರತಿ ಹಳ್ಳಿಯಲ್ಲಿ ಇರುವ ಪರಿಶಿಷ್ಟ ಜಾತಿಯವರು ಗ್ರಾಮಪಂಚಾಯಿತಿ ಜಮಾಬಂದಿ ಸಭೆಯಲ್ಲಿ ಭಾಗವಹಿಸುವಿಕೆ ಸ್ವಲ್ಪ ಉತ್ತಮವಾಗಿದೆ. ಹಲವಾರು ಪಂಚಾಯಿತಿಗಳಲ್ಲಿ ಪರಿಶಿಷ್ಟ ಜಾತಿಯವರ ಭಾಗವಹಿಸುವಿಕೆ ತೀರಾ ಕಡಿಮೆ ಇರುವುದು ಕಂಡು ಬಂದಿದೆ.

* ಹಾಗೆಯೇ ಪರಿಶಿಷ್ಟ ಪಂಗಡದವರಲ್ಲಿ ಹಲವಾರು ಜಾತಿಗಳಿದ್ದು ಗ್ರಾಮಪಂಚಾಯಿತಿ ಗ್ರಾಮ ಸಭೆಗಳಲ್ಲಿ ಮತ್ತು ಪಂಚಾಯಿತಿ ಜಮಾಬಂದಿ ಗ್ರಾಮಸಭೆಯಲ್ಲಿ ಇವರ ಭಾಗವಹಿಸುವಿಕೆ ತೀರಾ ಕಡಿಮೆಯಾಗಿದೆ. ಸ್ಥಳೀಯವಾಗಿ ಸಂಖ್ಯಾಬಲ ಮತ್ತು ರಾಜಕೀಯ ಅಧಿಕಾರ ಹೊಂದಿರುವ ಪರಿಶಿಷ್ಟ ಪಂಗಡದ ಜನರು ಗ್ರಾಮಸಭೆ ಮತ್ತು ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿಸಿ ಬೇಕಾದ ಸೌಲಭ್ಯಗಳನ್ನು ತಮ್ಮ ಪ್ರಾಬಲ್ಯದಿಂದ ಪಡೆದಿದ್ದಾರೆ. ಆದರೂ ಒಟ್ಟಾರೆಯಾಗಿ ಪರಿಶಿಷ್ಟ ಪಂಗಡ ಜನರ 'ಗ್ರಾಮಸಭೆ' ಮತ್ತು ಪಂಚಾಯಿತಿ ಸಾಮಾಜಿಕ ಜಮಾಬಂದಿಯ ಭಾಗವಹಿಸುವಿಕೆ ನಿರೀಕ್ಷಿಸಿದ ಮಟ್ಟದಲ್ಲಿ ಇಲ್ಲವಾಗಿದೆ.

* ಸಾಮಾಜಿಕ ಅಂತಸ್ತಿರುವ ಎಲ್ಲಾ ಸಾಮಾನ್ಯ ಮತ್ತು ಹಿಂದುಳಿದ ಜಾತಿಗಳು ಹೆಚ್ಚು ಗ್ರಾಮಸಭೆ ಮತ್ತು ಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿಸಿ ಉಪಯುಕ್ತತೆಗಳನ್ನು ಪಡೆದಿದ್ದಾರೆ ಎಂದು ಹೇಳಲಾಗುವುದಿಲ್ಲ. ಹಾಗೆಯೇ ಮೀಸಲಾತಿ ಇರುವ ಜಾತಿಯ ಜನರು ತಮ್ಮ ಸಾಮಾಜಿಕ ಅಸಮಾನತೆ ಹೋಗಲಾಡಿಸಲು ಕೇಂದ್ರ ಮತ್ತು ರಾಜ್ಯ ಯೋಜನೆ ಫಲಾನುಭವ ಪಡೆಯುವಲ್ಲಿ ಪಂಚಾಯಿತಿ ಜಮಾಬಂದಿ ಸಭೆಯಿಂದ ಹೆಚ್ಚು ಉಪಯುಕ್ತ ಪಡೆದಿದ್ದಾರೆ ಎಂದು ಹೇಳಲಾಗುವುದಿಲ್ಲ. ಸ್ಥಳೀಯ ಗ್ರಾಮದ ವಾತಾವರಣವನ್ನು

ಆಧರಿಸಿಕೊಂಡು ಗ್ರಾಮೀಣ ಸಮಾಜದಲ್ಲಿ ಬೇರೆ ಬೇರೆ ಜಾತಿಯವರ ಪರಸ್ಪರ ಹೊಂದಾಣಿಕೆಗಳು, ಬೆಂಬಲಗಳು ಹೆಚ್ಚು ಪರಿಣಾಮಕಾರಿಯಾಗಿ ಪ್ರಭಾವ ಬೀರುತ್ತವೆ. ಅದೇ ರೀತಿಯಲ್ಲಿ ಸ್ಥಳೀಯ ಅಧಿಕಾರದಲ್ಲಿರುವ ಮತ್ತು ಹೆಚ್ಚು ಜನಸಂಖ್ಯೆಯನ್ನು ಹೊಂದಿರುವ ಜಾತಿಗಳು ಮತ್ತು ಸಾಮಾಜಿಕ ವರ್ಗಗಳು ಸರ್ಕಾರದ ಯೋಜನೆಗಳನ್ನು ಪಡೆಯುವಲ್ಲಿ ಮುಂದಿರುವುದು ಕಂಡುಬಂದಿದೆ. ಗ್ರಾಮೀಣ ಸಮಾಜಗಳಲ್ಲಿ ಪ್ರಸ್ತುತ ಸ್ಥಿತಿ ತುಂಬ ಬದಲಾಗಿದೆ. ಗ್ರಾಮ ಪಂಚಾಯಿತಿಗಳ ರಾಜಕೀಯದಲ್ಲಿ ಗ್ರಾಮದ ಶ್ರೀಮಂತ ಕುಟುಂಬಗಳು ಭಾಗವಹಿಸುವುದು ಕಡಿಮೆ ಪ್ರಮಾಣದಲ್ಲಿದೆ. ಗ್ರಾಮಮಟ್ಟದ ರಾಜಕೀಯದ ಉತ್ತಮ ಆದಾಯ ಹೊಂದಿರುವ ಕುಟುಂಬಗಳು ಹೆಚ್ಚು ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಗಳಲ್ಲಿ ಭಾಗವಹಿಸುವುದು ತೀರಾ ಕಡಿಮೆ. ಅದಕ್ಕೆ ಅವರಿಗೆ ಗ್ರಾಮ ರಾಜಕೀಯದಲ್ಲಿ ಆಸಕ್ತಿ ಇಲ್ಲದಿರುವುದು ಮತ್ತು ತಮ್ಮ ಆದಾಯಕ್ಕೆ ಸರಿಹೊಂದುವ ಸಂಪನ್ಮೂಲಗಳು ಅಲ್ಲಿ ಇಲ್ಲದಿರುವುದರ ಕಾರಣ ಗ್ರಾಮದ ಶ್ರೀಮಂತ ಕುಟುಂಬಗಳು ಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಗಳಲ್ಲಿ ಭಾಗವಹಿಸುವುದಿಲ್ಲ.

* ಮಧ್ಯಮ ಆದಾಯ ಹೊಂದಿರುವ ಕುಟುಂಬಗಳು ಗ್ರಾಮ ರಾಜಕೀಯದಲ್ಲಿ ಸಕ್ರಿಯವಾಗಿ ಭಾಗವಹಿಸುವುದು ಕಂಡುಬರುತ್ತದೆ. ಅದಕ್ಕೆ ಕಾರಣಗಳು ಹಲವಾರು. ಈ ರೀತಿಯ ಕುಟುಂಬಗಳಿಂದ ಸದಸ್ಯರು ಹೆಚ್ಚು ಆಯ್ಕೆಯಾಗಿ ಗ್ರಾಮಪಂಚಾಯಿತಿಗೆ ಬರುತ್ತಾರೆ. ಈ ಕುಟುಂಬಗಳ ಉಪಸ್ಥಿತಿ ಗ್ರಾಮಪಂಚಾಯಿತಿಯ ಸಾಮಾಜಿಕ ಜಮಾಬಂದಿ ಸಭೆಗಳಲ್ಲಿ ಮತ್ತು ಗ್ರಾಮ ಸಭೆಯಲ್ಲಿ ಹೆಚ್ಚಾಗಿರುತ್ತದೆ. ಇವರು ರಾಜಕೀಯ ಅಧಿಕಾರ ಮತ್ತು ಆದಾಯವನ್ನು ಬಳಸಿಕೊಂಡು ಯೋಜನೆಗಳ ಪ್ರಯೋಜನವನ್ನು ಪಡೆಯುವುದು ಕಂಡುಬಂದಿದೆ. ಹಾಗಾಗಿ ಮಧ್ಯಮ ಆದಾಯ ಹೊಂದಿರುವ ಕುಟುಂಬಗಳು ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯ ಉಪಯುಕ್ತತೆಯನ್ನು ಪಡೆದು ತಮ್ಮ ಅವಶ್ಯಕತೆಗಳನ್ನು ಪೂರೈಸಿಕೊಂಡು ಆದಾಯವನ್ನು ವೃದ್ಧಿಸಿಕೊಂಡಿದ್ದಾರೆ.

* ಕಡಿಮೆ ಆದಾಯ ಹೊಂದಿರುವ ಕುಟುಂಬಗಳಲ್ಲಿ ಸರ್ಕಾರಿ ಯೋಜನೆಗಳ ಬಗ್ಗೆ ಅರಿವು ಇಲ್ಲದಿರುವವರ ಸಂಖ್ಯೆ ಹೆಚ್ಚಾಗಿದೆ. ಇಂತಹ ಕುಟುಂಬಗಳು ಪ್ರತಿದಿನ ದುಡಿದು ದಿನದ ಊಟ ಸಂಪಾದನೆ ಮಾಡುವುದು ಅನಿವಾರ್ಯ. ಪ್ರತಿದಿನ ಕೆಲಸ ಹುಡುಕುವ ಮತ್ತು ಕೆಲಸ ಎಲ್ಲಿದೆ ಎಂದು ಹೋಗುವುದರ ಬಗ್ಗೆ ಚಿಂತಿಸುತ್ತಾರೆ. ಸರ್ಕಾರಿ ಯೋಜನೆಗಳನ್ನು ಪಡೆಯುವುದು ಸುಲಭದ ಮಾತಲ್ಲ ಎಂಬ ಭಾವನೆ ಅವರಲ್ಲಿದೆ. ಅವರಿಗೆ ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯ ಅರಿವು ಯಾರೂ ನೀಡುವುದಿಲ್ಲ. ಅಂದರ ಬಗ್ಗೆ ಗೊತ್ತಿಲ್ಲ ಎಂದು

ಹೇಳುವರ ಸಂಖ್ಯೆ ಹೆಚ್ಚಾಗಿದೆ. ಹಾಗಾಗಿ ಕಡಿಮೆ ಆದಾಯ ಹೊಂದಿರುವ ಕುಟುಂಬಗಳಲ್ಲಿ ಯಾವುದೇ ರೀತಿಯ ಆರ್ಥಿಕ ಸ್ಥಿರತೆ ಇಲ್ಲ. ಇವರು ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿಸಿ ಫಲಾನುಭವಿಗಳಾಗಿ ಉಪಯುಕ್ತತೆ ಪಡೆಯುವಲ್ಲಿ ಹಿಂದುಳಿದಿದ್ದಾರೆ. ಗ್ರಾಮಪಂಚಾಯಿತಿಗಳಲ್ಲಿ ಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿಸುವವರು ಆರ್ಥಿಕ ಸಂಪನ್ಮೂಲ ಹೊಂದಿರುವ ಕುಟುಂಬಗಳೇ ಹೆಚ್ಚಾಗಿರುವುದು ಕಂಡುಬಂದಿದೆ.

* ಪ್ರಸ್ತುತ ಗ್ರಾಮಗಳಲ್ಲಿ ವಿದ್ಯಾವಂತರ ಸಂಖ್ಯೆ ಹೆಚ್ಚಾಗುತ್ತಿದೆ. ಅನಕ್ಷರಸ್ಥರ ಸಂಖ್ಯೆ ಕಡಿಮೆಯಾಗು ತ್ತಿದೆ. ಗ್ರಾಮಪಂಚಾಯಿತಿಯ ಸಾಮಾಜಿಕ ಜಮಾಬಂದಿ ಸಭೆಯ ಬಗ್ಗೆ ಅನಕ್ಷರಸ್ಥರ ಸಾಮಾಜಿಕ ಅರಿವು ಹೆಚ್ಚಾಗಿದೆ. ಆದರೆ ಅವರಲ್ಲಿ ಮಾಹಿತಿಯ ಕೊರತೆಯಿದೆ. ಸಾಮಾನ್ಯ ಅನಕ್ಷರಸ್ಥರ ಕುಟುಂಬಗಳಲ್ಲಿ ಸದಸ್ಯರು ಊರಿನ ಸಮಸ್ಯೆಗಳ ಬಗ್ಗೆ, ಗ್ರಾಮಪಂಚಾಯಿತಿ ಕಾರ್ಯಕ್ರಮಗಳ ಬಗ್ಗೆ ಊರಿನ ಹಿರಿಯರಿಂದ, ಪರಿಚಯಸ್ಥರಿಂದ ಮಾಹಿತಿ ಪಡೆಯುತ್ತಾರೆ. ಆದರೆ ಇವರಿಗೆ ಕಾರ್ಯಕ್ರಮ ನಡೆದ ನಂತರ, ಜಮಾಬಂದಿ ಸಭೆ ನಡೆದ ನಂತರ ಮಾಹಿತಿ ಸಿಗುತ್ತದೆ. ಆದ್ದರಿಂದ ಇವರಲ್ಲಿ ಅರಿವಿನ ಮತ್ತು ಮಾಹಿತಿಯ ಕೊರತೆ ಹೆಚ್ಚು ಕಂಡುಬರುತ್ತದೆ. ಆದರೆ ಇವರಲ್ಲಿ ಪಂಚಾಯಿತಿ ಸಾಮಾಜಿಕ ಜಮಾಬಂದಿಯಲ್ಲಿ ಭಾಗವಹಿಸುವಿಕೆ ಮತ್ತು ಉಪಯುಕ್ತತೆ ಉತ್ತಮವಾಗಿರುತ್ತದೆ.

* ಅಕ್ಷರಸ್ಥ ಕುಟುಂಬಗಳಿಗೆ ಗ್ರಾಮಪಂಚಾಯಿತಿ ಕಚೇರಿಯ ಪೂರ್ಣ ಪ್ರಮಾಣದ ಮಾಹಿತಿ ಇರುವುದಿಲ್ಲ. ತಮ್ಮ ಜ್ಞಾನಕ್ಕೆ ನಿಲುಕಿದಂತೆ ತಮ್ಮದೇ ಪರಿಕಲ್ಪನೆಯಲ್ಲಿ ಗ್ರಾಮಪಂಚಾಯಿತಿ ಸಭೆಗಳನ್ನು ಪರಿಭಾವಿಸಿಕೊಳ್ಳುತ್ತಾರೆ. ಕೆಲವರು ಗ್ರಾಮಸಭೆಗಳಲ್ಲಿ ಚರ್ಚೆಗಳು ಮುಂಚಿತವಾಗಿ ನಿರ್ಧಾರವಾಗಿರುತ್ತವೆ. ನಾಮಕಾವಸ್ಥೆ ಸಭೆ ನಡೆಸುತ್ತಾರೆ. ಆದ್ದರಿಂದ ನಮಗೆ ಯಾವುದೇ ಉಪಯುಕ್ತತೆ ಇಲ್ಲವೆಂದು ಕೆಲವರು ಭಾವಿಸಿಕೊಳ್ಳುತ್ತಾರೆ. ಮತ್ತೆ ಕೆಲವರು ಗ್ರಾಮಸಭೆಗಳಲ್ಲಿ ತಮಗೆ ಅನುಕೂಲ ಸಿಗುತ್ತವೆ ಎಂಬ ಕಾರಣಕ್ಕೆ ಪಂಚಾಯಿತಿ ಜಮಾಬಂದಿ ಸಭೆಗೆ ಭಾಗವಹಿಸಿದರೆ, ಕೆಲವರು ಗ್ರಾಮಪಂಚಾಯಿತಿಯ ಕಾಮಗಾರಿಗಳನ್ನು ಪ್ರಶ್ನಿಸಲು ಮಾತ್ರ ಭಾಗವಹಿಸುತ್ತಾರೆ. ಆದರೂ ಅಕ್ಷರಸ್ಥ ಕುಟುಂಬಗಳ ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯ ಭಾಗವಹಿಸುವಿಕೆ ಉತ್ತಮವಾಗಿರುತ್ತದೆ.

* ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಮಹಿಳೆಯರ ಭಾಗವಹಿಸುವಿಕೆ ತೀರಾ ಕಡಿಮೆ ಇರುವುದು ಕಂಡುಬಂದಿದೆ. ಗ್ರಾಮಪಂಚಾಯಿತಿ ಸದಸ್ಯತ್ವ ಹೊಂದಿರುವ

ಮಹಿಳೆಯರು ಮತ್ತು ಅವರ ಜೊತೆಯಲ್ಲಿ ಕೆಲವರು ಮಹಿಳೆಯರು ಮಾತ್ರ ಭಾಗವಹಿಸುತ್ತಾರೆ. ಆದರೆ ಬಹುಪಾಲು ಮಹಿಳೆಯ ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಭಾಗವಹಿಸಿದರೂ ಅದರಲ್ಲಿ ಪ್ರಶ್ನಿಸದೇ ಕಾಮಗಾರಿಗಳ ಬಗ್ಗೆ ಮೌನವಾಗಿದ್ದು ಹಾಜರಾಗಿ ಬರುವುದು ಕಂಡುಬರುತ್ತವೆ.

* ಸಾರ್ವಜನಿಕವಾಗಿ ಬಹುಪಾಲು ಗ್ರಾಮೀಣ ಮಹಿಳೆಯರಿಗೆ ಗ್ರಾಮಪಂಚಾಯಿತಿ ಕುರಿತು ಅರಿವಿಲ್ಲ. ಅರಿವಿರುವವರಲ್ಲಿ ಗ್ರಾಮಪಂಚಾಯಿತಿ ಸದಸ್ಯತ್ವವಿಲ್ಲ ಮತ್ತು ಕಚೇರಿಯ ಕೆಲಸಗಳಲ್ಲಿ ನಂಬಿಕೆ ಇಲ್ಲದಿರುವುದು ಅಧ್ಯಯನದಿಂದ ಕಂಡುಬಂದಿದೆ.

* ಇಲಾಖೆಯಿಂದ ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ತಂಡಕ್ಕೆ ಕಿಟ್‌ಗಳನ್ನು ಸಕ್ರಿಯವಾಗಿ ನೀಡುವುದು.

* ಕಾಲಕಾಲಕ್ಕೆ ಸರಿಯಾಗಿ ತಾಲ್ಲೂಕು ಪಂಚಾಯಿತಿ ಕಾರ್ಯನಿರ್ವಾಹಕ ಅಧಿಕಾರಿಗಳು ಅಧಿಸೂಚನೆ ಹೊರಡಿಸಬೇಕು.

* ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯ ಬಗ್ಗೆ ಗ್ರಾಮಸ್ಥರಿಗೆ ಎಲ್ಲರಿಗೂ ತಲುಪುವಂತೆ ಪ್ರಚಾರ ಕೈಗೊಳ್ಳದಿರುವುದು ಕಂಡುಬಂದಿದೆ. ಕೆಲವು ಗ್ರಾಮಗಳ ಪರಿಶಿಷ್ಟ ಜಾತಿಯ ಬೀದಿಗಳಲ್ಲಿ ಪ್ರಚಾರ ಮಾಡದೇ ಇರುವುದು.

* ಗ್ರಾಮೀಣ ಸಮಾಜದಲ್ಲಿ ಪರಸ್ಪರ ಸಾಮಾಜಿಕ ಮತ್ತು ಜಾತಿಯ ಹೊಂದಾಣಿಕೆ ಇಲ್ಲದಿರುವುದು.

* ಗ್ರಾಮಪಂಚಾಯಿತಿಗಳ ಮೇಲೆ ಗ್ರಾಮದ ಎಲ್ಲಾ ಸಮಾಜಗಳಿಗೆ ನಂಬಿಕೆ ಇಲ್ಲದಿರುವುದು.

* ಗ್ರಾಮಪಂಚಾಯಿತಿಗಳು ಕೆಲವೇ ಜಾತಿಯವರ ಪ್ರಭಾವಕ್ಕೆ ಒಳಗಾಗಬಾರದು.

**ಸಲಹೆ ಸೂಚನೆಗಳು**

ಅಧ್ಯಯನದ ಕ್ಷೇತ್ರಕಾರ್ಯದಿಂದ ಹೊರಬಂದ ಫಲಿತಗಳನ್ನು ಆಧರಿಸಿಕೊಂಡು ಅಧ್ಯಯನ ವ್ಯಾಪ್ತಿಯನ್ನು ಒಳಪಟ್ಟಂತೆ ಹಲವು ಸಲಹೆ ಸೂಚನೆಗಳನ್ನು ಪಟ್ಟಿ ಮಾಡಲಾಗಿದೆ.

* ಗ್ರಾಮಪಂಚಾಯಿತಿಗಳ ಕಾರ್ಯಚಟುವಟಿಕೆಗಳ ಮೇಲೆ ಜನರಿಗೆ ವಿಶ್ವಾಸವಿರುವಂತೆ ಆಡಳಿತ ವನ್ನು ನಡೆಸಬೇಕು.

* ಗ್ರಾಮಪಂಚಾಯಿತಿಯ ಗ್ರಾಮಸಭೆ ಮೂಲ ಉದ್ದೇಶದಂತೆ ಸಾರ್ವಜನಿಕರಿಗೆ ಹೆಚ್ಚಿನ ಸಂಖ್ಯೆಯಲ್ಲಿ ಎಲ್ಲಾ ಸಾಮಾಜಿಕ ವರ್ಗಗಳು ಭಾಗವಹಿಸುವಂತಹ ವಾತಾವರಣವನ್ನು ಪಂಚಾಯಿತಿಗಳು ಕಲ್ಪಿಸಬೇಕು.

* ಗ್ರಾಮ ಹಿಂದುಳಿದ ಮತ್ತು ತಳಸಮುದಾಯಗಳ ಭಾಗವಹಿಸುವಿಕೆ ದೃಷ್ಟಿಯಲ್ಲಿಟ್ಟು ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯನ್ನು ಕಡ್ಡಾಯವಾಗಿ ನಡೆಸಬೇಕು.

* ಗ್ರಾಮಸ್ಥರಿಗೆ ಗ್ರಾಮಪಂಚಾಯಿತಿ ಆಡಳಿತ ಪಾರದರ್ಶಕವಾಗಿದೆ ಎಂಬ ನಂಬಿಕೆಯನ್ನು ಮೂಡುವಂತೆ ಪ್ರತಿ ವರ್ಷ ಸಕಾಲಕ್ಕೆ ಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯನ್ನು ನಡೆಸಬೇಕು.

* "ಪಂಚಾಯಿತಿ ಜಮಾಬಂದಿ ಅಧಿನಿಯಮ ೨೦೦೪"ರ ಪ್ರಕಾರ ನಿಯಮಾನುಸಾರವಾಗಿ ಪ್ರತಿ ಗ್ರಾಮಪಂಚಾಯಿತಿಗಳು ಸಾಮಾಜಿಕ ಜಮಾಬಂದಿ ಸಭೆಯನ್ನು ಕಡ್ಡಾಯವಾಗಿ ನಡೆಸಬೇಕು.

* ಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಸಾರ್ವಜನಿಕರು ಸ್ವಹಿತಾಸಕ್ತಿಯಿಂದ ಭಾಗವಹಿಸಬೇಕು. ಸಭೆಯ ಉದ್ದೇಶ ಮತ್ತು ಪೂರ್ವಾಪರಗಳನ್ನು ಆಧರಿಸಿಕೊಂಡು ಸಭೆಯಲ್ಲಿ ಭಾಗವಹಿಸಿ ಸಕ್ರಿಯ ಸದಸ್ಯತ್ವ ಪ್ರತಿನಿಧಿಸಬೇಕು.

* ಪಂಚಾಯತ್‌ರಾಜ್ ಇಲಾಖೆ ಮತ್ತು ಮೇಲ್ವಿಚಾರಣಾ ಕಚೇರಿಗಳಿಂದ ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಗೆ ಬೇಕಾದ ಆರ್ಥಿಕ ಮತ್ತು ಇತರೆ ಸಂಪನ್ಮೂಲಗಳನ್ನು ನೀಡಿ ಸಹಕರಿಸಬೇಕು.

* ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಗಳನ್ನು ಗ್ರಾಮಪಂಚಾಯಿತಿಯ ಸಮಸ್ಯೆ ಗಳನ್ನು ಗುರುತಿಸುವ ಮತ್ತು ಗ್ರಾಮಪಂಚಾಯಿತಿ ಆಡಳಿತ ಸುಧಾರಿಸುವಂಥ ಸಭೆಗಳು ನಡೆಯಬೇಕು.

* ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಹಿಂದುಳಿದ ತಳಸಮುದಾಯವರಿಗೆ ಜಾರಿಯಲ್ಲಿರುವ ಯೋಜನೆಗಳ ವಿವರ, ಅನುದಾನ ಮತ್ತು ಅವಶ್ಯಕತೆಗಳನ್ನು ತಿಳಿಯ ಪಡಿಸಬೇಕು.

* ಗ್ರಾಮಪಂಚಾಯಿತಿ ಸಭೆಗಳ ಪ್ರಚಾರವು ಅನಕ್ಷರಸ್ಥ ವಿದ್ಯಾವಂತರಿಗೂ ಮುಟ್ಟುವ ರೀತಿಯಲ್ಲಿ ಪ್ರಚಾರವನ್ನು ಕೈಗೊಳ್ಳಬೇಕು.

* ಮಹಿಳೆಯರಿಗೆ ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿಯ ಸ್ವರೂಪದ ಅರಿವು ಸಭೆಗಳ ಅವಶ್ಯಕತೆ ತಿಳಿಹೇಳುವಂಥ ಕೆಲಸವನ್ನು ಗ್ರಾಮಪಂಚಾಯಿತಿ ಸಿಬ್ಬಂದಿಯವರು ಮಾಡಬೇಕು.

* ಸಾರ್ವಜನಿಕರ ಸಭೆ ಸೇರಲು ಅನುಕೂಲವಾಗುವಂತಹ ಸ್ಥಳಗಳಲ್ಲಿ ಸಭೆ ನಡೆಸಬೇಕು. ಎಲ್ಲಾ ಗ್ರಾಮಸ್ಥರು ಸೇರಲು ಅವಕಾಶವಾಗುವಂಥ ಸಮಯದಲ್ಲಿ ಸಭೆ ನಿರ್ವಹಿಸಬೇಕು.
* ಗ್ರಾಮಪಂಚಾಯಿತಿ ಸಾಮಾಜಿಕ ಜಮಾಬಂದಿ ಸಭೆಯಲ್ಲಿ ಸಾರ್ವಜನಿಕರಿಗೆ ಮುಕ್ತವಾಗಿ ಮಾಹಿತಿ ಪಡೆಯುವ ಮತ್ತು ಪ್ರಶ್ನಿಸಿರುವ ಅವಕಾಶಗಳನ್ನು ಕಲ್ಪಿಸಬೇಕು.

## ಪರಾಮರ್ಶನ ಗ್ರಂಥಗಳು


೧. ಅಜಯ ಕುಮಾರ್ ಜೈನ್(ಸಂ) **ಹಶಾತ್ ಅಬ್ದುಲ್, ಗೌರ್‌ನೆನ್ಸಿ, ಸೌಥ್ ಏಷಿಯನ್ ಫರ್ಸ್ಪೆಕ್ಟೀವ್,** ಪಬ್ಲಿಕೇಷನ್ ನ್ಯೂ ಡೆಲ್ಲಿ, ೨೦೦೨

೨. ಇಂದಿರಾ ರಾಜ್ ರಾಮನ್, **ದಕ್ಷಿಣ ಸಿಹ್ನಾ, ಫಂಕ್ಷನ್ ಡಿಲ್ಯೂಷನ್ ಮಾಂ ರೂರಲ್ ಲೋಕಲ್ ಬಾಡಿಸ್ ಇನ್ ಪೂರ್ ಸ್ಟೇಟ್ಸ್,** ಎಕಾನಮಿಕ್ಸ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ ಜೂನ್, ೨೦೦೭

೩. **ಕರ್ನಾಟಕ ರಾಜ್ಯ ಪತ್ರ ಭಾಗ–೪ಎ,** ಸಂಪುಟ ೧೪೭ ಗುರುವಾರ ಜೂನ್ ಸಂಚಿಕೆ ೨೩,೨೦೧೧.

೪. **ಕರ್ನಾಟಕ ಪರಂಪರೆ ಸಂಪುಟ–೨ ಮಧ್ಯಕಾಲೀನ ಮತ್ತು ಆಧುನಿಕ ಕಾಲ ವಿಜಯನಗರಕಾಲ ದವರೆಗೂ,** ಸಾಹಿತ್ಯ ಸಂಸ್ಕೃತಿ ಅಭಿವೃದ್ಧಿ ಇಲಾಖೆ ಮೈಸೂರು ಸರ್ಕಾರ ಬೆಂಗಳೂರು, ೧೯೭೦.

೫. **ಕರ್ನಾಟಕ ರಾಜ್ಯಪತ್ರ, ಅಧಿಕೃತ ಪ್ರಕಟಣೆ,** ಸಂಪುಟ–೧೪೭, ಸಂಚಿಕೆ, ೨೩, ಗುರುವಾರ, ಭಾಗ–೪ ಎ (ಬೆಂಗಳೂರು) ಕರ್ನಾಟಕ ಸರ್ಕಾರ, ಬೆಂಗಳೂರು, ೨೦೧೨

೬. ಕರಿಬಸಪ್ಪ ಎ., **ಬಳ್ಳಾರಿ ಜಿಲ್ಲೆಯ ಐತಿಹ್ಯಗಳು,** ಪಿ.ಎಚ್.ಡಿ ಮಹಾಪ್ರಬಂಧ ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವ ವಿದ್ಯಾಲಯ ಹಂಪಿ, ೨೦೦೩.

೭. **ಕರ್ನಾಟಕ ಕೈಪಿಡಿ,** ಕರ್ನಾಟಕ ಗ್ಯಾಜೆಟಿಯರ್ ಇಲಾಖೆ ಕಚೇರಿ ಭವನ, ಪ್ರಕಟಣೆ ಕರ್ನಾಟಕ ಸರ್ಕಾರ, ೧೯೯೬

೮. ಕುಂಬಾಸ, ಹರಪನಹಳ್ಳಿ, **ಬಳ್ಳಾರಿ ಜಿಲ್ಲಾ ಸಾಂಸ್ಕೃತಿಕ ದರ್ಶನ ಸಂಶೋಧನಾ ಲೇಖನಗಳು,** ಶ್ರೀ ಮಾಲತೇಶ ಪ್ರಕಾಶನ, ಕುಂಚೂರು, ೧೯೯೦

೯. ಗೋಪಾಲರಾವ್ ಎಚ್.ಎಸ್., **ಕರ್ನಾಟಕದ ಏಕೀಕರಣ ಇತಿಹಾಸ,** ನವಕರ್ನಾಟಕ ಪಬ್ಲಿಕೇಷನ್, ಬೆಂಗಳೂರು, ೧೯೯೬

೧೧. ಚಂದ್ರ ಪೂಜಾರಿ ಎಂ., **ಸಮಾಜ ಸಂಶೋಧನೆ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೧

೧೧. ಚಂದ್ರ ಪೂಜಾರಿ ಎಂ., **ಅಭಿವೃದ್ಧಿ ಅಧ್ಯಯನ,** ಸಂಪುಟ-೭, ಸಂಚಿಕೆ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯

೧೨. ಚಂದ್ರ ಪೂಜಾರಿ ಎಂ., ಸಂಶೋಧನೆ ಏನು? ಏಕೆ? ಹೇಗೆ? ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯

೧೩. ಚಂದ್ರ ಪೂಜಾರಿ ಎಂ., **ಅಭಿವೃದ್ಧಿ ಮತ್ತು ರಾಜಕೀಯ,** ಪಲ್ಲವ ಪ್ರಕಾಶನ, ಚನ್ನಪಟ್ಟಣ, ೨೦೧೪

೧೪. ಚಂದ್ರ ಪೂಜಾರಿ ಎಂ., **ದೇಶಿಯತೆಯ ನೆರಳಲ್ಲಿ ವಿಕೇಂದ್ರೀಕರಣ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮

೧೫. ಚಂದ್ರ ಪೂಜಾರಿ ಎಂ.(ಸಂ), ಅಭಿವೃದ್ಧಿ ಅಧ್ಯಯನ ಸಂಪುಟ-೮, ಸಂಚಿಕೆ-೧, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

೧೬. ಚಂದ್ರ ಪೂಜಾರಿ ಎಂ. **ಜನಾಯೋಜನೆ ಕರ್ನಾಟಕದ ಅನುಭಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೧೭. ಚಂದ್ರ ಪೂಜಾರಿ ಎಂ. **ಸಂಶೋಧನಾ ಪ್ರಸ್ತಾವ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮

೧೮. ಚಂದ್ರಶೇಖರ ಟಿ.ಆರ್., **ಜನರನ್ನು ಒಳಗೊಳ್ಳುವ ಅಭಿವೃದ್ಧಿ ಹೈದರಾಬಾದ್-ಕರ್ನಾಟಕ ಪ್ರದೇಶ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯

೧೯. ಚಂದ್ರಶೇಖರ್ ಟಿ.ಆರ್. ಮತ್ತು ಚಂದ್ರಪೂಜಾರಿ ಎಂ., **ಅಭಿವೃದ್ಧಿ ಅಧ್ಯಯನ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

೨೦. ಚಂದ್ರಶೇಖರ್ ಟಿ.ಆರ್. **ಕರ್ನಾಟಕದಲ್ಲಿ ಸಾಕ್ಷರತೆಯ ಲಿಂಗಸಂಬಂಧಿ ಸ್ವರೂಪ,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

೨೧. ಚಂದ್ರಶೇಖರ್ ಟಿ.ಆರ್., ಜನರ **ಯೋಜನೆ ಕರ್ನಾಟಕದ ಅನುಭವಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫

೨೨. ಚಂದ್ರಶೇಖರ್ ಟಿ.ಆರ್., **ಕರ್ನಾಟಕದಲ್ಲಿ ಪ್ರಾದೇಶಿಕ ಅಸಮಾನತೆ ಮತ್ತು ಉನ್ನತಾಧಿಕಾರ ಸಮಿತಿ ವರದಿ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮

೨೩. ಚಂದ್ರಶೇಖರ್ ಟಿ.ಆರ್., **ಲಿಂಗಸಂಬಧಿ ಅಭಿವೃದ್ಧಿ ಅಧ್ಯಯನ ಪ್ರಬಂಧಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೮

೨೪. ಚಂದ್ರಶೇಖರ್ ಟಿ.ಆರ್., **ಕರ್ನಾಟಕ ಜನಗಣತಿ-೨೦೧೧**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨

೨೫. ಚಂದ್ರಶೇಖರ ಕೆ., **ಗ್ರಾಮೀಣ ಅಭಿವೃದ್ಧಿಯಲ್ಲಿ ಗ್ರಾಮ ಸಭೆ ಮತ್ತು ಗ್ರಾಮ ಪಂಚಾಯಿತಿಗಳ ಪಾತ್ರ**, ವಿನೂತ ಪಬ್ಲಿಕೇಷನ್ಸ್, ಭದ್ರಾವತಿ, ೨೦೦೩

೨೬. ಚಂದ್ರಶೇಖರ್ ಟಿ.ಆರ್., **ಅಮರ್ತ್ಯಸೇನ್ ಅಭಿವೃದ್ಧಿ ಅಧ್ಯಯನಗಳು**, ನೇತ್ರಾ ಪ್ರಿಂಟರ್ಸ್, ಬೆಂಗಳೂರು, ೧೯೯೯.

೨೭. ಚಿನ್ನಸ್ವಾಮಿ ಸೋಸಲೆ ಎನ್., **ವಸಾಹತು ಕಾಲಘಟ್ಟದ ಮೈಸೂರು ಸಂಸ್ಥಾನ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

೨೮. ಜನಾರ್ಧನ, **ಅಂಗನವಾಡಿ ಕೇಂದ್ರಗಳು ಗ್ರಾಮೀಣ ಅಭಿವೃದ್ಧಿ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೯

೨೯. **ಪಂಚಾಯಿತಿ ಅಭಿವೃದ್ಧಿ ಅಧಿಕಾರಿಗಳಿಗೆ ಪಂಚಾಯತ್‌ರಾಜ್ ವ್ಯವಸ್ಥೆ ಕುರಿತ ಬುನಾದಿ ತರಬೇತಿ ಕೈಪಿಡಿ, ಭಾಗ-೧**, ಅಬ್ದುಲ್ ನಜೀರ್ ಸಾಬ್ ರಾಜ್ಯ ಗ್ರಾಮೀಣಾಭಿವೃದ್ಧಿ ಸಂಸ್ಥೆ ಲಲಿತ ಮಹಲ್ ರಸ್ತೆ, ಮೈಸೂರು, ೨೦೧೩-೧೪

೩೦. ಪ್ರತ್ಯೂಸ್ನ ಪಾಟ್ನಯ್ಕ, **ಅಪರ್‌ಮೇಟಿವ್ ಆಕ್ಷನ್ ಆ್ಯಂಡ್ ರೆಪ್ರಜೆಂಟೇಷನ್ ಆಫ್ ವೀಕರ್ ಸೇಕ್ಷನ್ ಪಾರ್ಟಿಸಿಪೇಷನ್ ಆ್ಯಂಡ್ ಅಕೌಂಟಬಿಲಿಟಿ ಇನ್ ಒರಿಸ್ಸಾ ಪಂಚಾಯತ್ಸ್**, ಎಕಾನಮಿಕ್ ಆ್ಯಂಡ್ ಪೊಲಿಟಿಕಲ್ ವೀಕ್ಲಿ, ಅಕ್ಟೋಬರ್ ೨೭, ೨೦೦೫

೩೧. ಪುಟ್ಟಯ್ಯ ಬಿ.ಎಂ., **ಸಂಶೋಧನೆ ತಾತ್ವಿಕ ಆಯಾಮಗಳು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೦

೩೨. ಬರಗೂರು ರಾಮಚಂದ್ರಪ್ಪ(ಸಂ), **ಕರ್ನಾಟಕ ಸಂಗಾತಿ**, ಕನ್ನಡ ಅಭಿವೃದ್ಧಿ ಪ್ರಾಧಿಕಾರ, ವಿಧಾನಸೌಧ, ಬೆಂಗಳೂರು, ೨೦೦೨-೨೦೧೩.

೩೩. ಬಸವರಾಜಪ್ಪ ಎಚ್.ಈ., **ಬಳ್ಳಾರಿ ಜಿಲ್ಲೆಯ ಚಿತ್ರಕಲೆ,** ಮಂಟಪಮಾಲೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬

೩೪. ಬಡ್ಡಿ ಆಕಳವಾಡಿ ಎಂ.ಎಂ., **ಕರ್ನಾಟಕ ಪಂಚಾಯತ್ ರಾಜ್ ಅಧಿನಿಯಮ ೧೯೯೩,** ಬುಕ್ ಡಿಪೊ ಪ್ರಕಾಶಕರು ೧೯೯೩

೩೫. **ಬಳ್ಳಾರಿ ಜಿಲ್ಲೆಯ ಸಾಮಾಜಿಕ ಆರ್ಥಿಕ, ಅವಲೋಕನ ವರದಿ ೨೦೧೧-೧೨ನೇ, ಪ್ರಕಟಣೆ:** ಜಿಲ್ಲಾ ಸಾಂಖ್ಯಿಕ ಅಧಿಕಾರಿಗಳ ಕಚೇರಿ, ಬಳ್ಳಾರಿ, ಕರ್ನಾಟಕ ಸರ್ಕಾರ, ೨೦೧೨

೩೬. ಬಳ್ಳಾರಿ ಜಿಲ್ಲೆಯ ೨೦೧೧-೧೨ನೇ ಸಾಲಿನ ಜಿಲ್ಲೆಯ ಸಾಮಾಜಿಕ, ಆರ್ಥಿಕ, ಅವಲೋಕನ ವರದಿ, ಜಿಲ್ಲಾಧಿಕಾರಗಳ ಕಛೇರಿ ಜಿಲ್ಲಾಧಿಕಾರಿಗಳ ಕಛೇರಿ ಅವರಣ, ಬಳ್ಳಾರಿ, ೨೦೧೨.

೩೭. **ಬಳ್ಳಾರಿ ಜಿಲ್ಲೆ ಅಂಕಿ-ಅಂಶಗಳ ನೋಟ ೨೦೧೨-೧೩,** ಜಿಲ್ಲಾ ಸಾಂಖ್ಯಿಕ ಅಧಿಕಾರಗಳ ಕಛೇರಿ ಬಳ್ಳಾರಿ,೨೦೧೩.

೩೮. ಭೈರಪ್ಪ ಕೆ., **ಸಮಗ್ರ ಗ್ರಾಮೀಣ ಸಮಾಜ ಮತ್ತು ಅಭಿವೃದ್ಧಿ,** ಸಪ್ನ ಬುಕ್ ಹೌಸ್, ೨೦೦೬

೩೯. ಮಹದೇವ ಸಿ., ಎ. ಸುಬ್ಬಣ್ಣ ರೈ ಮಾಧವ ಪೆರಾಜ್, **ಹೊಸಪೇಟೆ ತಾಲ್ಲೂಕು ದರ್ಶನ** ಪ್ರಸಾರಾಂಗ ಕನ್ನಡ ವಿಶ್ವ ವಿದ್ಯಾಲಯ, ಹಂಪಿ, ೨೦೦೨.

೪೦. **ಮದ್ರಾಸ್ ಡಿಸ್ಟ್ರಿಕ್ ಗ್ಯಾಜೆಟಿಯರ್,** ಬಳ್ಳಾರಿ ಬೈಫ್ರೋನ್ಸಿ ಇಂಡಿಯನ್ ಸಿವಿಲ್ ಸರ್ವಿಸ್ **ಮದ್ರಾಸ್,** ಪ್ರಿಂಟಡ್ ಬೈ ದಿ ಸೂಪರ್‌ಡೆಂಟ್ ಗೌರ್ನಮೆಂಟ್ ಪ್ರೆಸ್, ೧೯೦೪.

೪೧. **ಮಾನವ ಅಭಿವೃದ್ಧಿ ವರದಿ-೨೦೦೫,** ಕರ್ನಾಟಕ ಸರ್ಕಾರ, ವಿನ್ಯಾಸ ಮತ್ತು ಮುದ್ರಣ ನ್ಯೂಕಾನ್ಸೆಪ್ಟ್ ಇನ್‌ಫರ್ಮಾರ್ಮೇಶನ್ ಸಿಸ್ಟಮ್ ಲಿಮಿಟೆಡ್ ನವದೆಹಲಿ, ೨೦೦೬.

೪೨. ಮಾಲತಿ ದಾಸ್, ದಿವಾಕರರಾವ ಎಂ.ಎಚ್.(ಸಂ) **ಕರ್ನಾಟಕ ಮಾನವ ಅಭಿವೃದ್ಧಿ ವರದಿ** ೨೦೦೫, ಪ್ರಕಟಣೆ ಯೋಜನಾ ಮತ್ತು ಸಾಂಖ್ಯಿಕ ಇಲಾಖೆ, ಕರ್ನಾಟಕ ಸರ್ಕಾರ, ೨೦೦೫

೪೩. ದೇವಿಪ್ರಸಾದ ಚಟ್ಟೋಪಾಧ್ಯಾಯ(ಸಂಗ್ರಹಾನುವಾದ), ಜಿ.ರಾಮಕೃಷ್ಣ, **ಲೋಕಾಯತ,** ನವಕರ್ನಾಟಕ ಪ್ರಕಾಶನ, ಬೆಂಗಳೂರು, ೨೦೧೧

೪೪. ನಾಗಯ್ಯ ಜೆ.ಎಂ., **ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ,** ಲೋಹಿತ ಪ್ರಕಾಶನ, ಬಳ್ಳಾರಿ, ೨೦೦೨

೪೫. ನಾರಾಯಣ ಎಂ., **ಗ್ರಾಮೀಣ ಸಮಾಜಶಾಸ್ತ್ರ,** ಅಖಿಲಾ ಏಜೇನ್ಸಿಸ್, ಲಕ್ಷ್ಮಿ ಪಬ್ಲಿಕೇಷನ್ ಹೌಸ್, ಮೈಸೂರು, ೨೦೦೬.

೪೬. ರವೀಂದ್ರನಾಥ ಕೆ., ಬಸವರಾಜ ಸಬರದ(ಪ್ರಸಂ), **ಜಿಲ್ಲಾ ದರ್ಶನ: ಸಂಪುಟ, ಬಳ್ಳಾರಿ ಜಿಲ್ಲಾ ದರ್ಶನ**, ಪ್ರಸಾರಾಂಗ, ಗುಲ್ಬರ್ಗಾ ವಿಶ್ವವಿದ್ಯಾಲಯ, ೨೦೦೫

೪೭. ರಮೇಶ್ ಕುಮಾರ್ ಜಿ.ಎಂ., **ಲೋಕಲ್ ಗೌರ್ನಮೆಂಟ್ ಫರ್ ಗುಡ್ ಗೌರ್‌ನೆನ್ಸಿ ಎಕ್ಸ್‌ಪೀರಿಯನ್ಸ್ ಇನ್ ಆಂಧ್ರಪ್ರದೇಶ**, ಗೌರ್‌ನೆನ್ಸಿ ಸೌಥ್ ಎಷಿಯನ್ ಫರ್ಸ್ಪೆಕ್ಟಿವ್ ಪಬ್ಲಿಕೇಷನ್, ೨೦೦೨

೪೮. ರಾಜಾರಾಮ ಹೆಗಡೆ, **ವಸಾಹತುಪೂರ್ವ ಕರ್ನಾಟಕದ ರಾಜ್ಯಪದ್ಧತಿ**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩

೪೯. ರೊಮಿಲಾ ಥಾಪರ್(ಅನು), **ಭಾರತದ ಇತಿಹಾಸ**, ಸದಾನಂದ ಕನವಳ್ಳಿ(ಮೂ), ಕನ್ನಡ ಅಧ್ಯಯನ ಸಂಸ್ಥೆ ಮೈಸೂರು, ಮೈಸೂರು ವಿಶ್ವವಿದ್ಯಾನಿಲಯ, ೧೯೭೯.

೫೦. ವಾಸುದೇವ ಬಡಿಗೇರ, **ಬಳ್ಳಾರಿ ಪರಿಸರದ ಸಾಂಸ್ಕೃತಿಕ ಪರಂಪರೆ, ಭಾಗ-೧**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೧೨

೫೧. ವಿಜಯ್ ಪೂಣಚ್ಚ ತಂಬಂಡ(ಪ್ರಸಂ), ಚೆನ್ನಸ್ವಾಮಿ ಸೋಸಲೆ(ಸಂ), **ಸಮಕಾಲೀನ ಕರ್ನಾಟಕ ಚರಿತ್ರೆ ವಿವಿಧ ಆಯಾಮಗಳು**, ಚರಿತ್ರೆ ಸಂಪುಟ-೬, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೭

೫೨. ವಿರೂಪಾಕ್ಷಿ ಪೂಜಾರಹಳ್ಳಿ, **ಬಳ್ಳಾರಿ ಜಿಲ್ಲೆಯ ಪಾಳೆಯಗಾರರು**, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೪

೫೩. ವೆಂಕಟೇಶ್ ನಾಯಕ್(ಸಂ), **ಮಾಹಿತಿ ಹಕ್ಕು ಕಾನೂನು-೨೦೦೫, ಬಳಸುವುದು ಹೇಗೆ?** ಮುರಳಿಧರ ವೈ.ಜಿ(ಅನು) ಕಾಮನ್ ವೆಲ್ತ್ ಹ್ಯೂಮನ್ ರೈಟ್ ಇನಿಶಿಯೆಟಿವ್ ನವದೆಹಲಿ, ಗ್ರಾಹಕರ ಹಕ್ಕು, ಶಿಕ್ಷಣ ಮತ್ತು ಜಾಗೃತಿ ವೇದಿಕೆ ಕ್ರಿಯೇಟ್, ಬೆಂಗಳೂರು, ೨೦೦೯

೫೪. **ಸಂಗನಕಲ್ಲು ಗ್ರಾಮದ ದಾಖಲೆಗಳು**

೫೫. ಸದಾಶಿವ ಕೆ., **ಸಮಗ್ರ ಭಾರತ ಇತಿಹಾಸ**, ಪ್ರಿಯದರ್ಶಿನಿ, ಮೈಸೂರು, ೨೦೦೬.

೫೬. ಸಮೇಲ್ ಪೌಲ್, **ಪಬ್ಲಿಕ್ ಸ್ಟಡೀಸ್ ಔಟ್‌ಕಮ್ಸ್ ಆ್ಯಂಡ್ ಆಕೌಟಂಬಿಲಿಟಿ ಸಿಟಿಜನ್ ರಿಪೋರ್ಟ್ ಕಾರ್ಡ್ ಆಸ್ ಎ ಕ್ಯಾಪಿಟಲಿಸ್ಟ್ ಫರ್ ಪಬ್ಲಿಕ್ ಆಕ್ಷನ್**, ಎಕನಮಿಕ್ ಆ್ಯಂಡ್ ಪೋಲಿಟಿಕಲ್ ವೀಕ್ಲಿ ಜನವರಿ ೨೦೦೬.

